ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕ್ಷೌರ ಮಾಡುತ್ತಾ ಕ್ಷೌರಿಕ ಕೇಳಿದ್ದ "ಓಹೋ! ಜೈಲಿನಿಂದ ಬರುತ್ತಾ ದ್ದೀಯೋ?"

ರಾಜು ಸುತ್ತಲೂ ಕಣ್ಣನ್ನು ಹೊರಳಿಸಿದ್ದನೇ ಹೊರತು ಮಾತನಾಡಿರ-ಲ್ಲ. ಪ್ರಶ್ನೆಯಿಂದ ಕೋಪ ಬಂದಿದ್ದರೂ ಕುತ್ತಿಗೆಯ ಹತ್ತಿರ ಕ್ಷೌರಿಕನ ತ್ತಿ ಇದ್ದಾಗ ಆ ಕೋಪವನ್ನು ತೋರಿಸಿಕೊಳ್ಳುವುದು ಯುಕ್ತವಾಗಿರ-ಲ್ಲ!

"ಈಗ ತಾನೇ ಬರುತ್ತಾ ಇದ್ದಿಯೋ?" ಕ್ಷೌರಿಕ ಬಿಡಲಿಲ್ಲ. ಅವನ ೕಲೆ ಕೋಪ ಮಾಡಿಕೊಂಡು ಪ್ರಯೋಜನವಿಲ್ಲವೆನಿಸಿತು ರಾಜುವಿಗೆ. ನುಭವವೇ ಮೂರ್ತಿವೆತ್ತಂತಿದ್ದ ಅವನ ಹತ್ತಿರ ಸುಳ್ಳು ಹೇಳುವುದಕ್ಕಾ-ರೂ ಆಗುತ್ತದೆಯೇ?"

"ನಿನಗೆ ಹೇಗೆ ಗೊತ್ತು?" ಎಂದ ರಾಜು.

"ಇಪ್ಪತ್ತು ವರುಷಗಳಿಂದ ಇಲ್ಲಿ ಕೂತು ಇಪ್ಪತ್ತು ಲಕ್ಷ ಜನರಿಗೆ ಕ್ಷೌರ ಮಾಡಿದ್ದೇನೆ. ಜೈಲಿನ ಗೇಟು ದಾಟಿದರೆ ಇದೇ ಮೊದಲನೆ ಅಂಗಡಿ ನ್ನೋದನ್ನ ನೋಡಲಿಲ್ಲವೇ ನೀನು? ಸರಿಯಾದ ಕಡೆ ಅಂಗಡಿ ಇಟ್ಟರೆ ದೃಷ್ಟ ಖುಲಾಯಿಸ್ತೋದೇನೂ ಆಶ್ಚರ್ಯವಲ್ಲ. ಆದರೆ ನಮ್ಮ ಪಾಡಿಗೆ ಾವಿರೋಕೆ ಜನ ಬಿಡೋಲ್ಲ ನೋಡು. ನನ್ನ ಮೇಲೆ ಬಾಕಿಯವರಿಗೆಲ್ಲಾ ಣ್ಣು."

"ಜೈಲಿನ ಒಳಗೆ ನೀನು ಹೋಗೋಲ್ಲವೇ?"

"ಇಲ್ಲ. ಒಳಗಿರೋರು ಹೊರಗೆ ಬಂದಾಗ ಮಾತ್ರ ನನ್ನ ಕೆಲಸ. ಲ್ಲಿಗೆ ಹೋಗೋಕೆ ನನ್ನ ಅಣ್ಣನ ಮಗ ಇದ್ದಾನೆ. ಅವನ ಜೊತೆ ನಾನೂ ೋದರೆ ಚೆನ್ನಾಗಿರೋಲ್ಲ. ಅದೂ ಅಲ್ಲದೆ ಜೈಲಿನೊಳಗೆ ದಿನಾ ಹೋಗೋಕೆ ನಗೆ ಇಷ್ಟವಿಲ್ಲ."

"ಅಂತಹಾ ಕೆಟ್ಟ ಸ್ಥಳವೇನೂ ಅಲ್ಲ."

ನಗೆ ಬೇಕಾದರೆ ನೀನು ಹೋಗಿರು..........ಅದು ಸರಿ. ನೀನು ಹೋದೆ?.... ....ಪೋಲೀಸಿನೋರು ಏನು ಹೇಳಿದರು?"

ಪರೆತ್ತಬೇಡ" ಎಂದ ರಾಜು. ಆಮೇಲೆ ಮೌನ.

ರಿಕನಿಗೆ ಅಷ್ಟಕ್ಕೆ ತೃಪ್ತಿಯಾಗಲಿಲ್ಲ. ಜೀವಮಾನ ಪೂರಾ

N3.6 AR mM

ಒರಟು ಮನುಷ್ಯರ ಜೊತೆಯಲ್ಲೇ ಕಳೆದದ್ದರಿಂದ ಅವನ ವ್ಯಕ್ತಿತ್ವ
ಒರಟಾಗಿತ್ತು.

"ಹದಿನೆಂಟು ತಿಂಗಳೋ ಅಥವಾ ಇಪ್ಪತ್ತನಾಲ್ಕೋ?"

ರಾಜುವಿಗೆ ನಿಜವಾಗಿಯೂ ಅವನ ಬಗ್ಗೆ ಮೆಚ್ಚಿಕೆ ಮೂಡಿತು. ಅಂಥ
ವನ ಹತ್ತಿರ ಕೋಪ ಮಾಡಿಕೊಂಡು ಪ್ರಯೋಜನವಿಲ್ಲ.

"ಎಲ್ಲ ವಿಷಯ ತಿಳಿದುಕೊಂಡು ಸುಮ್ಮಸುಮ್ಮನೆ ಯಾಕೆ ಪ್ರ
ಕೇಳುತ್ತೀಯಾ?"

"ನಿನ್ನ ಬಾಯಿಂದಲೇ ಬರಲಿ ಅಂತ ಅಷ್ಟೆ. ನಿನ್ನ ಮುಖ ನೋಡಿದ
ತಿಳಿಯೋದಿಲ್ವೆ..........ಎರಡು ವರುಷದವನು ಅಂತಾ. ಆದ್ದರಿಂದಲೇ ಗೊತ್ತ
ನೀನು ಖೂನಿಗಾರನಲ್ಲ ಅಂತ."

"ನಿನಗೆ ಹೇಗೆ ಗೊತ್ತು?"

"ಅಷ್ಟೂ ಗೊತ್ತಾಗೋದಿಲ್ಲವೇ? ಕೊಲೆ ಮಾಡಿ ಅದಕ್ಕೆ ಸರಿಯಾ
ಸಾಕ್ಷಿ ಸಿಗದೇ ಇದ್ದರೆ ಏಳು ವರುಷಾನೊ; ಎಂಟು ವರುಷಾನೊ ಜೈಲುವಾಸ
ಅಂಥಹವರ ಮುಖದ ಕಳೆಯೇ ಬೇರೆ........"

"ಹಾಗಾದರೆ ನಾನು ಮಾಡದೆ ಇರೋ ಕೆಲಸಗಳೇನು?"

"ನೀನೇನೂ ಅಂಥಹ ಭಾರೀ ಮೋಸಗಾರನಲ್ಲ. ಎಲ್ಲೋ ಅಲ್ಲಿ ಇ
ಸ್ವಲ್ಪ ಸಣ್ಣ ಕಳ್ಳತನ ಮಾಡಿರಬಹುದು ಅಷ್ಟೆ."

"ಆಮೇಲೆ?"

"ನೀನು ಯಾರನ್ನೂ ಹಾರಿಸಿಕೊಂಡು ಹೋಗಿಲ್ಲ. ಮನೆ-ಮಠಗಳ
ಬೆಂಕಿ ಇಟ್ಟಿಲ್ಲ."

"ಯಾತಕ್ಕೋಸ್ಕರ ನನ್ನನ್ನು ಜೈಲಿಗೆ ಕಳಿಸಿದರೆಂದು ಹೇಳಿಬಿಡ
ಬಾರದೇ? ಬೇಕಾದರೆ ನಾಲ್ಕಾಣೆ ಕೊಡುತ್ತೇನೆ."

"ಇದು ಆಟ ಆಡೋಕೆ ಸಮಯವಲ್ಲ..........ಹೋಗಲಿ ಮುಂದಕ್ಕೆ ಏನ
ಮಾಡಬೇಕು ಅಂತ ಇದ್ದೀಯಾ?"

"ಏನು ಮಾಡಬೇಕೋ ಗೊತ್ತಿಲ್ಲ. ಎಲ್ಲಾದರೂ ಹೋಗಬೇಕು."

"ಪುನಃ ಆ ನಿನ್ನ ಹಳೆಯ ಸ್ನೇಹಿತರ ಜೊತೆಗೇ ಹೋಗಬೇಕು ಅಂ
ಇಷ್ಟವಿದ್ದರೆ ಮಾರ್ಕೆಟ್ಟಿನ ಹತ್ತಿರ ಯಾರ ಜೇಬಿನಲ್ಲಾದರೂ ಕೈ ಹಾಕಿದ

ಸರಿ. ಅಥವಾ ಯಾರ ಮನೆ ಬಾಗಿಲಾದರೂ ತೆಗೆದಿದ್ದರೆ ನೆಟ್ಟಗೆ ಒಳಗೆ ಹೋಗಿ ಏನಾದರೂ ಹರಕು ಮುರುಕು ತೆಗೆದುಕೊಂಡು ಬಂದುಬಿಟ್ಟರೆ ಸರಿ. ಮನೆಯವರು ಪೋಲಿಸ್ನೋರನ್ನ ಕರೀತಾರೆ. ಪೋಲಿಸ್ನೋರು ನಿನ್ನನ್ನ ಆ ನಿನ್ನ ಸ್ನೇಹಿತರ ಹತ್ತಿರ ಸೇರಿಸುತ್ತಾರೆ." "ಅದೇನೂ ಅಂಥಹ ಕೆಟ್ಟ ಸ್ಥಳ-ವೇನಲ್ಲ." ರಾಜು ಮತ್ತೆ ಹಿಂದೆ ಹೇಳಿದ್ದನ್ನೇ ಹೇಳಿದ.

"ಜನಾನೂ ಅಷ್ಟೆ, ತುಂಬಾ ಹೊಂದಿಕೊಂಡು ಹೋಗುತ್ತಾರೆ. ಆದರೆ ಬೆಳಿಗ್ಗೆ ಐದು ಘಂಟೆಗೇ ಎಬ್ಬಿಸಿಬಿಡುತ್ತಾರಲ್ಲ, ಅದೊಂದೇ ಕಷ್ಟ."

"ನಿಜ, ನಿಜ.......ರಾತ್ರಿಯೆಲ್ಲಾ ಅಲೆದಾಡಿ ನಿನ್ನಂತಹವರು ಮನೆಗೆ ಬಂದು ಮಲಗೋ ಹೊತ್ತು ಅದು ಅಲ್ಲವೇ?" ಕ್ಷೌರಿಕನ ಧ್ವನಿಯಲ್ಲಿ ಕುಹಕವಿತ್ತು.

"ಸರಿ........ಆಯಿತು. ಇನ್ನು ಏಳಬಹುದು. ಈಗೇನು ಒಳ್ಳೆ ಮಹಾ-ರಾಜ ಕಂಡಹಾಗೆ ಕಾಣಿಸುತ್ತೀಯ..........." ಕ್ಷೌರಿಕ ರಾಜು ಕುಳಿತಿದ್ದ ಕುರ್ಚಿಯಿಂದ ಸ್ವಲ್ಪ ದೂರ ಹೋಗಿ ಅವನನ್ನೇ ದಿಟ್ಟಿಸಿ ನೋಡಿ ಹೇಳಿದ್ದ.

ಮೆಟ್ಟಲುಮೇಲೆ ಕುಳಿತಿದ್ದ ಆಗಂತುಕ ತನ್ನ ಮುಖವನ್ನು ದಿಟ್ಟಿಸು-ತ್ತಿದ್ದುದು ರಾಜುವಿಗೆ ಸಹಿಸಲಿಲ್ಲ.

"ನನ್ನನ್ನು ಯಾಕೆ ಹಾಗೆ ನೋಡುತ್ತಾ ಇದ್ದೀಯ?"

"ಸುಮ್ಮನೆ ನೋಡಿದೆ ಅಷ್ಟೆ. ಯಾಕೆ ಅಂತ ನನಗೇ ಗೊತ್ತಿಲ್ಲ. ಆದರೆ ನಿಮಗೆ ಹಿಂಸೆ ಕೊಡಬೇಕೂ ಅನ್ನೋದು ನನ್ನ ಉದ್ದಿಶ್ಯವಲ್ಲ ಸ್ವಾಮಿ."

ರಾಜು ಮಧ್ಯದಲ್ಲೇ ಬಾಯಿಹಾಕುವುದರಲ್ಲಿದ್ದ;

"ಬೇರೆ ಎಲ್ಲೂ ಹೋಗೋಕೆ ಜಾಗೆ ಇಲ್ಲದೇ ಇರೋದರಿಂದಲೇ ಇಲ್ಲಿ ಕೂತಿದ್ದೇನೆ ಅಷ್ಟೆ. ಇನ್ನೆಲ್ಲಾದರೂ ಹೋದರೆ ಯಾರಾದರೂ ಕಂಡುಹಿಡಿದು ಬಿಟ್ಟರೆ ಕಷ್ಟ........" ಹೀಗೆಂದು ಹೇಳಬೇಕೆಂದಿದ್ದವನು ಅಷ್ಟರಲ್ಲೇ ತಡೆದ.

ಜೈಲಿನ ಮಾತೆತ್ತಿದರೆ ಆ ಆಗಂತುಕನಲ್ಲಿದ್ದ ಗೌರವಭಾವನೆಗೆ ಮಣ್ಣು ಹಾಕಿದ ಹಾಗಾಗುವುದು ಖಂಡಿತ. ಅದನ್ನೆಲ್ಲಾ ಹೇಳದೇ ಸುಮ್ಮನೇ "ನೀವು ಊಹಿಸಿರುವಂತಹ ಮಹಾನುಭಾವ ನಾನಲ್ಲ. ನಾನೂ ಎಲ್ಲರ ಹಾಗೇ ಮನುಷ್ಯ." ಎಂದು ಹೇಳಬೇಕೆಂದೆನಿಸಿತು. ಅದನ್ನಾದರೂ ಹೇಗೆ ಹೇಳು-

ವುದು ಎಂದು ಯೋಚಿಸುತ್ತಾ ಇರುವಷ್ಟರಲ್ಲೇ ಆಗಂತುಕ ಮಾತಿಗಾರಂಭಿಸಿದ.

"ಸ್ವಾಮಿ........ನನಗೊಂದು ಸಮಸ್ಯೆ......."

"ಏನು ಹೇಳಿ?"........ಒಂದಾನೊಂದು ಕಾಲದಲ್ಲಿ ಪ್ರವಾಸಿಗಳಿಗೆ ಮಾರ್ಗದರ್ಶಿಯಾಗಿ ತನ್ನ ಮಾತೇ ಸರಿ ಎಂದು ಅವರೆದುರಿಗೆ ವಾದಿಸುತ್ತಿದ್ದ ಅವನ ಹಳೆಯ ಮನೋಭಾವ ಅವನಲ್ಲಿ ಈಗ ಮತ್ತೆ ಮೂಡತೊಡಗಿತು.

ಒಂದಾನೊಂದು ಕಾಲದಲ್ಲಿ ಪ್ರವಾಸಿಗಳಿಗೆ ರಾಜು ಮಾರ್ಗದರ್ಶಿಯಾಗಿ ಬರುವನೆಂದರೆ ಅದೇ ಒಂದು ಹಬ್ಬ.

"ರಾಜು ಬಂದರೆ ಸರಿ. ಎಲ್ಲಾ ನೋಡಿದ ಹಾಗೆಯೆ. ಎಲ್ಲ ಸ್ಥಳಗಳನ್ನು ತೋರಿಸಿ ಅವುಗಳ ವಿಚಾರ ಏನೇನು ಹೇಳಬೇಕೋ ಹೇಳಿ ಯಾವ ವಿಧವಾದ ಸಹಾಯ ಬೇಕಾದರೂ ಮಾಡುತ್ತಾನೆ" ಎಂದು ಪ್ರವಾಸಿಗಳು ತಮ್ಮ ತಮ್ಮಲ್ಲೇ ರಾಜುವನ್ನು ಪ್ರಶಂಸಿಸುತ್ತಿದ್ದರು. ಪ್ರವಾಸಿಗಳ ಅಪೇಕ್ಷೆಗಳಲ್ಲಿ, ಚಟುವಟಿಕೆಗಳಲ್ಲಿ ಹೇಗಾದರೂ ತಾನು ಸಿಕ್ಕಿಸಿಕೊಳ್ಳುವುದು ರಾಜುವಿನ ಸ್ವಭಾವ. "ಹಾಗಲ್ಲದೇ ಹೋಗಿದ್ದರೆ"—ಎಷ್ಟೋ ವೇಳೆ ರಾಜು ತನಗೆ ತಾನೇ ಅಂದುಕೊಂಡಿದ್ದಾನೆ.

"ಹಾಗಲ್ಲದೆ ಹೋಗಿದ್ದರೆ ತಾನೂ ಉಳಿದ ಎಷ್ಟೋ ಜನರ ಹಾಗೆ ಯಾವ ವಿಧವಾದ ಪೇಚಾಟಕ್ಕೂ ಸಿಗದೆ ಬದುಕಿ ಬಾಳಬಹುದಾಗಿತ್ತೇನೊ...."

"ರೋಜಿ ಇಲ್ಲದೇ ಹೋಗಿದ್ದರೆ ನನಗೆ ಇಂತಹ ತಾಪತ್ರಯಗಳು ಬರುತ್ತಾನೆ ಇರಲಿಲ್ಲ.............ರೋಜಿ ಅಂತ ಯಾಕಾದರೂ ಹೆಸರಿಟ್ಟುಕೊಂಡಳೊ? ಅವಳೇನೂ ಇಂಗ್ಲೆಂಡಿನಿಂದ ಬಂದವಳಲ್ಲ. ಎಲ್ಲರ ಹಾಗೆ ಅವಳೂ ನಮ್ಮವಳು. ನಮ್ಮ ಹಾಗೆ "ಲಲಿತ" ಅಂತಲೊ "ಮೀನಾ" ಅಂತಲೊ ಹೆಸರಿಟ್ಟುಕೊಂಡಿರಬಾರದಾಗಿತ್ತೆ? ಆದರೆ ಅದೇನು ಖುಷಿಯೊ? ಅಂತೂ ಅವಳ ಹೆಸರು ರೋಜಿ. ಹೆಸರು ಕೇಳಿ ಅವಳು ಫ್ರಾಕ್ ಹಾಕುತ್ತಾ ಇದ್ದಳು ಅಂತ ತಿಳಿಕೊಬೇಡಿ. ಕೂದಲನ್ನೂ ಬಾಬ್ ಮಾಡಿಸಿರಲಿಲ್ಲ. ಭರತನಾಟ್ಯದ ಹುಡುಗಿ ಹೇಗಿರಬೇಕೊ ಹಾಗೆಯೆ ಇದ್ದಳು. ಒಳ್ಳೆ ಜರತಾರಿ ಸೀರೆಗಳನ್ನೆ ಉಟ್ಟುಕೊಳ್ಳುತ್ತಾ ಇದ್ದಳು. ತನ್ನ ಗುಂಗುರು ಕೂದಲನ್ನು ಬಾಚಿ ಜಡೆ ಹಾಕಿ ಹೂವು ಮುಡಿದುಕೊಳ್ಳುತ್ತಾ ಇದ್ದಳು. ಕತ್ತಿಗೆ ಚಿನ್ನದ

ಸರ. ಕಿವಿಗೆ ವಜ್ರದ ಓಲೆ. ಅವಳನ್ನು ಮೊದಲು ಸಲ ನೋಡಿದಾಗಲೇ ಅವಳ ನಾಟ್ಯಕ್ಕೆ ಮನಸೋತೆ. ಅವಳಿಂದ ನಮ್ಮ ಸಂಸ್ಕೃತಿ ಹೇಗೆ ಬೆಳಕಿಗೆ ಬರುತ್ತಾ ಇದೆ ಅಂತ ಅವಳಿಗೆ ಹೇಳಿದಾಗ ಅವಳಿಗಾದ ಆನಂದ ಅಷ್ಟಿಷ್ಟಲ್ಲ.

ಆಮೇಲೆ ನೂರಾರು ಜನ ಅವಳಿಗೆ ಅದನ್ನೇ ಹೇಳಿರಬೇಕು. ಆದರೆ ಅದನ್ನು ಮೊದಲು ಅವಳಿಗೆ ಹೇಳಿದೋನು ತಾನು. ಯಾರಿಗಾದರೂ ಹೊಗಳಿಕೆ ಅಂದರೆ ತಲೆಮೇಲೆ ಎರಡು ಕೊಂಬು ಬರೋದು ಸಹಜ. ಅದರಲ್ಲೂ ನಾಟ್ಯ ಪ್ರವೀಣರಿಗೆ ಕೇಳಬೇಕೆ? ಎಷ್ಟು ಚೆನ್ನಾಗಿ, ಎಷ್ಟು ಸೊಗಸಾಗಿ ಅವರು ತಾಳಕ್ಕೆ ಕಾಲು ಹಾಕಬಲ್ಲರು ಅಂತ ದಿನಕ್ಕೆ ಹತ್ತು ಸಲ ಹೇಳಬೇಕು. ಅವಳ ಗಂಡನಿಂದ ದೂರವಾಗಿ ಯಾವಾಗ ಒಬ್ಬಳೇ ಸಿಕ್ಕಿದರೂ ಸರಿ, ನಾನು ಅವಳನ್ನು ಹೊಗಳದೆ ಇರುತ್ತಾ ಇರಲಿಲ್ಲ. ಅವಳ ಗಂಡನೊ! ಅಬ್ಬಾ, ಶುದ್ಧ ಕಾಡುಮೃಗ; ಮೃಗಕ್ಕಿಂತ ಕಡೆ. ಅವನ ಸಿಸ್ತೋ, ಸಿಂಗಾರವೊ.........ಆಹಾ.........ಒಳ್ಳೆ ಮಾರ್ಕೊಪೋಲೋ ಇದ್ದಹಾಗೆ ಇದ್ದ. ಚಂದ್ರಗ್ರಹಕ್ಕೆ ಹೋಗೋಕೆ ಸಿದ್ಧವಾಗಿರೊ ಅತಿಮಾನವನ ಹಾಗಿದ್ದ. ಆ ದಪ್ಪ ಕನ್ನಡಕ, ತಲೆಮೇಲೆ ಆ ಉಕ್ಕಿನ ಟೋಪಿ.........ಅವನನ್ನ ಮೊದಲನೆ ದಿನ ರೈಲ್ವೆ ನಿಲ್ದಾಣದಲ್ಲಿ ನೋಡಿದಾಗಲೇ 'ಅಂತೂ ನನಗೆ ಒಬ್ಬ ಆಜನ್ಮ ಪ್ರವಾಸಿಯೇ ಸಿಕ್ಕಿದ' ಅನ್ನಿಸಿತು. ಅವನ ಉಡುಪು ನೋಡಿದರೆ ಅವನು ಹುಟ್ಟಿದಾಗಿನಿಂದ ಸಾಯುವ ವರೆಗೂ ಪ್ರವಾಸಿಯೇ ಎನ್ನಬಹುದಾಗಿತ್ತು. ಅಂತಹ ಪ್ರಾಣಿಯ ಪರಿಚಯ ಅಂದರೆ ಮಾರ್ಗದರ್ಶಿಯ ಅದೃಷ್ಟವೇ ಅದೃಷ್ಟ ಅಲ್ಲವೆ?

ಎಲ್ಲಾ ಬಿಟ್ಟು ಮಾರ್ಗದರ್ಶಿ ಯಾಕಾದೆ ಅಂತ ನೀವು ಕೇಳಬಹುದು. ರೈಲ್ವೆ ಸಿಗ್ನಲ್ ಕೊಡೋನು ಆ ಕೆಲಸಕ್ಕೆ ಯಾಕೆ ಹೋಗುತ್ತಾನೊ ಅಂಥದೇ ಕಾರಣಕ್ಕಾಗಿ ನಾನೂ ಮಾರ್ಗದರ್ಶಿಯಾದೆ. ಎಲ್ಲಾ ಬಿಟ್ಟು ರೈಲ್ವೆ ಜನರ ಉದಾಹರಣೇನೇ ಯಾಕೆ ಅಂತ ಕೇಳಬೇಡಿ. ರೈಲಿನ ಜೀವನಕ್ಕೂ ನನಗೂ ಮೊದಲಿನಿಂದ ಗಳಸ್ಯ–ಕಂಠಸ್ಯ. ನಾನು ಚಿಕ್ಕವನಾಗಿದ್ದಾಗ ರೈಲಿನ ಎಂಜಿನ್ನಿನ ಸದ್ದು ಎಂದರೆ ನನಗೆ ಪರಮಾನಂದ ಅದರಿಂದ ಹೊರಗೆ ಬರುತ್ತಿದ್ದ ಹೊಗೆ ನೋಡಿದರಂತೂ ನನಗೆ ಆಗುತ್ತಿದ್ದ ಆನಂದ ಅಷ್ಟಿಷ್ಟಲ್ಲ. ರೈಲು ನಿಲ್ದಾಣವೆಂದರೆ ನನಗೆ ಪ್ರಾಣ. ಸ್ಟೇಷನ್ ಮಾಸ್ಟರನ್ನೊ ಅಥವಾ ಅಲ್ಲಿರುವ

ಕೂಲಿಯವರನ್ನೊ ಬಿಟ್ಟರೆ ಬೇರೆ ಸ್ನೇಹಿತರೇ ಇಲ್ಲ ಎನ್ನಿಸುತ್ತಿತ್ತು. ನಾನು ಬೆಳೆದಿದ್ದೇ ಅವರ ಮಧ್ಯದಲ್ಲಿ. ನಮ್ಮನೆ ಇದ್ದಿದ್ದು ಮಾಲ್ಗುಡಿ ರೈಲ್ವೆ ನಿಲ್ದಾಣದ ಎದುರಿಗೆ. ರೈಲು ನಮ್ಮ ದೇಶಕ್ಕೆ ಬರ್ರೋದಿಕ್ಕೆ ಎಷ್ಟೊ ವರ್ಷಗಳ ಹಿಂದೆ ನಮ್ಮ ತಂದೆ ಆ ಜಾಗದಲ್ಲಿ ಸ್ವಂತ ಕೈಯಿಂದ ಆ ಮನೆ ಕಟ್ಟಿದರಂತೆ. ಊರ ಹೊರಗೆ ಇದ್ದುದರಿಂದ ಸುಲಭ ಬೆಲೆಗೆ ಸಿಕ್ಕಬಹುದು ಅಂತ ಆ ಜಾಗಾನ ಆರಿಸಿಕೊಂಡರು. ತಾವೇ ಪಾಯ ಹಾಕಿ, ಗೋಡೆ ಕಟ್ಟಿ, ಛಾವಣಿ ಹಾಕಿದರು. ಸುತ್ತಲೂ ಪರಂಗಿ ಹಣ್ಣಿನ ಗಿಡ ಬೆಳೆಸಿದರು. ಗಿಡದಲ್ಲಿ ಹಣ್ಣು ಬಿಟ್ಟರೆ ಅವನ್ನ ಹೋಳುಮಾಡಿ ಮಾರುತ್ತ ಇದ್ದರು. ಅಂತೂ ಒಂದು ಹಣ್ಣಿಗೆ ಎಂಟಾಣೆಗೆ ಕಮ್ಮಿ ಇಲ್ಲದೇ ಆದಾಯವಿತ್ತು. ನಮ್ಮ ತಂದೆ ಒಂದು ಚಿಲ್ಲರೆ ಅಂಗಡಿ ಇಟ್ಟಿದ್ದರು. ಪೆಪ್ಪರಮಿಂಟು, ಬಿಸ್ಕತ್ತು, ಬೀಡ, ಹೊಗೆ ಸೊಪ್ಪು........ದಾರೀಲಿ ಹೋಗೋ ಜನ ಕೇಳಬಹುದಾದಂತಹ ಚಿಲ್ಲರೆ ಸಾಮಾನೆಲ್ಲಾ ಅಲ್ಲಿರುತ್ತಿದ್ದವು. ಜನ ಅದನ್ನ "ಗುಡಿಸಿಲಂಗಡಿ" ಅಂತ ಕರೀತ ಇದ್ದರು. ಯಾವಾಗ ನೋಡಿದರೂ ಅಂಗಡಿ ಮುಂದೆ ರೈತರು. ಅಂತೂ ಅಪ್ಪನಿಗೆ ಕೈ ಬಿಡುವೇ ಇರುತ್ತಾ ಇರಲಿಲ್ಲ. ಅಪ್ಪ ಮಧ್ಯಾಹ್ನದ ಊಟಕ್ಕೆ ಮನೆಗೆ ಹೋದಾಗ ಆ ಜಾಗ ನನ್ನದು. ಆದರೆ ಅಪ್ಪ ಮಾತ್ರ ಊಟಕ್ಕೆ ಹೋಗೋದಕ್ಕೆ ಮೊದಲು ನನಗೆ ಎಚ್ಚರಿಕೆ ಹೇಳದೆ ಹೋಗುತ್ತಾ ಇರಲಿಲ್ಲ.

"ನೋಡು, ನಾನು ಬರೋತನಕ ಇಲ್ಲಿ ಕೂತಿರು. ಆದರೆ ದುಡ್ಡು ತಕ್ಕೊಳ್ಳದೆ ಏನಾದರೂ ಕೊಟ್ಟುಬಿಟ್ಟೀಯಾ ಹುಷಾರ್. ಆ ಡಬ್ಬದಲ್ಲಿರೊ ತಿಂಡಿನೆಲ್ಲಾ ಮುಕ್ಕಿಬಿಡಬೇಡ. ಅದು ನಿನಗೆ ತಿನ್ನೋದಿಕ್ಕಲ್ಲ ಇರೋದು. ಮಾರೋದಕ್ಕೆ. ಏನಾದರೂ ಅನುಮಾನ ಬಂದರೆ ನನ್ನ ಕರಿ" ಎಂದು ಅಪ್ಪ ಆ ಕಡೆ ಹೋದರೆ ಈ ಕಡೆ ಒಬ್ಬ ಗಿರಾಕಿ ಆಗಲೆ. ನಾನು ಅಂಗಡಿಯಿಂದಲೇ ಕೂಗುತ್ತಾ ಇದ್ದೆ:

"ಅಪ್ಪಾ, ಹಸಿರು ಪೆಪ್ಪರಮಿಂಟು ಅರ್ಧಾಣೆಗೆಷ್ಟು?" ಮನೆಯೊಳಗಿಂದ ಅಪ್ಪ ಬಾಯಲ್ಲಿ ಅನ್ನದ ತುತ್ತು ಇಟ್ಟುಕೊಂಡೇ ಕೂಗುತ್ತಿದ್ದರು:

"ಅರ್ಧಾಣೆಗೆ ಮೂರು, ಆದರೆ ಮುಕ್ಕಾಲಾಣೆಗೆ ಬೇಕಾದರೆ"........ ಅಪ್ಪ ಸೂಚಿಸುತ್ತಿದ್ದ ಪರಿಹಾರ ನನಗೆ ತಿಳಿಯುತ್ತಿರಲಿಲ್ಲ. ನಾನು ಮಾತ್ರ

ಅವನಿಂದ ಅರ್ಧಾಣೆಯನ್ನು ತೆಗೆದುಕೊಂಡು ಅವನಿಗೆ ಮೂರು ಪೆಪ್ಪರಮೆಂಟ್ ಕೊಟ್ಟುಬಿಡುತ್ತಿದ್ದೆ. ಅಕಸ್ಮಾತ್ ಡಬ್ಬದಿಂದ ತೆಗೆಯುವಾಗ ಮೂರಕ್ಕೆ ಬದಲು ನಾಲ್ಕೇನಾದರೂ ಬಂದರೆ ಆ ಉಳಿದ ಒಂದು ನನ್ನ ಬಾಯಿಗೆ ಹೋಗುತ್ತಿತ್ತು.

ಪಕ್ಕದ ಮನೇಲಿದ್ದ ಹುಚ್ಚು ಕೋಳಿ ನಮಗೆ ಬೆಳಗಾಯಿತೆಂದು ತಿಳಿಸುತ್ತಿತ್ತು. ನಾವು ತುಂಬಾ ಹೊತ್ತು ಮಲಗಿಬಿಟ್ಟೆವೆಂದು ಅದಕ್ಕೆ ತೋಚಿದಾಗ ಕೂಗುತ್ತಿತ್ತು. ಆಗ ಅಪ್ಪ ಹಾಸಿಗೆಯಿಂದ ಜಿಗಿದೆದ್ದು ನನ್ನನ್ನು ಹಾಸಿಗೆಯಿಂದ ಎಬ್ಬಿಸುತ್ತಿದ್ದರು.

ಗೋಡೆಯ ಹತ್ತಿರ ಮುಖ ತೊಳೆದುಕೊಂಡು ಹಣೆಗೆ ವಿಭೂತಿ ಹಚ್ಚಿಕೊಂಡು ಗೋಡೆಗೆ ನೇತುಹಾಕಿದ್ದ ದೇವರ ಪಠಗಳ ಮುಂದೆ ನಿಂತು ನಾನು ಕಲಿತಿದ್ದ ಶ್ಲೋಕಗಳನ್ನು ಹೇಳುತ್ತಾ ಇದ್ದೆ. ನಾನು ಹೇಳೋದನ್ನು ಸ್ವಲ್ಪ ಹೊತ್ತು ಕೇಳುತ್ತಾ ಇದ್ದು ಅಪ್ಪ ಎಮ್ಮೆ ಕರೆಯಲು ಹಿಂದುಗಡೆ ಹೊರಟು ಹೋಗುತ್ತಿದ್ದ. ಹಾಲು ಕರೆದುಕೊಂಡು ಬಂದಾಗ ದಿನವೂ ಒಂದೇ ರಾಗ.

"ಈವತ್ತು ಏನು ಬಂದಿದೆಯೋ ದೇವರಿಗೇ ಗೊತ್ತು. ಒಂದು ಅರ್ಧ ಸೇರು ಹಾಲು ಸಹಾ ಕರೀಲಿಲ್ಲ" ಎಂದು. ನನ್ನ ತಾಯಿ ಒಳಗಿಂದಲೇ "ಹೌದು, ಹೌದು ಬರುತ್ತಾ ಬರುತ್ತಾ ಅದಕ್ಕೇನೋ ಬಂದಿದೆ" ಎಂದು ಹೇಳಿ ಹಾಲಿನ ಚೆಂಬನ್ನು ಅಡಿಗೆಯ ಮನೆಗೆ ತೆಗೆದುಕೊಂಡು ಹೋಗುತ್ತಾ ಇದ್ದಳು. ಐದು ನಿಮಿಷದಲ್ಲಿ ನನ್ನ ಕೈಯಲ್ಲಿ ಕಾದ ಹಾಲಿನ ಬಟ್ಟಲು!

ತುಕ್ಕು ಹಿಡಿದಿದ್ದ ಡಬ್ಬದಲ್ಲಿದ್ದರೂ ಸಕ್ಕರೆ ಮಾತ್ರ ಸೊಗಸಾಗಿರುತ್ತಿತ್ತು. ಅಡಿಗೇ ಮನೇಲಿ ಒಲೇ ಹತ್ತಿರವಿದ್ದ ಹಲಗೇ ಮೇಲೆ ಆ ಡಬ್ಬ ಯಾವಾಗಲೂ ಇರುತ್ತಿತ್ತು. ನಾನು ಬೆಳೆದ ಹಾಗೆಲ್ಲಾ ಆ ಡಬ್ಬವಿದ್ದ ಹಲಗೇನೂ ಮೇಲಮೇಲಕ್ಕೇ ಹೋಗುತ್ತಿತ್ತು. ಅಂತೂ ಅಪ್ಪನ್ನ-ಅಮ್ಮನ್ನ ಗೋಗರಿಯದೆ ಆ ಡಬ್ಬ ನನ್ನ ಕೈಗೆ ಸಿಗುತ್ತಾ ಇರಲಿಲ್ಲ.

ಬೆಳಗಾದ ಕೂಡಲೆ ಹೊರಗಿನ ಜಗುಲಿಯ ಮೇಲೆ ತಂದೆ ನನಗಾಗಿ ಸಿದ್ಧರಾಗಿರುತ್ತಾ ಇದ್ದರು. ಕೈಯಲ್ಲೊಂದು ಬೆತ್ತ. ಆ ಕಾಲದಲ್ಲಿ ಬೆತ್ತವಿಲ್ಲದೇ ಪಾಠವೇ ಇಲ್ಲ. ನನಗೆ ಮೊದಲ ಆಕಾರಗಳನ್ನು ತಿದ್ದಿಸಿದೋರು ನಮ್ಮ ತಂದೆ. ಸ್ಲೇಟಿನ ಮೇಲೆ ಎರಡು ಪಕ್ಕದಲ್ಲೂ ಎರಡು ಅಕ್ಷರಗಳನ್ನು

ಬರೆಯುತ್ತಾ ಇದ್ದರು. ಅವುಗಳನ್ನು ತಿದ್ದಿ ತಿದ್ದಿ ನನ್ನ ಕೈ ಬಿದ್ದುಹೋಗುತ್ತಾ ಇತ್ತು. ಅಕ್ಷರಗಳಂತೂ ದೇವರೇ ಗತಿ. "ಅ" ನೋ "ಉ" ನೋ ಗೊತ್ತಾಗುತ್ತಾ ಇರಲಿಲ್ಲ. ಆಗಾಗ ನನ್ನ ಕೈಯಿಂದ ಸ್ಲೇಟು ಕಿತ್ತುಕೊಂಡು ನೋಡಿ ಗುಡುಗುತ್ತಿದ್ದರು. "ಇದೇನು ಬರೆದಿದ್ದೀಯಾ, ನಿನ್ನ ತಲೆ. ಈ ಅಕ್ಷರಗಳೆಲ್ಲಾ ದೇವರಿದ್ದ ಹಾಗೆ. ಇವನ್ನೇನಾದರೂ ವಿಕಾರ ಮಾಡಿದರೆ ನೀನು ಖಂಡಿತ ಮುಂದಕ್ಕೆ ಬರೋದಿಲ್ಲ" ಎನ್ನುತ್ತಿದ್ದರು. ಮತ್ತೆ ಸ್ಲೇಟ-ನ್ನೆಲ್ಲಾ ತನ್ನ ಒದ್ದೆ ಟವಲಿನಿಂದ ಒರೆಸಿ ಅಕ್ಷರಗಳನ್ನು ಬರೆದು ಸ್ಲೇಟನ್ನು ನನ್ನ ಕೈಗೆ ಕೊಡುತ್ತಿದ್ದರು.

"ಇದನ್ನೇನಾದರೂ ಸರಿಯಾಗಿ ಬರೀದೆ ಕೆಡಿಸಿದರೆ ನಾನು ಸುಮ್ಮನೆ ಇರೋದಿಲ್ಲ. ನಾನು ಹೇಗೆ ಬರೆದಿದೇನೋ ಹಾಗೆ ತಿದ್ದಬೇಕು. ನಿನ್ನ ಕೋತಿ ವಿದ್ಯಾನೆಲ್ಲ ತೋರಿಸಬೇಡ" ಎಂದು ಹೇಳುವಾಗ ಅಪ್ಪನ ಕೈಲಿ ಬೆತ್ತ ಇರುತ್ತಲೇ ಇತ್ತು.

"ಸರಿ ಅಪ್ಪ" ಎಂದು ನಾನು ಬರೆಯಲು ಕೂಡುತ್ತಿದ್ದೆ. ನಾಲಗೆ ಹೊರಗೆ ಹಾಕಿ ಒಂದು ಕಡೆ ವಾಲಿಕೊಂಡು ಭಾರಾನೆಲ್ಲ ಆ ಬಳಪದ ಮೇಲೆ ಹಾಕಿ ಸ್ಲೇಟಿನ ಮೇಲೆ ಗರಗರ ಸದ್ದು ಮಾಡುತ್ತಾ ಅಕ್ಷರ ತಿದ್ದುತ್ತಾ ಇದ್ದುದು ನನಗಿನ್ನೂ ಜ್ಞಾಪಕವಿದೆ! ನಾನು ಹಾಗೆ ಮಾಡಿದಾಗಲೆಲ್ಲಾ ಅಪ್ಪ ಗದರಿಸದೆ ಬಿಡುತ್ತಿರಲಿಲ್ಲ.

ಸರಿ ಇದಾದ ಮೇಲೆ ಲೆಕ್ಕ. ಎರಡೆರಡು ನಾಕು. ನಾಕು ಮೂರಲ.... ಅದೆಷ್ಟೊ.......ಹೀಗೆ. ಅಂತೂ ಆ ಹಾಳು ಲೆಕ್ಕ ನನ್ನ ತಲೆಗೇ ಹಿಡೀತಾ ಇರಲಿಲ್ಲ. ಆಕಾಶದಲ್ಲಿ ಚಿಲಿಪಿಲಿಗುಟ್ಟುತ್ತಾ ಹಾರಾಡುತ್ತಾ ಇದ್ದ ಆ ಹಕ್ಕಿಗಳ ಹಾಗೆ ನಾನು ಇರಬೇಕು ಅಂತ ಅನ್ನಿಸುತ್ತಿತ್ತು. ಆದರೆ ನನ್ನ ಅಪ್ಪ ಬಿಡ-ಬೇಕಲ್ಲ! ಅದರಲ್ಲೂ ಅಪ್ಪನ ಕೋಪಕ್ಕಂತೂ ಇತಿಮಿತಿಯೇ ಇರುತ್ತಿರಲಿಲ್ಲ. ನನ್ನ ಪ್ರಾರ್ಥನೆ ದೇವರಿಗೆ ಮುಟ್ಟಿರಬೇಕು. ಅಂತೂ ಒಂದು ದಿನ ಬೆಳಗಿನ ಝಾವಕ್ಕೇ ಯಾರೋ ಗಿರಾಕಿಯು ಅಂಗಡಿಯ ಹತ್ತಿರ ಬಂದ. ಅವನನ್ನು ನೋಡಿದ ಕೂಡಲೇ ಅಪ್ಪ "ನಿನ್ನ ತಲೇಲಿ ತುಂಬಿರೋದು ಜೇಡಿಮಣ್ಣು.... ಬುದ್ಧಿಯಲ್ಲ" ಎಂದುಬಿಟ್ಟು, ಅಂಗಡಿಗೆ ಹೊರಟುಹೋಗುತ್ತಿದ್ದರು.

ನನಗೇನೊ ನನ್ನ ಪಾಠಕ್ಕೆ ಕೊನೆ ಮೊದಲೆ ಇಲ್ಲವೇನೊ ಎನಿಸು-

ತ್ತಿತ್ತು. ಆದರೆ ಅಮ್ಮ ಮಾತ್ರ "ಓಹೋ ಆಗಲೇ ಆಗಿಹೋಯಿತೋ! ಅಂತೂ ಒಂದು ಅರ್ಧ ಗಂಟೇಲಿ ಅದೇನು ಕಲೀತಿಯೋ ದೇವರೇ ಬಲ್ಲ" ಎನ್ನುತ್ತಿದ್ದಳು.

"ಅಮ್ಮ ಸುಮ್ಮನೆ ಬಯ್ಯಬೇಡ. ನಾನು ಮನೇಲಿ ಗಲಾಟೆ ಮಾಡೋದಿಲ್ಲ. ಆಟಕ್ಕೆ ಹೊರಟುಹೋಗುತ್ತೀನಿ. ಆದರೆ ಪಾಠ ಮಾತ್ರ ಇನ್ನು ಖಂಡಿತಾ ಸಾಧ್ಯವಿಲ್ಲ. ಈಗ ಮಾಡಿರೋದು ಈವತ್ತಿಗೆ ಬೇಕಾದಷ್ಟಾಯಿತು" ಎಂದು ನಾನು ಕಣ್ಣುಮುಚ್ಚಿ ತೆರೆಯುವದರಲ್ಲಿ ರಸ್ತೆಯಾಚೆ ಇದ್ದ ಹುಣಿಸೆ ಮರದ ಬಳಿಯಲ್ಲಿರುತ್ತಿದ್ದೆ. ಅದೊಂದು ಭಾರಿ ಮರ. ಅದರಲ್ಲಿ ನೂರಾರು ಕೋತಿಗಳು ಇದ್ದಿರಬೇಕು. ಹಕ್ಕಿಗಳೂ ಗೂಡು ಕಟ್ಟಿದ್ದವು. ಜೊತೆಗೆ ಕೆಳಗೆ ಉದುರುತ್ತಿದ್ದ ಆ ಒಣಗಿದ ಎಲೆಗಳ ಮಧ್ಯದಲ್ಲಿ ಹಂದಿಯ ಮರಿಗಳು ಬೇರೆ. ಅಂತೂ ನನಗೆ ಇಪ್ಪತ್ತುನಾಲ್ಕು ಗಂಟೇನೂ ಅಲ್ಲೇ ಆಟ. ನಮ್ಮ ಅಂಗಡಿಗೆ ಹೋಗೋ ಗಿರಾಕಿಗಳು ಆ ಕಡೆ ಹೋದಾಗ ನನ್ನನ್ನು ನೋಡಿ ಮುಗುಳು ನಗುತ್ತಾ ಇದ್ದರು. 'ಬಾ' ಅಂತ ಕರೀತಾ ಇದ್ದರು. ಆದರೆ ಆಡೋದಕ್ಕೆ ನನಗೆ ಗೋಲಿಗಳೇ ಸಾಕಾಗಿದ್ದವು. ಜೊತೆಗೊಂದು ರಬ್ಬರ್ ಚೆಂಡು.

ಆಗಾಗ್ಗೆ ಅಪ್ಪ ಊರಿನೊಳಗೆ ವ್ಯಾಪಾರಕ್ಕೆ ಹೋದಾಗ ನನ್ನನ್ನೂ ತಮ್ಮ ಜೊತೆ ಕರೆದುಕೊಂಡು ಹೋಗುತ್ತಾ ಇದ್ದರು. ಒಂದು ದಿನ ರಸ್ತೇಲಿ ಬರುತ್ತಾ ಇದ್ದ ಎತ್ತಿನಗಾಡೀನ ನಿಲ್ಲಿಸಿ. ಅದರಲ್ಲಿ ಊರೊಳಕ್ಕೆ ಹೊರಟೆವು. ಯಾರಾದರೂ ಎಲ್ಲಿಗಾದರೂ ಹೊರಟರೆ ನಾನೂ ಬರುತ್ತೇನೆ ಅಂತ ಹೇಳ-ಕೂಡದು ಎಂದು ಅಮ್ಮ ನೂರುಸಲ ಹೇಳಿಕೊಟ್ಟಿದ್ದಳು. ಆದ್ದರಿಂದಲೇ ಆಹೊತ್ತು ಅಪ್ಪ ಎತ್ತಿನಗಾಡಿ ಕರೆದಾಗ ನಾನು ಏನು ಮಾಡಲೂ ತೋಚದೇ ಹಿಂದೆಮುಂದೆ ನೋಡುತ್ತಿದ್ದೆ. ಅಪ್ಪನೇ "ಹತ್ತೋ ಮಗು" ಅಂದರು. ಆದರೆ ಅಪ್ಪ ವಾಕ್ಯ ಮುಗಿಸುವಷ್ಟರಲ್ಲೇ ನಾನು ಗಾಡಿಯೊಳಗೆ ಹತ್ತಿ ಕುಳಿ-ತಿದ್ದೆ. ಕೊರಳಿಗೆ ಹಾಕಿದ್ದ ಗಂಟೆಗಳನ್ನು ಘಲ್ಲು-ಘಲ್ಲು ಎನಿಸುತ್ತಾ ಎತ್ತು-ಗಳು ಹೆಜ್ಜೆ ಹಾಕಿದವು. ಗಾಡಿಯೊಳಗೆ ಕುಳಿತಿದ್ದರೆ ಮೈಯೆಲ್ಲಾ ಅಲ್ಲಾಡು-ತಿತ್ತು. ಆದರೂ ಗಾಡಿಯೊಳಗೆ ಹಾಸಿದ ಒಣಹುಲ್ಲಿನ ವಾಸನೆ ನನಗೆ ತುಂಬಾ ಇಷ್ಟವಾಯಿತು. ಹೊಲದಲ್ಲಿ ಕೆಲಸ ಮಾಡುತ್ತಿದ್ದ ಜನ........ದಾರಿಯಲ್ಲಿ ಹೋಗುತ್ತಿದ್ದ ಬೇರೆ ಗಾಡಿಗಳು, ಜೀವನದ ವೈವಿಧ್ಯ ಎಲ್ಲವೂ ನನ್ನನ್ನು ಆಕರ್ಷಿಸಿದ್ದವು.

ಮಾರುಕಟ್ಟೆಯಲ್ಲಿ ಅಪ್ಪನಿಗೆ ತಿಳಿದಿದ್ದ ಅಂಗಡಿಯೊಂದರಲ್ಲಿ ಸ್ಟೂಲಿನ ಮೇಲೆ ನನ್ನನ್ನು ಕೂಡಿಸಿಬಿಟ್ಟು ಅಪ್ಪ ಸಾಮಾನು ಕೊಂಡುಕೊಳ್ಳುವುದಕ್ಕೆ ಹೊರಟುಹೋಗಿಬಿಡುತ್ತಾ ಇದ್ದರು. ಜೇಬಿನಲ್ಲಿ ಹುರಿಗಾಳು ತುಂಬಿಕೊಂಡು ನಾನು ಅಲ್ಲಿನ ಆಗು-ಹೋಗುಗಳನ್ನೆಲ್ಲಾ ಗಮನಿಸುತ್ತಾ ಇದ್ದೆ. ಅಲ್ಲಿಗೆ ಬಂದವರಲ್ಲಿ ಸಾಮಾನು ಕೊಂಡುಕೊಳ್ಳುವವರು ಸ್ವಲ್ಪ ಜನವಾದರೆ ನಿಂತು ತಮಾಷೆ ನೋಡುವವರು ಇನ್ನು ಸ್ವಲ್ಪ. ಅದೇನು ಜಗಳ.......ಅದೇನು ಚರ್ಚೆ........ಮಧ್ಯಮಧ್ಯ ಕೂಗು ಕಿರಿಚಾಟ........ನಗು........ಎಲ್ಲವೂ.... ಅಪ್ಪ ಸಾಮಾನು ತರುವುದಕ್ಕೋಸ್ಕರ ಹೋದಾಗ ನನ್ನ ತಲೆಯ ತುಂಬಾ ಒಂದು ಪ್ರಶ್ನೆ ತುಂಬಿಕೊಳ್ಳುತ್ತಿತ್ತು.

"ನೀನೇ ಅಂಗಡಿಯಿಟ್ಟುಬಿಟ್ಟು ಇನ್ನೊಬ್ಬರಂಗಡಿಯ ಸಾಮಾನು ತೆಗೆದುಕೊಳ್ಳುವುದೇ?" ಆದರೆ ನನಗೆ ಉತ್ತರ ಬರುತ್ತಿರಲಿಲ್ಲ. ಆ ಗಜಿಬಿಜಿ-ಯನ್ನೇ ನೋಡುತ್ತಾ ನೋಡುತ್ತಾ ನನಗೆ ತೂಕಡಿಕೆ ಬರುತ್ತಿತ್ತು. ಹಾಗೇ ನಿದ್ದೆಮಾಡಿಬಿಡುತ್ತಿದ್ದೆ.

"ಸ್ವಾಮಿ, ನನಗೊಂದು ಸಮಸ್ಯೆ" ಎಂದ ಆಗಂತುಕ.

"ಸಮಸ್ಯೆ ಇಲ್ಲದೇ ಇರೋರೆ ಇಲ್ಲ. ಒಬ್ಬೊಬ್ಬರಿಗೆ ಒಂದೊಂದು ಸಮಸ್ಯೆ........"

ಆಗಂತುಕ ಬಂದು ರಾಜುವಿನ ಎದುರಿನಲ್ಲಿ ಕುಳಿತಾಗಿನಿಂದ ರಾಜು-ವಿಗೆ ತಾನೊಬ್ಬ ಸುವಿಖ್ಯಾತ ವ್ಯಕ್ತಿ ಎನ್ನುವ ಭಾವನೆ ಬಂದಿತ್ತು. ರಂಗದಲ್ಲಿ ನಿಂತ ನಟನ ಹಾಗೆ ತಾನು ಹೇಳುವ ಮಾತು ಸಂದರ್ಭಕ್ಕೆ ತಕ್ಕಹಾಗಿರ-ಬೇಕೆನಿಸುತ್ತಿತ್ತು. ಈಗಿನ ಸಂದರ್ಭಕ್ಕೆ ತಕ್ಕಹಾಗಿರಬೇಕೆನಿಸುತ್ತಿತ್ತು. ಈಗಿನ ಸಂದರ್ಭಕ್ಕೆ ಸರಿಯಾದ ಮಾತೆಂದರೆ ಇದು.

"ಸಮಸ್ಯೆ ಇಲ್ಲದೆ ಇರೋ ಮನುಷ್ಯನ್ನ ನೀನು ತೋರಿಸು. ಆಗ ನಿನಗೆ ಸಮಸ್ಯೆಯೇ ಇಲ್ಲದೇ ಇರೋ ಅಂತಹ ಪ್ರಪಂಚಾನ ತೋರಿಸುತ್ತೇನೆ. ಗೌತಮಬುದ್ಧ ಒಂದು ಸಲ ಏನು ಹೇಳಿದ ಗೊತ್ತೊ?" ಆಗಂತುಕ ರಾಜು-ವಿನ ಹತ್ತಿರಕ್ಕೆ ಸರಿದ. "ಒಂದು ಸಲ ಹೆಂಗಸೊಬ್ಬಳು ತನ್ನ ಸತ್ತ ಮಗು-ವನ್ನು ಎದೆಗಪ್ಪಿಕೊಂಡು ರೋದಿಸುತ್ತಾ ಬುದ್ಧಮಹಾಶಯನ ಹತ್ತಿರ ಹೋದಳು. ಆಗ ಬುದ್ಧ "ಈ ಊರಿನಲ್ಲಿ ಪ್ರತಿಯೊಬ್ಬನ ಮನೆಗೂ ಹೋಗಿ

ಯಾರ ಮನೆಯಲ್ಲಿ ಸಾವಿಲ್ಲವೋ ಅಂಥವರ ಮನೆಯಿಂದ ಒಂದು ಹಿಡಿ ಸಾಸುವೆಯನ್ನು ತೆಗೆದುಕೊಂಡು ಬಾ" ಎಂದು ಹೇಳಿಕಳಿಸಿದ.

ಆಗಂತುಕ ಸಂತೋಷದಿಂದ ಬಾಯಿ ಚಪ್ಪರಿಸಿದ.

"ಆಮೇಲೆ ಆ ಸತ್ತ ಮಗುವಿಗೆ ಏನಾಯಿತು ಸ್ವಾಮಿ?"

"ಆಗೋದೇನು? ಸ್ಮಶಾನದಲ್ಲಿ ಸಮಾಧಿಯಾಯಿತು."

"ಹಾಗೇನೇ" ಎಂದು ಹೇಳುವಾಗ ರಾಜು ಅದಕ್ಕೂ ಇದಕ್ಕೂ ಇರೊ ಹೋಲಿಕೆ ಸರಿಯೊ ತಪ್ಪೋ ಎಂದು ಮನಸ್ಸಿನಲ್ಲೇ ಯೋಚಿಸಿದ.

"ಹಾಗೇನೇ ಯಾವ ಮನೆಯಲ್ಲಾದರೂ ಸಮಸ್ಯೆ ಇಲ್ಲ ಅಂತ ತೋರಿಸಿದರೆ ಆಗ ಸಮಸ್ಯೆಗಳಿಗೆಲ್ಲಾ ಪರಿಹಾರವನ್ನು ಸೂಚಿಸಿಬಿಡುತ್ತೇನೆ."

ಆಗಂತುಕನಿಗೆ ರಾಜುವಿನ ಮಾತಿನಲ್ಲಿ ಅಡಗಿದ್ದ ಗಹನತತ್ವವನ್ನು ಅರಿತು ಮಾತೇ ಹೊರಡದಾಯಿತು. ರಾಜುವಿಗೆ ಸಾಷ್ಟಾಂಗನಮಸ್ಕಾರ ಮಾಡಿ ಆಗಂತುಕ ಹೇಳತೊಡಗಿದ. "ಸ್ವಾಮಿ ನನ್ನ ಹೆಸರು ಹೇಳಿಲ್ಲ. ವೇಲನ್ ಅಂತ ನನ್ನ ಹೆಸರು. ನಮ್ಮ ತಂದೆ ಮೂರು ಸಲ ಮದುವೆ ಮಾಡಿಕೊಂಡರು. ನಾನು ಮೊದಲನೆಯ ಹೆಂಡತಿಯ ಮೊದಲನೆ ಮಗ. ಮೂರನೇ ಮಲತಾಯಿಯ ಕಡೇ ಮಗಳು ನಮ್ಮ ಜೊತೇಲೇ ಇದ್ದಾಳೆ. ಮನೆಗೆ ಹಿರಿಯವನಾಗಿ ಅವಳಿಗೆ ಏನು ಬೇಕೋ ಎಲ್ಲಾ ಅನುಕೂಲವನ್ನೂ ಮಾಡಿಕೊಟ್ಟಿದ್ದೇನೆ. ಬಟ್ಟೆ–ಬರೆ ಹೊಲಿಸಿದೇನೆ. ಒಡವೆ–ವಸ್ತು ತಂದುಕೊಟ್ಟಿದೇನೆ. ತಿಂಡಿ-ತೀರ್ಥ ಇದ್ದೇ ಇದೆ. ಆದರೆ........".

"ಆದರೆ ಆ ಹುಡುಗಿಗೆ ಕೃತಜ್ಞತೆಯೇ ಇಲ್ಲ........" ಆಗಂತುಕ ಮುಗಿಸದೇ ಬಿಟ್ಟ ಆ ವಾಕ್ಯವನ್ನು ರಾಜುವೇ ಮುಗಿಸಿದನು.

"ಇಲ್ಲ, ಲವಲೇಶವೂ ಇಲ್ಲ."

"ಸರಿ, ಇನ್ನು ಹುಡುಗಿ ನೀವು ಹೇಳಿದ ವರನನ್ನು ಒಪ್ಪೋದಿಲ್ಲ."

"ನಿಜ ಸ್ವಾಮಿ, ನಿಜ........ನೀವು ಹೇಳಿದ್ದು ನೂರಕ್ಕೆ ನೂರರಷ್ಟು ನಿಜ." ಆಗಂತುಕನಿಗೆ ನಿಜವಾಗಿಯೂ ಆಶ್ಚರ್ಯವಾಯಿತು.

"ನಿಜ ಸ್ವಾಮಿ, ನಿಜ. ನನ್ನ ಸೋದರಳಿಯನಿಗೇ ಗೊತ್ತಾಗಿತ್ತು. ಮದುವೆ ದಿನಾನೂ ನಿಷ್ಕರ್ಷೆಯಾಗಿಹೋಗಿತ್ತು. ಆದರೆ ಹುಡುಗಿ ಏನು ಮಾಡಿಬಿಟ್ಟಳೂಂತೀರಿ ಸ್ವಾಮಿ?"

"ಮನೆಯಿಂದ ಓಡಿಹೋಗಿಬಿಟ್ಟಳು. ಮತ್ತೆ ಹೇಗೆ ಕರೆದುಕೊಂಡು ಬಂದಿರಿ?"

"ಮೂರು ದಿನ ಹುಡುಕಿ, ಹುಡುಕಿ ಕೊನೆಗೆ ದೂರದ ಹಳ್ಳಿಯ ಜಾತ್ರೆ-ಯಲ್ಲಿ ಸಿಕ್ಕಿದಳು. ರಥೋತ್ಸವ ನಡೀತಾ ಇತ್ತು. ಸುತ್ತಮುತ್ತಲಿನ ಸುಮಾರು ಐವತ್ತು ಹಳ್ಳಿಗಳ ಜನ ಅಲ್ಲಿ ಸೇರಿದ್ದರು. ಜಾತ್ರೇಲಿ ಒಂದೊಂದು ಮುಖಾನೂ ನೋಡದೆ, ಬಿಡಲಿಲ್ಲ. ಕೊನೆಗೂ ಬೊಂಬೆಯಾಟ ನೋಡುತ್ತಾ ಅಲ್ಲಿ ನಿಂತಿ-ದ್ದಳು. ಕಂಡುಹಿಡಿದುಬಿಟ್ಟೆ. ಈಗೇನು ಮಾಡುತ್ತಾಳೆ ಗೊತ್ತೆ?" ರಾಜು ಉಳಿದ ಕಥೆಯನ್ನು ಹೇಳಲು ವೇಲನಿಗೇ ಬಿಟ್ಟು ಸುಮ್ಮನಿದ್ದ. "ಈಗ ರೂಮಿನಿಂದ ಹೊರಕ್ಕೇ ಬರೋದಿಲ್ಲ. ದೆವ್ವಗಿವ್ವ ಹಿಡಿದಿದೆಯೊ ಏನೊ. ಅವಳನ್ನ ಹೇಗೆ ತರೋದು ಅಂತ ತಿಳಿದರೆ ದೇವರಿಗೆ ಇಡಿಗಾಯಿ ಒಡೆತೀನಿ. ಈಗ ಏನು ಮಾಡಬೇಕು ದಯವಿಟ್ಟು ಹೇಳಿ ಸ್ವಾಮಿ?"

"ಇವೆಲ್ಲಾ ಜೀವನದಲ್ಲಿ ನಡೆಯೋದೆ. ಇವು ಯಾವುವನ್ನೂ ಮನ-ಸ್ಸಿಗೆ ಹೆಚ್ಚಿಗೆ ಹಚ್ಚಿಕೊಳ್ಳಬಾರದು." ರಾಜು ವಿರಾಗಿಯಂತೆ ಹೇಳಿದ. "ಆದರೆ ಈವಾಗ ಅವಳಿಗೇನಾದರೂ ಮಾಡಬೇಕಾಗಿದೆಯಲ್ಲ."

"ಕರೆದುಕೊಂಡು ಬಾ, ನಾನು ಅವಳ ಹತ್ತಿರ ಮಾತನಾಡುತ್ತೇನೆ."

ವೇಲನ್ ಎದ್ದು ಬಗ್ಗಿ ರಾಜುವಿನ ಕಾಲುಮುಟ್ಟಿ ನಮಸ್ಕರಿಸಲು ಹೋದ. ಆದರೆ ಅವನು ಹಾಗೆ ಮಾಡುವನೆಂದು ತಿಳಿದಕೂಡಲೇ ಹಿಂದೆ ಸರಿದ ರಾಜು, "ದೇವರು ಮಾತ್ರ ಇದಕ್ಕೆ ಅರ್ಹನೇ ಹೊರತು ನಾವಲ್ಲ. ನಾವೇನಾದರೂ ಅವನ ಹಕ್ಕು ಕಿತ್ತುಕೊಳ್ಳುವ ಪ್ರಯತ್ನ ಮಾಡಿದ್ದೇ ಆದರೆ ನಮ್ಮನ್ನ ದೇವರು ಸುಮ್ಮನೆ ಬಿಡೊಲ್ಲ."

ವೇಲನ್ ನದಿಯ ಮೆಟ್ಟಿಲುಗಳನ್ನು ಇಳಿದುಹೋಗಿ ನದಿಯನ್ನು ದಾಟಿ ಆಚೆಯ ದಡ ಹತ್ತಿದುದು ಕಂಡಿತು. ಅವನು ಕಣ್ಮರೆಯಾದ ಕೂಡಲೇ ರಾಜು ತನ್ನ ಮನಸ್ಸಿನಲ್ಲೇ ಯೋಚಿಸಿದ:

"ಆ ಹುಡುಗಿಯ ವಯಸ್ಸೆಷ್ಟು ಅಂತ ಕೇಳಬೇಕಾಗಿತ್ತು. ಸಧ್ಯ ಮನ-ಮೋಹನಾಂಗಿಯಾಗದಿದ್ದರೆ ಸಾಕು. ಈಗಾಗಲೇ ಬೇಕಾದಷ್ಟು ಫಜೀತಿ ಪಟ್ಟಾ-ಗಿದೆ."

ರಾತ್ರಿಯ ಅಂಧಕಾರದಲ್ಲಿ ನದಿ ಹರಿಯುವುದನ್ನು ನೋಡುತ್ತಾ ರಾಜು

ಕುಳಿತನು. ಮರದೆಲೆಗಳ ಶಬ್ದ ಒಂದೊಂದು ಸಲ ಭಯವನ್ನುಂಟುಮಾಡು-
ತ್ತಿತ್ತು. ಬಾನು ತಿಳಿಯಾಗಿತ್ತು. ಬೇರೇನೂ ಮಾಡಲೂ ತೋಚದೇ ರಾಜು
ಆಕಾಶದಲ್ಲಿ ಮಿನುಗುತ್ತಿದ್ದ ನಕ್ಷತ್ರಗಳನ್ನು ಎಣಿಸತೊಡಗಿದನು. "ಹೀಗೆ
ಮಾಡಿದರೆ ಯಾವುದಾದರೂ ಒಂದು ಕಾಲಕ್ಕೆ ಉಪಯೋಗವಾಗೋದರಲ್ಲಿ
ಸಂದೇಹವೇ ಇಲ್ಲ. ಪ್ರಪಂಚದಲ್ಲಿ ಇದಕ್ಕಿಂತ ಬೇರೆ ಉಪಕಾರ ಬೇಕೆ?
ಜನಕ್ಕೆ ಏನಾದರೂ ಸಂಶಯ ಬಂದರೆ ನನ್ನ ಹತ್ತಿರಾನೇ ಬರುತ್ತಾರೆ........
ನಕ್ಷತ್ರಲೋಕಕ್ಕೆ ನಾನೇ ಮಾರ್ಗದರ್ಶಿ..........ಎಲ್ಲಾನೂ ಒಂದೇ ಸಲ ಎಣಿ-
ಸೋಕೆ ಸಾಧ್ಯವಿಲ್ಲ. ಗುಂಪುಗುಂಪಾಗಿ ಎಣಿಸಬೇಕು. ಮೇಲಿಂದ ಕೆಳಕ್ಕೆ
ಎಣಿಸಬಾರದು...........ಒಂದು ಕಡೆಯಿಂದ ಇನ್ನೊಂದು ಕಡೆಗೆ ಎಣಿಸ-
ಬೇಕು........"

ರಾಜು ತನ್ನ ಎಡಗಡೆ ಇದ್ದ ಮರದ ಮೇಲಿನ ನಕ್ಷತ್ರ ಎಣಿಸತೊಡ-
ಗಿದ.

"ಒಂದು.........ಎರಡು........ಐವತ್ತೈದು........"

ಅಷ್ಟರೊಳಗೇ ತಾನೆಣಿಸುತ್ತಿದ್ದ ಗುಂಪಿನಲ್ಲೇ ಇನ್ನೊಂದು ನಕ್ಷತ್ರದ
ಗುಂಪು ಹುಟ್ಟಿಕೊಂಡ ಹಾಗೆ ಕಾಣಿಸುತ್ತಿತ್ತು. ಅದನ್ನೂ ಸೇರಿಸಿ ಎಣಿಸುವ
ಹೊತ್ತಿಗೆ ಮೊದಲೆಣಿಸಿದ್ದು ಮರತುಹೋಗುತ್ತಿತ್ತು. ಎಣಿಸಿ ಎಣಿಸಿ ಸಾಕಾ-
ಯಿತು. ಆಯಾಸದಿಂದ ಹಾಗೆ ಮೆಟ್ಟಿಲಿನ ಮೇಲೆ ಮೈ ಚಾಚಿದ. ಕೂಡಲೇ
ತಿಳಿ ನೀಲಿಯ ಬಾನಿನ ಕೆಳಗೆ ಮಲಗಿದ ಅವನನ್ನು ನಿದ್ರಾದೇವಿ ಆವರಿ-
ಸಿದಳು.

ಬೆಳಗಿನ ಸೂರ್ಯ ರಾಜುವಿನ ಮುಖದ ಮೇಲೆ ತನ್ನ ಪ್ರಕಾಶವನ್ನು
ಬೀರಿದ್ದ. ರಾಜು ಕಣ್ಣುಬಿಟ್ಟು ನೋಡಿದಾಗ ಎದುರಿಗೇ ನಿಂತಿದ್ದ ವೇಲನ್.

"ನನ್ನ ತಂಗೀನ ಕರೆದುಕೊಂಡು ಬಂದಿದೇನೆ ಸ್ವಾಮಿ" ಎಂದವನೇ
ಸುಮಾರು ಹದಿನಾಲ್ಕು ವರ್ಷದ ಹುಡುಗಿಯೊಬ್ಬಳನ್ನು ಮುಂದಕ್ಕೆ ನೂಕಿದ.
ಬಿಗಿಯಾಗಿ ಹೆಣೆದ ಜಡೆ. ಮೈತುಂಬ ಒಡವೆ. "ಈ ಒಡವೆಗಳನ್ನೆಲ್ಲಾ
ನಾನೇ ನನ್ನ ಸ್ವಂತ ದುಡ್ಡಿನಿಂದ ಮಾಡಿಸಿದ್ದು ಸ್ವಾಮಿ, ಎಷ್ಟಾದರೂ ನನ್ನ
ತಂಗಿ ಅಲ್ಲವೆ?"

ರಾಜು ಕಣ್ಣುಜ್ಜಿಕೊಳ್ಳುತ್ತಾ ಎದ್ದುಕುಳಿತ. ಇತರರ ಕಷ್ಟ-ಸುಖ-

ಗಳನ್ನು ವಿಚಾರಿಸಿಕೊಳ್ಳುವುದಕ್ಕಿಂತ ಮೊದಲು ತನ್ನ ಪ್ರಾತರ್ವಿಧಿಗಳನ್ನು ಪೂರೈಸಬೇಕಾಗಿತ್ತು.

"ನೀವು ಅಲ್ಲಿ ಒಳಗೆ ಕೂತಿರಿ" ಎಂದು ಹೇಳಿ ನದಿಯ ಮೆಟ್ಟಲಿಳಿದು ಹೋದ ರಾಜು.

ವೇಲನ್, ಅವನ ತಂಗಿ ಇಬ್ಬರೂ ರಾಜುವಿಗಾಗಿ ಆ ಕಲ್ಲುಮಂಟಪ-ದಲ್ಲಿ ಕಾದಿದ್ದರು. ರಾಜು ಹಿಂದಿರುಗಿ ಬಂದು ಮಂಟಪದ ಮಧ್ಯೆಯಿದ್ದ ಕಲ್ಲುವೇದಿಕೆಯ ಮೇಲೆ ಕುಳಿತ. ಅವನ ಮುಂದೆ ತಾನು ತಂದಿದ್ದ ಬುಟ್ಟಿ-ಯನ್ನಿಟ್ಟ ವೇಲನ್. ಅದರ ತುಂಬಾ ಬಾಳೇಹಣ್ಣು, ಸೌತೇಕಾಯಿ, ಕಬ್ಬಿನ ತುಂಡು, ಕಡಲೇಕಾಯಿ.........ಪಕ್ಕದಲ್ಲೇ ಒಂದು ತಾಮ್ರದ ಚೊಂಬಿನಲ್ಲಿ ನೊರೆ ಹಾಲು. "ಇವೆಲ್ಲಾ ಯಾತಕ್ಕೆ?"

"ಏನೂ ಇಲ್ಲ ಸ್ವಾಮಿ, ಏನೋ ಬಡವನ ಕಾಣಿಕೆ. ತಾವು ಒಪ್ಪಿ-ಕೊಂಡರೆ ನನಗೆ ತುಂಬಾ ಸಂತೋಷವಾಗುತ್ತೆ."

ರಾಜು ಬುಟ್ಟಿಯನ್ನು ನೋಡುತ್ತಾ ಕುಳಿತನು. ಅವೇನೂ ಬೇಡ-ವಾಗಿರಲಿಲ್ಲ. ಏನನ್ನು ಬೇಕಾದರೂ ತಿಂದು ಅರಗಿಸಿಕೊಳ್ಳುವಂತಹ ಶಕ್ತಿ ಈಗ ಅವನಿಗಿತ್ತು. ಹಿಂದಿನ ದಿನಗಳಲ್ಲಾಗಿದ್ದರೆ "ಇವೆಲ್ಲಾ ಯಾರಿಗೆ ಬೇಕು? ಇಡ್ಲಿ ಕಾಫೀ ಕೊಡಬಾರದೇ? ಬೆಳಗಾಗುತ್ತಾ ನಾನು ತಿನ್ನೋದೇ ಅದು. ಇದನ್ನೆಲ್ಲಾ ಆಮೇಲೆ ಮೆಲುಕು ಹಾಕಬಹುದು" ಎನ್ನಬಹುದಾಗಿತ್ತು. ಆದರೆ ಜೈಲುವಾಸ ಅವನಿಗೆ ಎಂತಹ ಪದಾರ್ಥವನ್ನಾದರೂ ಯಾವ ಹೊತ್ತಿ-ನಲ್ಲಾದರೂ ತಿನ್ನುವ ಕಲೆಯನ್ನು ಕಲಿಸಿತ್ತು. ಒಂದು ದಿನ ತನ್ನ ಜೊತೆಯ ಖೈದಿಯೊಬ್ಬ ವಾರದ ಹಿಂದೆ ಮಾಡಿದ್ದ ಯಾವುದೊ ಕರಿದ ತಿಂಡಿಯನ್ನು ಜೈಲಿನ ವಾರ್ಡರಿನ ಸಹಾನುಭೂತಿಯಿಂದ ಕದ್ದು ತರಿಸಿದ್ದ. ಹಳಸಿದ ವಾಸನೆ ಬರುತ್ತಿದ್ದ ಆ ತಿಂಡಿಯ ಒಂದು ಭಾಗವನ್ನು ಕೊಟ್ಟಾಗ ತಾನು ಅದನ್ನು ಬೆಳಗಿನ ಝಾವದಲ್ಲೇ ಕಬಳಿಸಿರಲಿಲ್ಲವೇ? ಈಗ ಯಾರು ಏನು ಕೊಟ್ಟರೂ ಅದಕ್ಕೆ ಸ್ವಾಗತ.

"ಎಲ್ಲಾ ಬಿಟ್ಟು ನನಗೆ ಯಾತಕ್ಕೆ ತಂದು ಕೊಡುತ್ತಾ ಇದ್ದೀರಾ?"

"ಏನೂ ಇಲ್ಲ ಸ್ವಾಮಿ.........ಏನೋ ನಮ್ಮ ಹೊಲದಲ್ಲಿ ಬೆಳೆದದ್ದು; ನಿಮಗೆ ಕೊಟ್ಟರೆ ನಮಗೂ ತೃಪ್ತಿ."

ರಾಜು ಮುಂದೆ ಪ್ರಶ್ನಿಸಲಿಲ್ಲ. ಇಂತಹ ಸಂದರ್ಭಗಳಲ್ಲಿ ತಾನೇ ಗುರು. ಹೇಗೆ ನಡೆದುಕೊಳ್ಳಬೇಕೆನ್ನುವುದು ಅವನಿಗೆ ಆಗಲೇ ಕರಗತವಾಗಿತ್ತು. ತನಗರ್ಪಿತವಾದ ಬುಟ್ಟಿಯನ್ನು ತೆಗೆದುಕೊಂಡು ಗರ್ಭಗುಡಿಯೊಳಕ್ಕೆ ಹೊರಟ.

ವೇಲನ್, ಅವನ ತಂಗಿ ಇಬ್ಬರೂ ಹಿಂಬಾಲಿಸಿದರು. ಕತ್ತಲಲ್ಲಿದ್ದ ಕಲ್ಲುವಿಗ್ರಹದ ಮುಂದೆ ನಿಂತ ರಾಜು; ಎದುರಿಗಿದ್ದ ಮೂರ್ತಿ ಸುಂದರವಾದ ವಿಷ್ಣು ವಿಗ್ರಹ. ಆದರೆ ಪೂಜೆ ಅದಕ್ಕೆ ಇಲ್ಲದೆ ಪುರಸ್ಕಾರ ಕಂಡು ನೂರು ವರುಷಗಳಾಗಿರಬೇಕು. ರಾಜು ಬುಟ್ಟಿಯನ್ನು ದೇವರ ಪಾದಗಳಲ್ಲಿರಿಸಿದ.

"ಇದು ಸಲ್ಲಬೇಕಾದದ್ದು ನಿನಗೆ ಭಗವಂತ. ನೀನು ತಿಂದು ಉಳಿದದ್ದು ನಮಗೆ. ನಿನಗೆ ಕೊಡುವುದರಿಂದ ಒಂದು ನಾಲ್ಕಾಗುತ್ತದೆಯೇ ವಿನಾ ನಾಲ್ಕು ಒಂದಾಗುವುದಿಲ್ಲ. ದೇವರ ಸನ್ನಿಧಿಯಲ್ಲಿ ಗುಣಾಕಾರವೇ ಹೊರತು ಭಾಗಾಕಾರವಿಲ್ಲವೆ ಇಲ್ಲ........ನಿಮಗೆ ಆ ಕತೆ ಗೊತ್ತೆ ? " ರಾಜು ಪುರಾಣದಲ್ಲಿನ ದೇವಕನ ಕಥೆ ಹೇಳತೊಡಗಿದ. ದೇವಸ್ಥಾನದ ಬಾಗಿಲಿನಲ್ಲಿ ಭಿಕ್ಷೆ ಬೇಡುತ್ತಿದ್ದ ದೇವಕ ತನಗೆ ಬಂದ ಪುಡಿಗಾಸುಗಳಲ್ಲಿ ಒಂದು ದೇವರಿಗೆ ಒಪ್ಪಿಸಿದ ಮೇಲೆಯೇ ಖರ್ಚು ಮಾಡುತ್ತಿದ್ದನು........ಕಥೆ ಹೇಳುತ್ತಾ ಹೇಳುತ್ತಾ ರಾಜುವಿಗೆ ಆ ಕಥೆಯನ್ನು ಈಗ ಹೇಳುವುದರ ಔಚಿತ್ಯವೇನೆಂದು ತಿಳಿಯಲಿಲ್ಲ. ಕಥೆಯನ್ನು ಹೇಗೆ ಮುಂದುವರಿಸಬೇಕೋ ಅದೂ ತಿಳಿಯಲಿಲ್ಲ. ಮಾತಿಗಿಂತ ಮೌನವೇ ಉತ್ತಮವೆಂದು ಸುಮ್ಮನಾಗಬೇಕಾಯಿತು. ವೇಲನ್ ಕಥೆ ಮುಂದುವರಿಯುವುದರ ನಿರೀಕ್ಷಣೆಯಲ್ಲೇ ಇದ್ದ. ಎಷ್ಟಾದರೂ ಭಕ್ತನಲ್ಲವೇ ವೇಲನ್........ಭಕ್ತನಲ್ಲಿರಬೇಕಾದ ಗುಣಗಳೆಲ್ಲಾ ಅವನಲ್ಲಿದ್ದವು.... ಕಥೆ ಮುಂದುವರಿಯದಿದ್ದರೂ........ನೀತಿ ತಿಳಿಯದಿದ್ದರೂ........ನೀತಿಯ ಸ್ವಾರಸ್ಯ ಕೊನೆ ಮುಟ್ಟದಿದ್ದರೂ ಚಿಂತೆಯಿಲ್ಲ. ಜೀವನವೇ ಹೀಗೆ ಅಪೂರ್ಣ. ರಾಜು ಬುಟ್ಟಿಯನ್ನು ತೆಗೆದುಕೊಂಡು ಮೆಟ್ಟಲಿನ ಬಳಿ ಹಿಂತಿರುಗಿದಾಗ ವೇಲನ್ ಹಾಗೂ ಅವನ ತಂಗಿ ಹಿಂಬಾಲಿಸಿದರು.

ನನ್ನ ತಾಯಿ ಹೇಳಿದ ಆ ಕಥೆ ಪೂರ್ತಿ ನೆನಪಿಗೆ ಬರುವುದಿಲ್ಲವಲ್ಲ ? ಅಪ್ಪ ಅಂಗಡಿಯ ಬಾಗಿಲನ್ನು ಮುಚ್ಚಿಕೊಂಡು ಮನೆಗೆ ಬರೋದನ್ನೇ ಕಾಯುತ್ತ ಕೂಡುತ್ತಿದ್ದಾಗ ಪ್ರತಿಯೊಂದು ದಿನ ಸಾಯಂಕಾಲವೂ ಅಮ್ಮ

ಒಂದೊಂದು ಕಥೆ ಹೇಳುತ್ತಿದ್ದಳು. ಮಧ್ಯರಾತ್ರಿ ತನಕ ಅಂಗಡಿ ಬಾಗಿಲು ಮುಚ್ಚುವ ಹಾಗೇ ಇರಲಿಲ್ಲ. ರಾತ್ರಿಯಾದರೂ ದೂರದ ಹಳ್ಳಿಗಳಿಂದ ಎತ್ತಿನ ಗಾಡಿಗಳು ಬರುತ್ತಲೇ ಇದ್ದವು. ಒಂದೊಂದು ಬಂಡಿಯಲ್ಲೂ ಅಕ್ಕಿ, ತೆಂಗು, ಅಡಕೆ ಮೂಟೆಗಳು. ಅಂಗಡಿಯ ಹತ್ತಿರವಿದ್ದ ದೊಡ್ಡ ಹುಣಿಸೆ ಮರದ ಹತ್ತಿರ ಬಂಡಿಗಳಿಗೆ ಕಟ್ಟಿದ್ದ ಎತ್ತುಗಳನ್ನು ಬಿಚ್ಚುತ್ತಾ ಇದ್ದರು. ಎತ್ತಿನಗಾಡಿ ಹೊಡೆಯುವವರು ಗುಂಪುಗುಂಪಾಗಿ ಅಂಗಡಿಗೆ ಬಂದು ಕೂಡುತ್ತಿದ್ದರು. ತಿನ್ನೋದಕ್ಕೆ ಒಂದಿಷ್ಟು ಬಿಸ್ಕತ್ತು, ಬಾಳೇಹಣ್ಣು. ಸೇದುವುದಕ್ಕೆ ಒಂದಿಷ್ಟು ಹೊಗೆಸೊಪ್ಪು, ಸರಿ ಒಂದಿಷ್ಟು ಹರಟೆ. ಅವರ ಜೊತೆ ಮಳೆ-ಬೆಳೆಗಳನ್ನು ಚರ್ಚಿಸುತ್ತ ಕೂತುಬಿಟ್ಟರೆ ಅಪ್ಪನಿಗೆ ಹೊತ್ತಿನ ಪರಿವೆಯೇ ಇರುತ್ತಿರಲಿಲ್ಲ. ಜೊತೆಗೆ ಹಳೇ ವ್ಯಾಜ್ಯಗಳ ಪರಿಹಾರ. ನಾಲ್ಕು ಜನ ಸೇರಿಬಿಟ್ಟರು ಅಂದರೆ ಅಪ್ಪನಿಗೆ ಊಟವೂ ಬೇಡ; ನಿದ್ದೆಯೂ ಬೇಡ. ಅಪ್ಪನನ್ನು ಹೇಗಾದರೂ ಮಾಡಿ ಕರೆದುಕೊಂಡು ಬಾ ಅಂತ ಅಮ್ಮ ತನ್ನನ್ನು ನಾಲ್ಕಾರು ಸಲ ಅಂಗಡಿಗೆ ಕಳಿಸುತ್ತಿದ್ದಳು. ಆದರೆ ಅಪ್ಪನಿಗೆ ಯಾವಾಗ ಕೋಪ ಬರುತ್ತೆ, ಯಾವಾಗ ಬರೋದಿಲ್ಲ ಅಂತ ಹೇಳೋದು ಸಾಧ್ಯವಿರಲಿಲ್ಲ.

ಮಧ್ಯೆಮಧ್ಯೆ ಹೋಗಿ ಮಾತನಾಡಿಸಿದರೆ ರೇಗಿಬಿಡುತ್ತಿದ್ದರು. ಅದಕ್ಕೋಸ್ಕರವೆ ಅಮ್ಮ ನನಗೆ ಅಪ್ಪನನ್ನು ರೇಗಿಸದ ಹಾಗೆ ಅವರ ಅಂಗಡಿಯ ಹತ್ತಿರ ನಿಂತುಕೊಂಡು ಸಮಯ ನೋಡಿ ಊಟಕ್ಕೆ ಹೊತ್ತಾಯಿತೆಂದು ಎಚ್ಚರಿಸುವುದನ್ನು ಕಲಿಸಿಕೊಟ್ಟಿದ್ದಳು. ನಾನು ಅಂಗಡಿಯ ಹತ್ತಿರ ನಿಂತು ಆಕಳಿಸುತ್ತಿದ್ದೆ; ಆಗಾಗ ಕೆಮ್ಮಿ ಗಂಟಲು ಸರಿಮಾಡಿಕೊಳ್ಳುತ್ತಲಿದ್ದೆ. ಆದರೆ ಅಪ್ಪನಿಗೆ ಮಾತ್ರ ಈ ಕಡೆ ಗಮನ ಇರುತ್ತಾನೆ ಇರಲಿಲ್ಲ. ಅಲ್ಲಿ ನಿಂತು ನಿಂತು ಕೊನೆಗೆ ನಾನೂ ಅವರ ಮಾತು-ಕತೆಗಳಲ್ಲಿ ಮಗ್ನನಾಗಿ ಬಿಡುತ್ತಿದ್ದೆ. ಅಷ್ಟುಹೊತ್ತಿಗೆ ಅಮ್ಮನ ಮೆಲುನುಡಿ ಗಾಳಿಯಲ್ಲಿ ತೇಲಿಬರುತ್ತಿತ್ತು.

"ರಾಜೂ.....ರಾಜೂ...." ಎಂದು ಅಮ್ಮನ ಧ್ವನಿ ಕೇಳಿ ಅಪ್ಪ ನನಗೆ ಹೇಳುತ್ತಿದ್ದರು,

"ಒಂದು ಪಾತ್ರೇಲಿ ಒಂದಿಷ್ಟು ಅನ್ನ, ಒಂದಿಷ್ಟು ಮಜ್ಜಿಗೆ, ಒಂದು ನಿಂಬೇಕಾಯಿ ಉಪ್ಪಿನಕಾಯಿ ಇಟ್ಟುಬಿಡು–ಅಂತ ಅಮ್ಮನಿಗೆ ಹೇಳು; ಅವಳು

ನನಗಾಗಿ ಕಾಯೋದು ಬೇಡ. ಊಟ ಮಾಡಿಬಿಡಲಿ........" ಎಂದು. ವಾರದಲ್ಲಿ ಐದು ದಿನ ಅಪ್ಪ, "ನನಗೆ ಇವತ್ತು ಹಸಿವೇ ಇಲ್ಲ...." ಎಂದೂ ಹೇಳುತ್ತಿದ್ದರು. ನಾನು ಅಲ್ಲಿಂದ ಹೊರಟು ಬಂದುಬಿಟ್ಟಮೇಲೆ ಅಪ್ಪ ಅವರ ಸಂಗಡಿಗರೊಡನೆ ದೇಹದ ಆರೋಗ್ಯದ ವಿಚಾರ ಹರಟೆಗೆ ಆರಂಭಿಸಿಬಿಡುತ್ತಿದ್ದರು.

ಅಂಗಡಿಯ ದೀಪಕ್ಕೂ, ಮನೆಯಲ್ಲಿ ಉರಿಯುತ್ತಿದ್ದ ಲಾಟೀಸಿಗೂ ಮಧ್ಯೆ ಕತ್ತಲೆ ಕವಿದ ದಾರಿ. ಹತ್ತು ಗಜವೂ ಇದ್ದಿರಲಾರದು. ಆದರೂ ಅದನ್ನು ಹಾದುಹೋಗುವಾಗ ತನಗೆ ಮೈ ಬೆವರಿ ನೀರಾಗುತ್ತಿತ್ತು. ದೆವ್ವ-ಪಿಶಾಚಿಗಳೊ, ಕಾಡುಮೃಗಗಳೊ ಬಂದು ಹಿಡಿದುಕೊಂಡುಬಿಟ್ಟರೆ ? ಅಮ್ಮ ನನಗಾಗಿ ಬಾಗಿಲಿನ ಹೊಸತಿಲಿನಲ್ಲಿಯೇ ಕಾದುಕೊಂಡಿರುತ್ತಿದ್ದಳು. ನನ್ನನ್ನು ಕಾಣುತ್ತಲೇ ಅಮ್ಮ " ಓಹೋ ಇನ್ನೂ ಹಸಿವಾಗಿಲ್ಲವಂತೊ ! ಸರಿ ಬಿಡು. ರಾತ್ರಿಯೆಲ್ಲಾ ಅವರ ಜೊತೆ ಕೂತು ಹರಟುತ್ತಾ ಇರಲಿ. ನಾಲ್ಕು ಘಂಟೆಗೆ ಮನೆಗೆ ಬಂದು ಬೆಳಗಿನ ಜಾವ ಕೋಳಿ ಕೂಗುವ ಹೊತ್ತಿಗೆ ಎದ್ದುಬಿಟ್ಟರೆ ಸರಿ........ಹೀಗೆ ಮಾಡುತ್ತಾ ಇರಲಿ, ಗೊತ್ತಾಗುತ್ತೆ. ತಮ್ಮ ಆರೋಗ್ಯದ ವಿಚಾರದಲ್ಲಿ ಹೀಗಿರೋದೆ ? " ಎನ್ನುತ್ತಿದ್ದಳು.

ನಾನು ಅಮ್ಮನ ಹಿಂದೆ ಅಡುಗೆಮನೆಯೊಳಕ್ಕೆ ಹೋದಾಗ ನನ್ನ ತಟ್ಟೆಯ ಪಕ್ಕದಲ್ಲಿ ತನ್ನ ತಟ್ಟೆಯನ್ನೂ ಹಾಕುತ್ತಿದ್ದಳು. ಅನ್ನದ ತಪ್ಪೇಲಿಯನ್ನು ಹತ್ತಿರ ಎಳೆದುಕೊಂಡು ನನಗೂ ಬಡಿಸಿ ತಾನೂ ಊಟ ಮಾಡುತ್ತಿದ್ದಳು. ಗೋಡೆಯಮೇಲೆ ಕಪ್ಪುಗಟ್ಟಿಕೊಂಡು ಮಿಣುಕು ಮಿಣುಕಾಗಿ ಉರಿಯುತ್ತಿದ್ದ ದೀಪದಿಂದ ಸಾಕಷ್ಟು ಬೆಳಕಿರುತ್ತಿತ್ತು. ಮನೆಯ ಮುಂಭಾಗದಲ್ಲಿದ್ದ ಕೋಣೆಯಲ್ಲಿ ನನಗಾಗಿ ಒಂದು ಚಾಪೆ ಹಾಸುತ್ತಿದ್ದಳು. ನಾನು ಅದರ ಮೇಲೆ ಮಲಗಿ ನಿದ್ದೆಹೋಗುತ್ತಿದ್ದಾಗ ಅಮ್ಮ ನನ್ನ ಪಕ್ಕದಲ್ಲೇ ಕುಳಿತು ಅಪ್ಪ ಬರುವುದನ್ನೇ ಎದುರು ನೋಡುತ್ತಿದ್ದಳು. ಅವಳು ಪಕ್ಕದಲ್ಲಿ ಇದ್ದಷ್ಟು ಹೊತ್ತೂ ನಾನು ಬೆಚ್ಚಗೆ ಮಲಗುತ್ತ, " ಅಮ್ಮಾ, ತಲೇ ಕಡೀತಾ ಇದೆ " ಎಂದಾಗ ಅಮ್ಮ ನನ್ನ ಕೂದಲಿನಲ್ಲಿ ಕೈಯಾಡಿಸುತ್ತಿದ್ದಳು. ಆಮೇಲೆ ಕಥೆಗಾಗಿ ಬೇಡಿಕೆ : " ಅಮ್ಮಾ, ಒಂದು ಕಥೆ ಹೇಳಮ್ಮ " ಎಂದು ಕೇಳಿದ ಕೂಡಲೇ ಆರಂಭಿಸುತ್ತಿದ್ದಳು.

"ಒಂದಾನೊಂದು ಕಾಲದಲ್ಲಿ ದೇವಕ ಅಂತ ಒಬ್ಬನಿದ್ದ........" ಪ್ರತಿ ರಾತ್ರಿಯೂ ಅವನ ನಾಮಸ್ಮರಣೆಯಿಲ್ಲದೆ ಮಲಗೋದು ಸಾಧ್ಯವೇ ಇರು-ತ್ತಿರಲಿಲ್ಲ. ಅವನೊಬ್ಬ ವೀರಾಧಿವೀರ, ಇಲ್ಲವೆ ಮಹಾನುಭಾವ. ಅವನೇನು ಮಾಡಿದ ಅಥವಾ ಅವನು ಮಾಡಿದ್ದನ್ನೆಲ್ಲಾ ಯಾತಕ್ಕೋಸ್ಕರ ಮಾಡಿದ ಅನ್ನೋದನ್ನ ನಾನು ಪೂರ್ತಿ ಕೇಳುತ್ತಲೇ ಇರಲಿಲ್ಲ. ಅಮ್ಮ ಇನ್ನೂ ಮೊದ-ಲನೆ ಅಧ್ಯಾಯವನ್ನು ಮುಗಿಸೋದಕ್ಕೆ ಮೊದಲೇ ನನಗೆ ನಿದ್ದೆ ಬಂದು ಬಿಡುತ್ತಿತ್ತು.

ಬೆಳಗಿನ ಸೂರ್ಯನ ಕಾಂತಿಯಲ್ಲಿ ಹೊಳೆಯ ಹೊಳಪನ್ನು ನೋಡುತ್ತ ಕುಳಿತಿದ್ದ ರಾಜು. ಗಾಳಿ ತಣ್ಣಗೆ ಬೀಸುತ್ತಿತ್ತು. ತಾನೊಬ್ಬನೆ ಇರಬಾರ-ದಾಗಿತ್ತೆ ಎನಿಸಿತು. ಅವನಿಗಾಗಿ ಬಂದವರು ಒಂದು ಮೆಟ್ಟಿಲು ಕೆಳಗೆ ಕೂತು ತಾಳ್ಮೆಯಿಂದ ಅವನನ್ನು ನೋಡುತ್ತಿದ್ದರು........ಅವರನ್ನು ನೋಡಿದರೆ ವೈದ್ಯರ ಬರುವಿಕೆಯನ್ನು ಎದುರು ನೋಡುವ ರೋಗಿಗಳ ಹಾಗಿತ್ತು. ರಾಜು-ವಿಗೆ ತನ್ನ ಸಮಸ್ಯೆಗಳೇ ನೂರಾರಿದ್ದುವು. ಈಗ ಈ ವೇಲನ್ ತನ್ನ ತಲೆಯ ಮೇಲೆ ಹೊರಿಸುತ್ತಿದ್ದ ಜವಾಬ್ದಾರಿಯ ಭಾರವನ್ನೂ ನೋಡಿ ಕೋಪ ಬಂತು.

"ವೇಲನ್, ಈಗ ನಿನ್ನ ಸಮಸ್ಯೆಯನ್ನು ಕುರಿತು ಯೋಚಿಸೋದು ಸಾಧ್ಯವೇ ಇಲ್ಲ."

"ಯಾಕೆ ಸ್ವಾಮಿ, ಯಾಕೆ?"

"ಯಾಕೆಂದರೆ ಈಗ ಸಾಧ್ಯವಿಲ್ಲ, ಅದಕ್ಕೂ........"

"ಹಾಗಾದರೆ ಮತ್ತೆ ಯಾವಾಗ ದರ್ಶನಕ್ಕೆ ಬರಲಿ ಸ್ವಾಮೀ?"

"ಯಾವಾಗ ಕಾಲ ಬರುತ್ತೋ ಆವಾಗ" ಈ ಉತ್ತರದಿಂದ ವಾಸ್ತ-ವಿಕ ಪ್ರಪಂಚ ಮರೆಯಾಗಿ, ಆದಿ-ಅಂತ್ಯವಿಲ್ಲದ ಅನಂತ ಜಗತ್ತಿನ ಸೃಷ್ಟಿ-ಯಾದಂತಾಗಿತ್ತು. ವೇಲನ್ ಮರುಮಾತನಾಡದೆ ಮೇಲೆದ್ದನು. ಆಗ ರಾಜುವಿಗೆ ನಿಜವಾಗಿಯೂ ಕನಿಕರವಾಯಿತು. ಅವನು ತಂದಿದ್ದ ಬುಟ್ಟಿ ಹಣ್ಣು, ಬಟ್ಟಲು ಹಾಲಿಗಾದರೂ ಒಂದಿಷ್ಟು ಪ್ರತಿಫಲ ಬೇಡವೆ? ವೇಲನ್-ನನ್ನು ಸಮಾಧಾನಪಡಿಸಲು ರಾಜು ಹೇಳಲೇಬೇಕಾಯಿತು :

"ಈ ತಂಗಿಯ ವಿಚಾರವೇ, ನೀನು ಹೇಳಿದ್ದು?"

"ಹೌದು ಸ್ವಾಮಿ, ಹೌದು."

"ನಿನ್ನ ಸಮಸ್ಯೆ ನನಗೆ ಗೊತ್ತು, ಆದರೆ ಅದನ್ನೆಲ್ಲಾ ಕೂತಪೆಟ್ಟಿಗೆ ಪರಿಹರಿಸಿ ಬಿಡೋದಕ್ಕೆ ಸಾಧ್ಯವಿಲ್ಲ. ಸ್ವಲ್ಪ ಯೋಚನೆ ಮಾಡಬೇಕು. ಅದೂ ಅಲ್ಲದೆ ಇಂತಹ ಪ್ರಶ್ನೆಗಳಿಗೆಲ್ಲಾ ಕಣ್ಣುಮುಚ್ಚಿ–ತೆರೆಯೋದರೊಳಗೆ ಉತ್ತರಗಳನ್ನು ಹೇಳಿಬಿಡೋದಕ್ಕಾಗೋದಿಲ್ಲ. ಕಾಲ ಕಳೆದಹಾಗೆ ಈ ಗಂಟುಗಳೆಲ್ಲಾ ತಮಗೆ ತಾವೇ ಬಿಚ್ಚಿಕೊಳ್ಳಬೇಕು. ತಿಳೀತೇನು ?"

"ಹೌದು ಸ್ವಾಮಿ, ಹೌದು. ಈ ಹಣೇಲಿ ಏನು ಬರೆದಿದೆಯೋ ಅದನ್ನ ಬ್ರಹ್ಮನಿಂದಲೂ ಅಳಿಸೋದು ಸಾಧ್ಯವಿಲ್ಲ."

"ಅಳಿಸೋದು ಸಾಧ್ಯವಿಲ್ಲದೇ ಇರಬಹುದು. ಆದರೆ ಅರ್ಥ ಮಾಡಿಕೊಳ್ಳೋದು ಸಾಧ್ಯ. ಹಾಗೆ ಅರ್ಥ ಮಾಡಿಕೊಳ್ಳೋಕೆ ಒಂದಿಷ್ಟು ಕಾಲ ಬೇಕು" ತನಗೆ ರೆಕ್ಕೆ–ಪಕ್ಕಗಳು ಹುಟ್ಟಿಕೊಂಡ ಹಾಗಾಗಿತ್ತು ರಾಜುವಿಗೆ. ಇನ್ನೊಂದು ಸ್ವಲ್ಪ ಹೊತ್ತಿಗೆಲ್ಲಾ ಗಾಳಿಯಲ್ಲಿ ಬೇಕಾದರೆ ಹಾರಾಡಬಹುದು ಅಥವಾ ಆ ಪುರಾತನ ದೇವಸ್ಥಾನದ ಮೇಲೆ ಹಾರಿ ಕುಳಿತುಕೊಳ್ಳಬಹುದು. ತಾನು ಏನೇ ಮಾಡಿದರೂ ಆಶ್ಚರ್ಯವಲ್ಲ.

"ತಾನೇನು ಜೈಲಿನಲ್ಲಿದ್ದೇನೋ ಅಥವಾ ಅದೇನಾದರೂ ಆಧುನಿಕ ಕಾಲದ ಪರಕಾಯ ಪ್ರವೇಶವೊ?" ಎನ್ನುವ ಹಾಗಿತ್ತು ರಾಜುವಿಗೆ. ತನ್ನ ಗುರುವಿನ ಬಾಯಿಂದ ಬಂದ ಮಾತು ವೇಲನ್‌ಗೆ ಬೇಕಾದಷ್ಟಾಗಿತ್ತು. ರಾಜು ಹುಡುಗಿಯನ್ನೇ ನೋಡುತ್ತ, "ಏನಾಗಬೇಕೊ ಅದು ಆಗೇ ಆಗುತ್ತೆ. ಭೂಮಿಯಲ್ಲಾಗಲಿ, ಸ್ವರ್ಗದಲ್ಲಾಗಲಿ ಒಂದು ದಾರಿಯಲ್ಲಿ ಹರೀತಾ ಇರೋ ನದಿ ಇನ್ನೊಂದು ದಾರಿಗೆ ತಿರುಗೋದು ಸಾಧ್ಯವಿಲ್ಲ........ಈಗ ಉದಾಹರಣೆಗೆ ಆ ನದಿ........" ಎಲ್ಲರೂ ನದಿಯನ್ನೇ ನೋಡಿದರು. ತಮ್ಮ ಸಮಸ್ಯೆಗಳಿಗೆ ಆ ನದಿಯಲ್ಲೇ ಉತ್ತರ ಹುದುಗಿರುವ ಹಾಗೆ ನೋಡಿ ಮರಳಿದರು. ರಾಜು ಅವರು ನದಿಯನ್ನು ದಾಟಿ ದಡವನ್ನು ಮುಟ್ಟುವುದನ್ನೇ ನೋಡುತ್ತಿದ್ದನು. ಒಂದು ನಿಮಿಷದಲ್ಲಿ ಅವರು ಅವನಿಂದ ಕಣ್ಮರೆಯಾದರು.

# 2

ನಮ್ಮ ಮನೆಯ ಮುಂದಿದ್ದ ಬಯಲಿನಲ್ಲಿ ಕೆಲಸ ಕಾರ್ಯ ಬಿರುಸಿನಿಂದ ಆರಂಭವಾಯಿತು. ಊರಿನಿಂದ ಒಂದಿಷ್ಟು ಜನ ಕೆಲಸಗಾರರು ಬಂದು ದಿನವೆಲ್ಲಾ ಕೆಲಸ ಮಾಡುತ್ತಿದ್ದರು. ಮನೆಯ ಎದುರಿಗೇ ರೈಲುದಾರಿ ಸಿದ್ಧವಾಗುತ್ತಿತ್ತು. ಕೆಲಸಗಾರರೆಲ್ಲಾ ತಿಂಡಿ, ತೀರ್ಥಕ್ಕಾಗಿ ನಮ್ಮ ಅಂಗಡಿಗೆ ಬರುತ್ತಿದ್ದರು. ಬಂದಾಗಲೆಲ್ಲಾ ಅಪ್ಪ, "ಈ ಕಡೆ ರೈಲು ಯಾವಾಗ ಬರುತ್ತೆ?" ಅಂತ ಕೇಳದೆ ಇರುತ್ತಿರಲಿಲ್ಲ. ಅವರೇನಾದರೂ ಖುಷಿಯಾಗಿದ್ದರೆ, "ಇನ್ನೊಂದು ಆರೇಳು ತಿಂಗಳಲ್ಲಿ ಬರಬಹುದು. ಯಾರಿಗೆ ಗೊತ್ತು" ಎನ್ನುತ್ತಿದ್ದರು. ಕೆಲಸ ಮಾಡಿ ಬೇಸರವಾಗಿದ್ದರೆ, "ಯಾಕೆ, ನಿನ್ನ ಅಂಗಡಿ ತನಕ ರೈಲು ಬಿಡೋ ಹಾಗೆ ಮಾಡಿಕೊಳ್ಳೋಣ ಅಂತಲೊ" ಎನ್ನುತ್ತಿದ್ದರು.

ಆದರೆ ಕೆಲಸ ಮಾತ್ರ ಬಿರುಸಿನಿಂದ ಸಾಗಿತ್ತು. ಈಗ ಹುಣಿಸೇಮರದ ಮೇಲೆ ಮರಕೋತಿ ಆಡಿ, ಸಿಕ್ಕಿದ ಹಾಗೆಲ್ಲ ಅದರ ಕೆಳಗೆ ಕುಣಿಯೋದಕ್ಕೆ ಸಾಧ್ಯವಾಗುತ್ತಾ ಇರಲಿಲ್ಲ. ಕೆಲಸಕ್ಕೆ ಬೇಕಾದ ಸಾಮಾನು–ಸರಂಜಾಮು ತುಂಬಿಕೊಂಡು ಬಂದ ಲಾರಿಗಳನ್ನೆಲ್ಲಾ ಅದರ ಕೆಳಗೆ ನಿಲ್ಲಿಸಿಬಿಡುತ್ತಿದ್ದರು. ಆದರೆ ನಾನು ಲಾರಿಗಳೊಳಗೇ ಹತ್ತಿ ಆಟವಾಡುತ್ತಾ ಇದ್ದೆ. ಯಾರೂ ಏನೂ ಅನ್ನುತ್ತಾ ಇರಲಿಲ್ಲ. ದಿನವೆಲ್ಲಾ ಈ ಲಾರಿಯಿಂದ ಆ ಲಾರಿಯೊಳಗೆ, ಆ ಲಾರಿಯಿಂದ ಈ ಲಾರಿಯೊಳಗೆ ಆಡಿ ಆಡಿ ಬಟ್ಟೆ-ಬರೆಯೆಲ್ಲಾ ಕೆಂಪುಧೂಳಿನ ಮಯವಾಗಿಬಿಡುತ್ತಿತ್ತು. ಸಾಮಾನ್ಯವಾಗಿ ಎಲ್ಲಾ ಲಾರಿಗಳೂ ಕೆಮ್ಮಣ್ಣು ತುಂಬಿಕೊಂಡು ಬರುತ್ತಿದ್ದವು. ನಮ್ಮ ಮನೆ ಎದುರಿನಲ್ಲಿ ಒಂದು ಕೆಮ್ಮಣ್ಣು ಬೆಟ್ಟವೇ ಹುಟ್ಟಿಕೊಂಡ ಹಾಗಿತ್ತು........ನೋಡುವುದಕ್ಕೆ ಎರಡು ಕಣ್ಣು ಸಾಲದು........ಅಷ್ಟು ಚೆನ್ನಾಗಿತ್ತು. ಈ ಕೆಮ್ಮಣ್ಣುಗುಡ್ಡದ ಮೇಲೆ ನಿಂತು ನೋಡಿದರೆ ದೂರದಲ್ಲಿದ್ದ ಹಳ್ಳಿಗಳೆಲ್ಲಾ ಕಾಣುತ್ತಿದ್ದುವು. ಮೆಂಪಿ ಬೆಟ್ಟ ಸಹಾ ಕಾಣುತ್ತಿತ್ತು. ಆ ಕೆಲಸಗಾರರಷ್ಟೇ ನನಗೂ ಬಿಡುವಿಲ್ಲವಾಯಿತು.

ದಿನವೆಲ್ಲಾ ನಾನು ಆ ರೈಲು ಕಂಬಿಯ ಹತ್ತಿರ ಆ ಜನರ ಮಧ್ಯೆ ಕಳೆಯು-ತ್ತಿದ್ದೆ. ದಿನ ಕಳೆದಹಾಗೆ ಕಬ್ಬಿಣ, ಮರಗಳನ್ನು ಹೊತ್ತ ಲಾರಿಗಳು ಬಂದವು. ಎಲ್ಲಿ ನೋಡಿದರೂ ನೂರಾರು ನಾನಾ ವಿಧವಾದ ಸಾಮಾನುಗಳ ರಾಶಿ. ಅದರ ಜೊತೆ ಕಾಲ ಕಳೆಯುತ್ತಾ ಕೆಲಸಕ್ಕೆ ಬಾರದೆ ಬೀಸಾಡಿದ ಕಬ್ಬಿಣದ ತುಂಡುಗಳು, ನಟ್ಟು–ಬೋಲ್ಟುಗಳನ್ನೆಲ್ಲಾ ಸಂಗ್ರಹಿಸಿದೆ. ಅಮ್ಮನ ಹಳೇ ರೇಶ್ಮೆ ಸೀರೆಗಳ ಟ್ರಂಕಿನಲ್ಲಿ ನನಗೂ ಒಂದಿಷ್ಟು ಸ್ಥಳವಿತ್ತು. ನಾನು ಬಯಲಿ-ನಲ್ಲಿ ಸಂಗ್ರಹಿಸಿದ ವಸ್ತುಗಳನ್ನೆಲ್ಲಾ ಆ ಟ್ರಂಕಿನಲ್ಲಿ ಭದ್ರವಾಗಿಟ್ಟೆ.

ನಾನೊಬ್ಬನೇ ಆಟವಾಡುತ್ತಿರುವಾಗ ಒಂದು ದಿನ ದನ ಕಾಯುವ ಹುಡುಗನೊಬ್ಬ ನನ್ನ ಹತ್ತಿರ ಬಂದ. ಹಸುಗಳೆಲ್ಲಾ ಅಲ್ಲೇ ಹುಲ್ಲು ಮೇಯುತ್ತಿದ್ದುವು. ಹುಡುಗ ಅವನ್ನು ಅವುಗಳ ಪಾಡಿಗೆ ಬಿಟ್ಟುಬಿಟ್ಟು ನಾನು ಆಟವಾಡುತ್ತಿದ್ದ ಗುಡ್ಡದ ಹತ್ತಿರ ಬರುವ ಸಾಹಸ ಮಾಡುತ್ತಿದ್ದ. ಆ ಪ್ರದೇಶಕ್ಕೆಲ್ಲಾ ನಾನೇ ಯಜಮಾನ ಎನ್ನುವ ಭಾವನೆ ನನ್ನಲ್ಲಿ ಆ ವೇಳೆ-ಗಾಗಲೇ ಬೇರೂರಿಬಿಟ್ಟಿತ್ತು. ನನ್ನ ಜಾಗವನ್ನು ಬೇರೆ ಯಾರೂ ಆಕ್ರಮಿ-ಸುವುದು ನನಗಿಷ್ಟವಿರಲಿಲ್ಲ. ಆದ್ದರಿಂದಲೇ ಆ ಹುಡುಗ ಬರುವುದನ್ನು ನೋಡಿದಾಗ ನಾನು, " ನಡಿಯೋ ಆಚೆ " ಎಂದೆ.

" ಯಾಕೆ ಸ್ವಾಮಿ, ನನ್ನ ಹಸುಗಳು ಇಲ್ಲಿವೆ. ನಾನೂ ಇದೀನಿ ಅಷ್ಟೆ."

" ಆ ನಿನ್ನ ಹಸುಗಳನ್ನು ಕರಕೊಂಡು ತೊಲಗಿಹೋಗು. ಇಲ್ಲದೇ ಇದ್ದರೆ ನಿನ್ನ ಹಸುಗಳು ರೈಲಿಗೆ ಸಿಕ್ಕಿ ಸತ್ತುಹೋಗುತ್ತವೆ ಅಷ್ಟೆ. "

" ಸತ್ತುಹೋದರೆ ಹೋಗಲಿ, ಅದರಿಂದ ನಿಮಗೇನು ? "

ಈ ಮಾತು ಕೇಳಿ ನನಗೆ ತುಂಬಾ ಕೋಪ ಬಂತು. ಒಂದೇ ನೆಗೆತಕ್ಕೆ ಹಾರಿ ಅವನ ಮೇಲೆ ಬಿದ್ದೆ. " ಕತ್ತೆ.........ಮಗನೇ........" ಅದರ ಜೊತೆಗೆ ಈಚೀಚೆ ಕಲಿತ ಇನ್ನೊಂದಿಷ್ಟು ಬೈಗಳು. ಆ ಹುಡುಗ ನನಗೆ ನಾಲ್ಕು ಗುದ್ದೋದರ ಬದಲು ನಮ್ಮಪ್ಪನ ಹತ್ತಿರ ಓಡಿಹೋಗಿ ನನ್ನ ಮೇಲೆ ಚಾಡಿ ಹೇಳಿದ " ನೋಡಿ ಸ್ವಾಮಿ, ನಿಮ್ಮಗ ನನ್ನ ಕೆಟ್ಟ ಬೈಗುಳೆಲ್ಲಾ ಬೈಯು-ತ್ತಾರೆ. "

ಇದನ್ನು ಕೇಳಿದ್ದೇ ನಮ್ಮಪ್ಪ ಕೋಪದ ಕಿಡಿಯಾಗಿ ನನ್ನ ಹತ್ತಿರ ಓಡಿ ಬಂದರು. " ಈ ಹುಡುಗನನ್ನು ಏನಂತ ಬೈದೆಯೋ ? "

ಸದ್ಯ ಏನು ಬೈದೇಂತ ಹೇಳಲಿಲ್ಲ. ಏನು ಮಾಡಲೂ ತೋಚದೆ ಕಣ್ಣುಕಣ್ಣು ಬಿಟ್ಟೆ. ಅಪ್ಪನಿಗೆ ಸಿಕ್ಕಾಪಟ್ಟೆ ಸಿಟ್ಟು, ಬಂದಿರಬೇಕು. ನನ್ನ ಕುತ್ತಿಗೆ ಹಿಡಕೊಂಡು ಹೂಂಕರಿಸಿದರು "ಎಲ್ಲಿ ಕಲಿತೆಯೊ ಆ ಮಾತು-ಗಳನ್ನೆಲ್ಲಾ ?" ನಾನು ರೈಲುಕಂಬಿಯ ಹತ್ತಿರ ಕೆಲಸ ಮಾಡುತ್ತಿದ್ದ ಜನ-ಗಳ ಕಡೆ ಬೊಟ್ಟುಮಾಡಿ ತೋರಿಸಿದೆ. ಅವರನ್ನೇ ಒಂದು ನಿಮಿಷ ನೋಡಿ-ದರು ನಮ್ಮ ತಂದೆ.

"ಓಹೋ ಅಲ್ಲೋ! ಸರಿಸರಿ........ಸಾಕು ಇನ್ನುಮೇಲೆ ನಿನ್ನಾಟ. ಬೀದೀಲಿ ಕಾಲ ಕಳೀತ ಕೆಟ್ಟ ಮಾತು ಕಲಿಯೋಕಲ್ಲ, ನೀನು ನನ್ನ ಮಗ-ನಾಗಿ ಹುಟ್ಟಿರೋದು. ನಾಳೆಯಿಂದ ಸ್ಕೂಲಿಗೆ ಹೋಗಬೇಕು. ತಪ್ಪಿಸಿ-ಗಿಪ್ಪಿಸಿಕೊಂಡರೆ ಹಲ್ಲು ಮುರಿದುಬಿಡುತ್ತೇನೆ."

"ಅಪ್ಪಾ!"........ಇದಂತೂ ಶಾಪವೇ, ಬೇರೇನೂ ಅಲ್ಲ. ನಾನು ಪ್ರೀತಿಸುತ್ತಿದ್ದ ಸ್ವರ್ಗದಿಂದ ನಾನು ದ್ವೇಷಿಸುತ್ತಿದ್ದ ನರಕಕ್ಕೆ ವರ್ಗಾವಣೆ!

ಸ್ಕೂಲಿಗೆ ಹೋಗುವ ಮೊದಲನೇ ದಿನವೇ ಅದೆಷ್ಟು, ಅನಾವಶ್ಯಕ ಸಡಗರ, ಏನು ಕಥೆ? ಅಮ್ಮ ಬೇಗನೇ ಅಡಿಗೆ ಮಾಡಿ ನನಗೆ ಬಡಿಸಿ ಅಲ್ಯೂ-ಮಿನಿಯಮ್ ಟಿಫಿನ್ ಕ್ಯಾರಿಯರ್‌ಗೆ ಊಟ ತುಂಬಿಕೊಡುತ್ತಿದ್ದಳು. ಚೀಲದೊಳಗೆ ನನ್ನ ಸ್ಲೇಟು ಪುಸ್ತಕಗಳನ್ನು ಹಾಕಿ ನನ್ನ ಭುಜಕೆ ತಗುಲಿ-ಸುತ್ತಿದ್ದಳು.

ಆಗಸಸಿಂದ ಬಂದ ಚೆಡ್ಡಿ-ಷರಟಿನ ಅಲಂಕಾರ, ಹಣೆಯ ಮೇಲೆ ಮುಂಗುರುಳು ಬೀಳುವ ಹಾಗೆ ಎಣ್ಣೆ ಹಾಕಿ ತಲೆ ಬಾಚುತ್ತಿದ್ದಳು. ಮೊದಲು ಮೊದಲು ಈ ಶಿಸ್ತು-ಸಿಂಗಾರ ತುಂಬಾ ಹಿಡಿಸಿತು. ಆದರೆ ಬರುಬರುತ್ತಾ ನನಗೆ ಇದನ್ನು ಕಂಡರೆ ಆಗುತ್ತಾ ಇರಲಿಲ್ಲ. ಇಷ್ಟೆಲ್ಲಾ ಕಷ್ಟಪಟ್ಟುಕೊಂಡು ಸ್ಕೂಲಿಗೆ ಹೋಗೋದಕ್ಕಿಂತ ಮನೇಲಿರೋದೇ ಚೆನ್ನಾಗಿರುತ್ತಿತ್ತು. ಆದರೆ ನಮ್ಮ ತಂದೆ ಅವಕ್ಕೆಲ್ಲಾ ಜಗ್ಗುತ್ತಾ ಇರಲಿಲ್ಲ. ಅದೂ ಅಲ್ಲದೆ ಅಪ್ಪನಿಗೆ ತನ್ನ ಮಗನು ಸ್ಕೂಲಿಗೆ ಹೋಗುತ್ತಾನೆ ಅಂತ ಹೇಳಿಕೊಳ್ಳುವ ಆಸೆ. ಬೆಳಿಗ್ಗೆ ನಾನು ಸ್ಕೂಲಿಗೆ ಹೊರಡುವವರೆಗೂ ಅಪ್ಪ ನನ್ನ ಮೇಲೆ ಕಣ್ಣಿ-ಟ್ಟಿರುತ್ತಿದ್ದರು. ಅಂಗಡಿಯಲ್ಲಿ ಕುಳಿತು "ಮಗೂ, ಸ್ಕೂಲಿಗೆ ಹೊರಟೆ-ಯೇನೊ" ಎನ್ನುತ್ತಿದ್ದರು.

ಕೊನೆಮೊದಲಿಲ್ಲದೆ ನಡೆದು ಸ್ಕೂಲು ಸೇರುತ್ತಿದ್ದೆ. ನಾನು ಹೋಗೋ ದಾರೀಲಿ ಬೇರೆ ಯಾವ ಹುಡುಗನೂ ಹೋಗುತ್ತಿರಲಿಲ್ಲ. ಕೆಲವು ಸಲ ನನ್ನ ಸಂಗಡ ನಾನೇ ಮಾತನಾಡಿಕೊಳ್ಳುತ್ತಿದ್ದೆ. ಕೆಲವು ಸಲ ದಾರಿಯಲ್ಲಿ ಹೋಗುವವರನ್ನು ನೋಡುತ್ತಲೋ, ಎತ್ತಿನ ಬಂಡಿಗಳ ಸದ್ದನ್ನು ಕೇಳು-ತ್ತಲೊ ನಿಂತುಬಿಡುತ್ತಿದ್ದೆ. ನಾನು ಎಷ್ಟು ಬೇಗ ನಡೆಯುತ್ತಿದ್ದೆನೆಂದರೆ, ನಾನು ಮಾರ್ಕೆಟ್ ರಸ್ತೆಗೆ ಬರುವ ಹೊತ್ತಿಗಾಗಲೇ ನನ್ನ ಜೊತೆ ಹುಡುಗ-ರೆಲ್ಲಾ ಶಾಲೆ ಸೇರಿ ಒಕ್ಕೊರಲಿನಿಂದ ಪಾಠವನ್ನು ಓದುತ್ತಿದ್ದುದು ಕೇಳಿಸು-ತ್ತಿತ್ತು. ಅಂತೂ ನಮಗೆ ಪಾಠ ಹೇಳಿಕೊಡುತ್ತಿದ್ದ ಆ ಗುರುಗಳಿಗೆ ಹುಡು-ಗರು ಆ ಪಾಠದ ನೆವದಲ್ಲಿ ಎಷ್ಟು ಸದ್ದು ಮಾಡಿದರೂ ಅಷ್ಟು ಇಷ್ಟ.

ಮನೇ ಹತ್ತಿರವೇ ಇದ್ದ ಆಲ್ಬರ್ಟ ಮಿಷನ್‌ಸ್ಕೂಲ್ ಬಿಟ್ಟು ನನ್ನನ್ನು ಈ ಸ್ಕೂಲಿಗೆ ಕಳಿಸೋಕೆ ಅಪ್ಪನಿಗೆ ಯಾರ ಉಪದೇಶವೋ ಗೊತ್ತಿಲ್ಲ. ಆಲ್ಬರ್ಟ ಮಿಷನ್ ಸ್ಕೂಲಿನ ಹುಡುಗ ಅಂತ ಜಂಭವಾಗಿ ಹೇಳಿಕೊಳ್ಳೋಕೆ ನನಗೆ ಬಹಳ ಆಸೆ. ಆದರೆ ಅಪ್ಪ ಮಾತ್ರ, "ನನ್ನ ಮಗನ್ನ ನಾನು ಆ ಪಾದ್ರಿಗಳ ಸ್ಕೂಲಿಗೆ ಖಂಡಿತ ಕಳಿಸೋದಿಲ್ಲ. ಅಲ್ಲಿಗೆ ಹೋದರೆ ನಮ್ಮ ಮಕ್ಕಳೆಲ್ಲಾ ಕಿರಿಸ್ತಾನರಾಗೋದೇ ನಿಜ. ಅವರಿಗೆ ನಮ್ಮ ದೇವರು–ದಿಂಡ-ರನ್ನು ಬೈಯೋದನ್ನು ಬಿಟ್ಟರೆ ಬೇರೆ ಕೆಲಸವೇ ಇಲ್ಲ" ಎಂದುಬಿಡುತ್ತಿದ್ದರು. ಅಪ್ಪನ ತಲೆಗೆ ಆ ಭಾವನೇನ ಯಾರು ತುಂಬಿದರೊ ಭಗವಂತನೇ ಬಲ್ಲ. ಅಂತೂ ನಾನು ಹೋಗುತ್ತಿದ್ದ ಶಾಲೆಯ ಸಮಾನ ಯಾವುದೂ ಇಲ್ಲ ಅನ್ನೋದು ಅಪ್ಪನ ಅಭಿಪ್ರಾಯ. ಆ ಶಾಲೆಯ ಉಪಾಧ್ಯಾಯರೂ ಕೂಡ, "ನನ್ನ ಕೈಯಿಂದ ತಯಾರಾದ ಹುಡುಗರು ಈಗ ಎಂತಹ ಭಾರಿ-ಭಾರಿ ಕೆಲಸಗಳಲ್ಲಿದ್ದಾರೆ ಗೊತ್ತೇ ಸ್ವಾಮಿ? ಮದರಾಸಿನ ಆಠಾರ ಕಛೇರಿ ಸಾಹೇ-ಬರು, ಕಲೆಕ್ಟರು........ಇನ್ನೂ ಅಂತಹ ನೂರು ಜನ ಇಲ್ಲಿಂದ ಹೋದೋರು" ಎನ್ನದೇ ಇರುತ್ತಿರಲಿಲ್ಲ. ಅದೇನು ಅವರ ಸ್ವಂತ ಕಲ್ಪನೆಯೊ ಅಥವಾ ನಿಜವೊ ಹೇಳುವುದು ಕಷ್ಟ. ಅಂತೂ ನಮ್ಮ ಶಾಲೇನ ನೋಡಿದರೆ ಅದನ್ನು "ಸ್ಕೂಲು" ಅಂತ ಸಹಾ ಹೇಳುವ ಸ್ಥಿತಿಯಲ್ಲಿರಲಿಲ್ಲ. ಇನ್ನು ಜಗತ್ತಿನಲ್ಲೇ ಪ್ರಸಿದ್ಧಿಪಡೆದ ಶಾಲೆ ಅದು ಅಂತಾ ಹೇಳಿದರೆ ನಂಬೋರೊಬ್ಬರು ಇರಬೇ-ಕಲ್ಲ. ಅದಕ್ಕೆ "ಜಗಲೀ ಶಾಲೆ" ಅಂತಲೇ ಹೆಸರು. ನಮ್ಮ ಮುದಿ

ಮೇಷ್ಟ್ರರ ಮನೆ ನಮ್ಮ ಶಾಲೆ. ಕಬೀರ್ ರಸ್ತೇಲಿದ್ದ ಒಂದು ಸಣ್ಣ ಮನೇಲಿ ಅವರ ವಾಸ. ಅದರ ಮುಂದಿದ್ದ ಸಿಮೆಂಟ್ ಜಗುಲಿಯ ಕೆಳಗೆ ದೊಡ್ಡ ಚರಂಡಿ. ನನ್ನಷ್ಟು ವಯಸ್ಸಿನ ಒಂದು ಹತ್ತಿಪ್ಪತ್ತು ಮಕ್ಕಳನ್ನೆಲ್ಲಾ ಸೇರಿಸಿಕೊಂಡು ಮೂಲೆಯಲ್ಲಿದ್ದ ದಿಂಬಿಗೊರಗಿಕೊಂಡು ಪಾಠಕ್ಕೆ ಪ್ರಾರಂಭ. ಕೈಯಲ್ಲೊಂದು ಬೆತ್ತ. ಎಲ್ಲ ಕ್ಲಾಸುಗಳೂ ಅಲ್ಲೇ. ಹತ್ತತ್ತು ನಿಮಿಷ ಒಂದೊಂದು ಕ್ಲಾಸಿಗೆ ಪಾಠ. ನಾನಿನ್ನೂ 'ಅ ಈ' ಕಲಿಯೋ ಕ್ಲಾಸಿನಲ್ಲಿದ್ದೆ. ಗಟ್ಟಿಯಾಗಿ ಒಂದು ಸಲ ಓದಿ ಆಮೇಲೆ ಬರೆಯಬೇಕು. ಮಾಡಿದ ತಪ್ಪನ್ನೇ ಮಾಡಿದರೆ ಬೆತ್ತದ ರುಚಿ ಕಾಣಬೇಕಾದ್ದೆ. ಮೇಷ್ಟ್ರರ ಬಾಯಿಗಂತೂ ಹಿಡಿತವೇ ಇರಲಿಲ್ಲ. ನಮ್ಮ ತಂದೆ ನನ್ನನ್ನು ರೈಲು ಕೆಲಸದವರ ಅಪವಿತ್ರ ಭಾಷೆಯಿಂದ ತಪ್ಪಿಸಬೇಕೆಂದು-ಕೊಂಡು ಈ ಶಾಲೆಗೆ ಸೇರಿಸಿ ಯಾವ ಉಪಕಾರವನ್ನೂ ಮಾಡಿರಲಿಲ್ಲ. ಹುಲಿಯಿಂದ ಬಿಡಿಸಿ ಕಿರುಬನ ಬಾಯಿಗೆ ಕೊಟ್ಟಹಾಗಿತ್ತು ಅಷ್ಟೆ. "ಕತ್ತೇ.... ಮಗನೆ" ಎನ್ನದೇ ಮೇಷ್ಟ್ರರ ಬಾಯಿಂದ ಮಾತೇ ಹೊರಡುತ್ತಲಿರಲಿಲ್ಲ.

ನಾವು ಮಾಡೋ ತಪ್ಪುಗಳು ಹೋಗಲಿ. ನಮ್ಮನ್ನು ನೋಡುತ್ತಲೇ ಮೇಷ್ಟ್ರರ ಕಣ್ಣು ಕೆಂಪಾಗುತ್ತಿತ್ತು. ನಮ್ಮಂತಹ ಚಿಳ್ಳೆಪಿಳ್ಳೆಗಳಿಗೆ ಕಡಿವಾಣ ಹಾಕೋದು ಸುಲಭದ ಕೆಲಸವಾಗಿರಲಿಲ್ಲ. ಜಗುಲಿ ಮೇಲೆ ಕೂತು ನಾವು ಮಾಡುತ್ತಿದ್ದ ಗದ್ದಲಕ್ಕೆ ಮಿತಿಯೇ ಇರಲಿಲ್ಲ. ಒಂದು ನಿಮಿಷ ಮೇಷ್ಟ್ರ-ರೇನಾದರೂ ಒಳಕ್ಕೆ ಹೋದರೆ ನಾವು ಒಬ್ಬರಮೇಲೊಬ್ಬರು ಬಿದ್ದು, ಹೊರ-ಳಾಡಿ, ಕಿತ್ತಾಡಿ, ಪರಚಿ, ಕೂಗಿ, ಕಿರುಚಿಕೊಳ್ಳುತ್ತಿದ್ದೆವು. ಇಲ್ಲದೇಹೋದರೆ ಜಗುಲಿ ಬಿಟ್ಟು ಮನೆಯೊಳಕ್ಕೇ ನುಗ್ಗುತ್ತಿದ್ದೆವು. ಒಂದು ದಿನವಂತೂ ಮೇಷ್ಟ್ರರನ್ನು ಹುಡುಕಿಕೊಂಡು ರೂಮಿನಿಂದ ರೂಮಿಗೆ ಹೋದರೆ, ಅಡುಗೆ ಮನೇಲಿ ಒಲೇ ಮುಂದೆ ಮೇಷ್ಟ್ರು ಏನನ್ನೋ ಬೇಯಿಸುತ್ತ ಕುಳಿತಿದ್ದರು. ನಾವು ಮೇಷ್ಟ್ರರನ್ನು ನೋಡಿದ್ದೇ ಆಶ್ಚರ್ಯದಿಂದ, "ಮೇಷ್ಟ್ರೆ, ನಿಮಗೆ ಅಡುಗೆ ಮಾಡೋಕೆ ಬರುತ್ತೆಯೆ?" ಎಂದೆವು. ನಮ್ಮ ಮಾತು ಕೇಳಿ ಅಲ್ಲೇ ನಿಂತಿದ್ದ ಹೆಂಗಸೊಬ್ಬರು ನಕ್ಕರು.

ಮೇಷ್ಟ್ರು ನಮ್ಮನ್ನು ನೋಡಿ ಗದರಿಸಿದರು :

"ಹೊರಕ್ಕೆ ಹೋಗುತ್ತೀರೋ ಇಲ್ಲವೊ. ಇದೇನು ನಿಮ್ಮ ಕ್ಲಾಸು ರೂಮು ಅಂತ ತಿಳಿದುಕೊಂಡುಬಿಟ್ಟರೊ ?" ನಾವು ಉಸಿರೆತ್ತದೆ ಜಗುಲಿಗೆ

ಹಿಂತಿರುಗಿಬಿಟ್ಟೆವು. ಮೇಷ್ಟ್ರರು ಹಿಂತಿರುಗಿ ಬಂದು ನಾವು ನೋವಿನಿಂದ ಅರಚಿಕೊಳ್ಳುವರೆಗೆ ಕಿವಿ ಹಿಂಡಿದರು.

"ಏನೋ ಪಾಪ, ಒಂದು ನಾಲ್ಕಕ್ಷರ ಕಲಿತು ಎಲ್ಲಾದರೂ ನಾಗರಿಕರಾಗಿ ಬಾಳಲಿ ಅಂತ ಸೇರಿಸಿಕೊಂಡರೆ ಏನು ಬುದ್ಧಿ ಕಲೀತಾ ಇದ್ದೀರೊ ಕತ್ತೆ........ಮಕ್ಕಳಾ........"

"ಇನ್ನುಮೇಲೇನಾದರೂ ಆ ಹೊಸತಿಲಿನಿಂದ ಒಳಕ್ಕೆ ಬಂದರೆ ಪೋಲೀಸಿನೋರಿಗೆ ಹಿಡಿದು ಕೊಟ್ಟುಬಿಡುತ್ತೇನೆ ಅಷ್ಟೆ." ಅಲ್ಲಿಗೆ ಆ ಘಟನೆ ಮುಕ್ತಾಯಗೊಂಡಿತ್ತು. ಅಲ್ಲಿಂದ ಮುಂದೆ ಎಂದೂ ಅವರ ಮನೆಯೊಳಗೆ ಹೋಗಲಿಲ್ಲ. ಆದರೆ ಮೇಷ್ಟ್ರರು ಮನೆಯೊಳಕ್ಕೆ ಹೋಗುತ್ತಲೇ ನಾವು ಈ ಕಡೆ ಬಚ್ಚಲಿನಲ್ಲಿ ಹರಿಯುತ್ತಿದ್ದ ನೀರನ್ನು ನೋಡತೊಡಗುತ್ತಿದ್ದೆವು. ಆಮೇಲೆ ನೋಟುಪುಸ್ತಕದಿಂದ ಹಾಳೆಗಳನ್ನು ಹರಿದು ಬಚ್ಚಲು ನೀರಿನಲ್ಲಿ ದೋಣಿಗಳನ್ನು ಮಾಡಿ ತೇಲಿಬಿಡುತ್ತಿದ್ದೆವು. ಬರುಬರುತ್ತಾ ಬೋರಲಾಗಿ ಮಲಗಿಕೊಂಡು ಯಾರ ದೋಣಿ ಮೊದಲು ಹೋಗುತ್ತೆ ಅಂತ ನೋಡೋದು ನಮ್ಮ ದಿನಚರಿಯಾಗಿಬಿಟ್ಟಿತು. ನಮ್ಮ ಆಟವನ್ನು ಗಮನಿಸಿದ್ದ ಮೇಷ್ಟ್ರು ನಮಗೆ ಎಚ್ಚರಿಕೆಯನ್ನೀಯುವುದನ್ನು ಮರೆತಿರಲಿಲ್ಲ.

"ಅಲ್ಲಿಂದ ಏನಾದರೂ ಮಗುಚಿಕೊಂಡರೆ ಸರಯೂ ನದೀನೇ ಗತಿ. ನಿಮ್ಮ ಅಮ್ಮ ಅಪ್ಪನ್ನ ಅಲ್ಲಿ ಹೋಗಿ ಹುಡುಕೀ ಅಂತಾ ಹೇಳಬೇಕು ಅಷ್ಟೆ."

ನಾವು ತಿಂಗಳಿಗೆ ಕೊಡುತ್ತಿದ್ದ ಒಂದು ರೂಪಾಯಿನಲ್ಲೇ ಅವರು ನಮ್ಮಲ್ಲಿಟ್ಟಿದ್ದ ಪ್ರೀತಿ ಕೇಂದ್ರೀಕೃತವಾಗಿತ್ತು. ಆಗಾಗ ಏನಾದರೂ ಅದೂ ಇದೂ ತೆಗೆದುಕೊಂಡು ಹೋದರೆ ಅವರ ಪ್ರೀತಿಯ ಪಾಲು ಅವಕ್ಕೂ ಸಿಗುತ್ತಿತ್ತು. ನಮ್ಮ ತಂದೆ ಪ್ರತಿ ತಿಂಗಳು ಎರಡಚ್ಚು ಬೆಲ್ಲ ಕಳಿಸುತ್ತಿದ್ದರು. ಕೆಲವರು ಅಕ್ಕಿ ತರುತ್ತಿದ್ದರು. ಕೆಲವರು ತರಕಾರಿ. ಕೆಲವರು ಮೇಷ್ಟ್ರರು ಏನು ಕೇಳಿದರೆ ಅದನ್ನು ತರುತ್ತಿದ್ದರು. ಉಗ್ರಾಣ ಬರಿದಾದಾಗ ಮೇಷ್ಟ್ರು ನಮ್ಮಲ್ಲಿ ಯಾರನ್ನಾದರೂ ಕರೆದು ಅವನ ಕಿವಿಯಲ್ಲಿ ಉಸುರುತ್ತಿದ್ದರು: "ನೋಡು ಜಾಣಮರಿ, ಎಲ್ಲಿ, ಮನೆಗೆ ಹೋಗಿ ಒಂದಿಷ್ಟು ಸಕ್ಕರೆ ತಕ್ಕೊಂಡು ಬಾ ನೋಡೋಣ. ಮರಿ ಎಷ್ಟು ಜಾಣಮರಿ ಅಂತ ಗೊತ್ತಾಗುತ್ತೆ" ಅಂತಹ ಸಂದರ್ಭ ಬಂದಾಗಲೆಲ್ಲಾ ಮೇಷ್ಟ್ರರ ವಿಶ್ವಾಸ ಹೇಳತೀರದು.

ನಮಗೂ ಅಂತಹ ಸಂದರ್ಭಗಳಲ್ಲಿ ಎಲ್ಲಿಲ್ಲದ ಹೆಮ್ಮೆ ಬಂದುಬಿಡುತ್ತಿತ್ತು. ಅಪ್ಪ ಅಮ್ಮನ್ನ ಕಾಡಿ ಬೇಡಿ ಮೇಷ್ಟ್ರು ಕೇಳಿದ್ದನ್ನು ತೆಗೆದುಕೊಂಡು ಹೋಗಿ ಕೊಡುತ್ತಿದ್ದೆವು. ಅಪ್ಪ ಅಮ್ಮನೂ ಹೆಚ್ಚಿಗೆ ಹೇಳಿಸಿಕೊಳ್ಳುತ್ತಾ ಇರಲಿಲ್ಲ. ಎಷ್ಟಾದರೂ ನಾವು ದಿನಕ್ಕೆ ಹನ್ನೆರಡು ಘಂಟೆ ಮೇಷ್ಟ್ರ ಮನೆಯಲ್ಲಿಯೇ ಕಳೆದುಬಿಡುತ್ತಿದ್ದುದರಿಂದ ಮನೇಲಿ ನಮ್ಮ ಚೇಷ್ಟೆ ತಡೆಯುವ ತಾಪತ್ರಯ-ವಿರುತ್ತಿರಲಿಲ್ಲ.

ಗೊತ್ತುಗುರಿಯಿಲ್ಲದೇ ನಮ್ಮ ಪಾಠ–ಪ್ರವಚನಗಳು ನಡೆಯುತ್ತಿರು-ವಂತೆ ತೋರಿದರೂ ನಮ್ಮ ಮೇಷ್ಟ್ರ ಕೈಕೆಳಗೆ ನಾವೆಲ್ಲಾ ಸುಮಾರಾಗಿ ಮುಂದುವರೆದಿದ್ದೆವು ಒಂದು ವರುಷದೊಳಗೆಲ್ಲಾ ನಾನು ಬೋರ್ಡ ಹೈಸ್ಕೂ-ಲಿಗೆ ಹೋಗುವಷ್ಟು ಮುಂದುವರಿದಿದ್ದೆ. ದೊಡ್ಡ ದೊಡ್ಡ ಪುಸ್ತಕಗಳನ್ನು ಓದುವುದರ ಜೊತೆಗೆ ಇಪ್ಪತ್ತರ ತನಕ ಮಗ್ಗಿ ಹೇಳುತ್ತಿದ್ದೆ. ನಮ್ಮ ಮುದಿ ಮೇಷ್ಟ್ರರೇ ನನ್ನನ್ನು ಆಗ ತಾನೇ ಪ್ರಾರಂಭವಾಗಿದ್ದ ಬೋರ್ಡ ಹೈಸ್ಕೂಲಿಗೆ ಕರೆದುಕೊಂಡು ಹೋಗಿ ಸೇರಿಸಿದರು. ಸೇರಿಸಿದ್ದಷ್ಟೇ ಅಲ್ಲದೆ ನನ್ನನ್ನು ಹೊಸ ಕ್ಲಾಸಿನಲ್ಲಿ ಕೂಡಿಸಿ ನನ್ನ ಜೊತೆಯಲ್ಲಿದ್ದ ಇನ್ನೊಬ್ಬನನ್ನೂ, ನನ್ನನ್ನೂ ಹರಸಿ ಹೋದರು. ಮೇಷ್ಟ್ರುರಿಗೆ ಅಷ್ಟೊಂದು ವಿಶ್ವಾಸವಿರುವುದು ನೋಡಿ ನಮಗೆ ಆಶ್ಚರ್ಯವಾಯಿತು.

ವಿಸ್ಮಯದ ಸುದ್ದಿಯನ್ನು ಹೇಳಲು ಓಡಿ ಬಂದಿದ್ದ ವೇಲನ್ ರಾಜುವಿನ ಎದುರಿನಲ್ಲಿ ಕೈಜೋಡಿಸಿ ನಿಂತುಕೊಂಡನು.

“ ಸ್ವಾಮೀ, ಅಂತೂ ದೇವರು ಕಣ್ಣುಬಿಟ್ಟು ನೋಡಿದ. ”

“ ಬಹಳ ಸಂತೋಷ. ಏನಾಯಿತು ? ”

“ ನನ್ನ ತಂಗಿ ತಾನು ಮಾಡಿರೋ ತಪ್ಪನ್ನೆಲ್ಲಾ ನಮ್ಮ ಮುಂದೆ ಒಪ್ಪಿ-ಕೊಂಡುಬಿಟ್ಟಳು........” ವೇಲನ್ ನಡೆದ ಕಥೆಯನ್ನು ಆಮೂಲಾಗ್ರವಾಗಿ ಹೇಳಲಾರಂಭಿಸಿದ. “ ಈವತ್ತು ಬೆಳಿಗ್ಗೆ ನಾವೆಲ್ಲ ಒಟ್ಟಿಗೆ ಕುಳಿತಿದ್ದೆವು. ಅವಳು ಬಂದವಳೇ ಎಲ್ಲರ ಮುಂದೂ ನಿಂತು, ‘ ಇಷ್ಟು ದಿನ ನಾನು ಮಾಡಿ-ದ್ದೆಲ್ಲ ತಪ್ಪು. ಇನ್ನುಮೇಲೆ ಹಿರಿಯರು ಹೇಳಿದ ಹಾಗೆ ಕೇಳುತ್ತೀನಿ ’ ಅಂದಳು .. ....

“ ನನಗೆ ನಂಬೋದೇ ಕಷ್ಟವಾಯಿತು. ಕನಸೋ, ನನಸೋ ಅಂತ

ತಿಳಕೊಳ್ಳೋಕೆ ನನ್ನ ಮೈಯನ್ನು ಜಿಗುಟಿಕೊಂಡೆ. ಆ ಹುಡುಗಿಯ ವ್ಯವಹಾರದಿಂದ ನಮ್ಮ ಮನೇಲಿ ಮೂದೇವಿ ಬಂದು ಕೂತಹಾಗಿತ್ತು. ನಮ್ಮ ಮನೆ ಭಾಗವಾಗೋ ಸಮಾಚಾರ ಬಿಟ್ಟುಬಿಟ್ಟರೆ ನಮಗೆ ಇದಕ್ಕಿಂತ ಹೆಚ್ಚಿನ ದುಃಖ ಬೇರೊಂದಿರಲಿಲ್ಲ. ನೋಡಿ ಸ್ವಾಮಿ, ನಿಮಗೆ ತಿಳಿದಹಾಗೆ ಆ ಹುಡುಗೀನ ಕಂಡರೆ ನಮಗೆಲ್ಲಾ ತುಂಬಾ ಇಷ್ಟ. ಆಕೆ ಆ ಕತ್ತಲೆ ಕೋಣೇಲಿ ಮುದುಡಿಕೊಂಡು ಅನ್ನ–ನೀರಿಲ್ಲದೆ, ಒಂದೂ ಅಲಂಕಾರವಿಲ್ಲದೆ ಹಾಗಿರೋದನ್ನು ಹ್ಯಾಗೆ ತಾನೆ ನೋಡೋದು ಹೇಳಿ. ಅವಳ ಮನಸ್ಸನ್ನು ಸಂತೋಷಪಡಿಸೋದಕ್ಕೋಸ್ಕರ ಎಷ್ಟು ಮಾಡಬೇಕೊ ಅಷ್ಟನ್ನೂ ಮಾಡಿ ಸಾಧ್ಯವಾಗದೆ ಬಿಟ್ಟುಬಿಟ್ಟದ್ದೆವು. ಅವಳ ಸಂಕಟ ಒಂದು ಪಾಲಾದರೆ, ನಮ್ಮ ಸಂಕಟ ನೂರು ಪಾಲು. ಹೀಗಿರೋವಾಗ ಇವತ್ತು ಬೆಳಿಗ್ಗೆ ಇದ್ದಕ್ಕಿದ್ದ ಹಾಗೆ ಬಂದು ಎದುರಿಗೆ ನಿಂತಳು—ಅಂದರೆ ಆಶ್ಚರ್ಯವಲ್ಲವೇ ಸ್ವಾಮಿ?

"ಅದೂ ಹಾಗೆ ಮೂದೇವಿ ಹಾಗೆ ಬರಲಿಲ್ಲ, ಲಕ್ಷಣವಾಗಿ ತಲೆ ಬಾಚಿಕೊಂಡು ಹೂವು ಮುಡಿದುಕೊಂಡು ಬಂದಿದ್ದಳು. ಮುಖದಲ್ಲಿ ಸ್ವಲ್ಪವೂ ಚಿಂತೆ ಇರಲಿಲ್ಲ. 'ಇಷ್ಟು ದಿವಸ ನಿಮಗೆಲ್ಲಾ ತೊಂದರೆ ಕೊಟ್ಟೆ. ದಯವಿಟ್ಟು ಕ್ಷಮಿಸಿಬಿಡಿ. ಇನ್ನುಮೇಲೆ ಹಿರಿಯರು ನೀವು ಹೇಳಿದ ಹಾಗೆ ಕೇಳುತ್ತೀನಿ' ಅಂದಳು. ಸ್ವಲ್ಪಹೊತ್ತು ಬಿಟ್ಟು ನಾನು ಕೇಳಿದೆ. 'ಹಾಗಾದರೆ ನಾನೊಪ್ಪಿದ ಹುಡುಗನ್ನ ಮದುವೆ ಮಾಡಿಕೋತಿಯಾ?'

"ಅವಳು ಕೂಡಲೇ ಉತ್ತರ ಹೇಳದೆ ತಲೆ ಬಗ್ಗಿಸಿ ನಿಂತುಕೊಂಡಳು. ನನ್ನ ಹೆಂಡತಿ ಅವಳನ್ನು ಪಕ್ಕಕ್ಕೆ ಕರೆದುಕೊಂಡು ಹೋಗಿ ಕೇಳಿದಳು. ಹುಡುಗಿ ಒಪ್ಪಿತು. ವರನ ಮನೆಯೋರಿಗೆ ಸುದ್ದಿ ತಿಳಿಸಿದೀವಿ. ಇನ್ನೇನು ಇಷ್ಟರಲ್ಲೇ ಲಗ್ನವಾಗುತ್ತೆ. ಒಡವೆ, ವಸ್ತ್ರ, ದುಡ್ಡು, ಕಾಸು ಎಲ್ಲಾ ಸಿದ್ಧವಾಗಿದೆ. ಓಲಗದೋರಿಗೆ ನಾಳೆ ಬೆಳಿಗ್ಗೆ ಹೇಳಿದರೆ ಸಾಕು. ಪುರೋಹಿತರಿಗೆ ಕೇಳಿದೆ; ಪರವಾಗಿಲ್ಲ, ಕಾಲ ಪ್ರಶಸ್ತವಾಗಿದೆ, ಮದುವೆಗೆ ಯೋಗ್ಯವಾಗಿದೆ ಎಂದರು. ಒಂದು ನಿಮಿಷಾನೂ ತಡಮಾಡದೆ ಹಾಗೆ ಮುಗಿಸಬೇಕು ಅಂತ ಇದ್ದೇನೆ."

"ತಡಮಾಡಿದರೆ ಹುಡುಗಿ ಮನಸ್ಸು ಬದಲಾಯಿಸಿಬಿಡಬಹುದು ಅಂತಲೊ" ರಾಜು ಕೇಳಿದ. ವೇಲನ್ ಇಷ್ಟು ಆತುರಾತುರವಾಗಿ ಮದು-

ವೆಯ ಶಾಸ್ತ್ರ ಮುಗಿಸಿಬಿಡುವುದರ ಕಾರಣ ರಾಜುವಿಗೆ ಗೊತ್ತಿತ್ತು.

ಆದರೆ ರಾಜುವಿನ ಮಾತು ಕೇಳುತ್ತಲೇ ವೇಲನ್‌ಗೆ ಆದ ಆಶ್ಚರ್ಯ ಅಷ್ಟಿಷ್ಟಲ್ಲ. "ನನ್ನ ಮನಸ್ಸಿನಲ್ಲಿ ಏನಿದೆ ಅಂತ ನಿಮಗೆ ಹೇಗೆ ತಿಳೀತು ಸ್ವಾಮಿ?"

ರಾಜು ಮಾತನಾಡಲಿಲ್ಲ. ಆಡಿದ ಮಾತಿಗೆಲ್ಲಾ ಮೆಚ್ಚುಗೆ ಸಿಗಬೇಕೆ? ಇದೂ ಕಷ್ಟವೇ. ಅದಕ್ಕೆ ಇದ್ದುದನ್ನು ಇದ್ದಹಾಗೆ ಹೇಳಿಬಿಡುವುದು ಒಳ್ಳೆಯ-ದೆಂದುಕೊಂಡು ರಾಜು, "ನಾನು ಊಹಿಸಿದ್ದು ಅಂತಹ ದೊಡ್ಡ ವಿಷಯ-ವೇನೂ ಅಲ್ಲ."

"ಇರಬಹುದು ಸ್ವಾಮಿ. ತಮ್ಮಂತಹ ದೊಡ್ಡವರಿಗೆ ಇವೆಲ್ಲಾ ದೊಡ್ಡ ವಿಷಯಗಳಲ್ಲ. ಆದರೆ ನಮ್ಮಂತಹರಿಗೆ ಬಾಕಿಯವರ ಮನಸ್ಸಿನಲ್ಲಿ ಏನಿದೆ ಅಂತ ಹೇಳೋದು ಸಾಧ್ಯವೇ?"

ಅವನ ಮನಸ್ಸನ್ನು ತಿರುಗಿಸಲು ರಾಜು ಬೇರೆ ಮಾತೆತ್ತಿದ. "ಹುಡುಗಾ ಏನು ಹೇಳುತ್ತಾನೆ ತಿಳಿದಿದೆಯೊ? ಆತ ಸಿದ್ಧವಾಗಿದ್ದಾನೇನು? ಆಕೆ ಬೇಡವೆಂದು ಬಿಟ್ಟದ್ದಲ್ಲ. ಆದ್ದರಿಂದ ಆ ಹುಡುಗ ಏನೂ ತಿಳಿದುಕೊಳ್ಳ-ಲಿಲ್ಲವೆ?"

"ಇಲ್ಲಾ, ನಮ್ಮ ಹುಡುಗಿ ಒಪ್ಪಿಕೊಂಡ ಮೇಲೆ ಪುರೋಹಿತರನ್ನು ಅವರ ಮನೆಗೆ ಕಳಿಸಿದ್ದೆ. ಹುಡುಗ ಒಪ್ಪಿದ್ದಾನಂತೆ. ಆಗಿಹೋದದ್ದು ಆಗಿ-ಹೋಯಿತು. ಅದನ್ನೆಲ್ಲಾ ಈಗ ಮತ್ತೆ ಕೆದರೋದು ಬೇಡ ಅಂತ ಹೇಳಿ ತಿಳಿಸಿದ್ದಾನೆ. ಅಂತೂ ಇಬ್ಬರೂ ಒಪ್ಪಿದ್ದಾರೆ."

"ಅಷ್ಟೆ ಬೇಕಾದ್ದು............" ಬೇರೆ ಏನೂ ಹೇಳಲು ರಾಜುವಿಗೆ ತೋಚಲಿಲ್ಲ. ಇನ್ನೇನಾದರೂ ಮಾತಾಡಿ ಅವನ ಮೆಚ್ಚುಗೆ ಗಳಿಸುವುದೂ ಬೇಕಾಗಿರಲಿಲ್ಲ. ಅವನ ಚುರುಕು ಬುದ್ಧಿಯನ್ನು ಕಂಡು ಈಚೀಚೆಗೆ ಅವ-ನಿಗೇ ಹೆದರಿಕೆಯಾಗುತ್ತಿತ್ತು. ಬಾಯಿ ತೆರೆಯುವುದಕ್ಕೆ ಭಯವಾಗುತ್ತಿತ್ತು. ಆದರೆ ಅದರಿಂದ ಎಂತಹ ತೊಂದರೆಯೊ, ಯಾರಿಗೆ ಗೊತ್ತು?"

ಇಷ್ಟೆಲ್ಲಾ ಮುನ್ನೆಚ್ಚರಿಕೆ ವಹಿಸಿದರೂ ರಾಜುವಿಗೆ ತೊಂದರೆ ತಪ್ಪ-ಲಿಲ್ಲ. ವೇಲನ್ ವ್ಯವಹಾರವೆಲ್ಲ ಸುಗಮವಾಗಿ ಮುಕ್ತಾಯವಾಗಿತ್ತು. ತನ್ನ ತಂಗಿಯ ಮದುವೆಗೆ ಆಮಂತ್ರಿಸಲು ವೇಲನ್ ರಾಜುವಿನ ಬಳಿಗೆ ಬಂದನು.

ಮದುವೆಗೆ ತಾನು ಬರಲಾಗುವುದಿಲ್ಲವೆಂದು ತಿಳಿಸಲು ರಾಜು ವಿಶ್ವಪ್ರಯತ್ನ ಪಡಬೇಕಾಯಿತು. ಆದರೂ ಮದುವೆಯೆಲ್ಲಾ ಮುಗಿದ ಮೇಲೆ ವೇಲನ್ ತಟ್ಟೆಯ ತುಂಬಾ ಹೂವು-ಹಣ್ಣು ತುಂಬಿಕೊಂಡು ಅದರ ಮೇಲೊಂದು ರೇಶ್ಮೆ ವಸ್ತ್ರ ಹೊದಿಸಿಕೊಂಡು ಬಂದನು. ರಾಜು ಬೇಡವೆನ್ನಲಿಲ್ಲ.

ಮದುವೆಗಂತೂ ರಾಜು ಹೋಗಲಿಲ್ಲ. ತನ್ನ ಬುದ್ಧಿಯನ್ನೆಲ್ಲಾ ಖರ್ಚು ಮಾಡಿ ಅದರಿಂದ ತಪ್ಪಿಸಿಕೊಂಡನು. ಗುಂಪಿನ ಮಧ್ಯೆ ಸಿಕ್ಕಿಹಾಕಿಕೊಳ್ಳು-ವುದು ಅವನಿಗೆ ಬೇಕಾಗಿರಲಿಲ್ಲ. ತನ್ನ ಸುತ್ತ ಜನ ಸೇರುವುದೂ ಅವನಿಗಿಷ್ಟ-ವಿರಲಿಲ್ಲ. ಆದರೆ ಜನ ಮಾತ್ರ ಅವನನ್ನು ಬಿಡಲಿಲ್ಲ. ತಾನು ಮದುವೆಗೆ ಹೋಗದಿದ್ದರೆ ಮದುವೆಯ ಜನವೆಲ್ಲಾ ಬರುವುದೇ ಅವನಲ್ಲಿಗೆ ನಿಜವಾ-ಗಿತ್ತು. ಮದುವೆಯಾದ ಕೂಡಲೇ ತನ್ನ ತಂಗಿಯನ್ನೂ, ತಂಗಿಯ ಗಂಡ-ನನ್ನೂ ಕರೆದುಕೊಂಡು ಬಂದನು. ಅವರ ಹಿಂದೆ ಬಂಧು-ಬಳಗವೆಲ್ಲಾ ಬಂದಿತ್ತು. ತನ್ನ ದುಃಖ ಕೊನೆಗೊಳ್ಳುವುದಕ್ಕೆ ರಾಜುವೇ ಕಾರಣನೆಂದು ಆ ಹುಡುಗಿಯೇ ಹೇಳಿದ್ದಳಂತೆ.

"ಅವರು ಯಾರ ಜೊತೇಲೂ ಮಾತಾಡೋದಿಲ್ಲ. ಆದರೆ ಒಂದು ಸಲ ಅವರು ನೋಡಿದರೂ ಸಾಕು: ನಾವು ಮೊದಲಿನ ಮನುಷ್ಯರೇ ಅಲ್ಲ."

ದಿನ ಕಳೆದ ಹಾಗೆ ರಾಜುವಿನ ಬಳಿಗೆ ಬರುವವರ ಸಂಖ್ಯೆ ಹೆಚ್ಚಾ-ಯಿತು. ಹೊಲದ ಕೆಲಸ ಮುಗಿದ ಕೂಡಲೇ ತಪ್ಪದೇ ಬಂದುಬಿಡುತ್ತಿದ್ದ, ವೇಲನ್. ರಾಜು ಮಾತನಾಡಿದರೆ ಕೇಳುವುದು. ಇಲ್ಲದೇ ಇದ್ದರೆ ಕತ್ತ-ಲಾಗುವ ತನಕ ಸುಮ್ಮನೆ ಕುಳಿತಿದ್ದು ಮನೆಗೆ ಮರಳುವುದು. ಇದು ಅವನ ದಿನಚರಿಯಾಯಿತು. ವೇಲನ್ ಜೊತೆಗೆ ಇನ್ನೂ ಕೆಲವರು ಪ್ರತಿದಿನವೂ ಬರತೊಡಗಿದ್ದರು. ಅವರು ಯಾರೆಂದು ರಾಜು ಕೇಳಲಿಲ್ಲ. ಕೇಳುವುದು ಸರಿಯೂ ಅಲ್ಲ ನದಿಯ ದಂಡೆ ಯಾರಪ್ಪನ ಗಂಟೂ ಅಲ್ಲ. ಅಲ್ಲಿಗೆ ಯಾರು ಬೇಕಾದರೂ ಬಂದು ಕೂಡಬಹುದಾಗಿತ್ತು. ಅದೂ ಅಲ್ಲದೆ ತಾನೇ ಅಲ್ಲಿಗೆ ಹೇಳದೆ ಕೇಳದೆ ಬಂದವನು. ರಾಜುವನ್ನು ಹುಡುಕಿಕೊಂಡು ಬಂದವರು ಅವನಿಗಿಂತ ಒಂದು ಮೆಟ್ಟಲು ಕೆಳಗೆ ಕುಳಿತು ಅವನನ್ನೇ ನೋಡುತ್ತಿದ್ದರು. ಅವನಿಗಾಗಿ ಯಾರೂ ಏನೂ ಕೇಳುತ್ತಿರಲಿಲ್ಲ. ಸುಮ್ಮನೆ ಅದೇ ಜಾಗದಲ್ಲಿ ಕುಳಿತು ನದಿಯನ್ನು ನೋಡುವುದಷ್ಟೇ ಅವನ ಕೆಲಸ. ಆದರೆ ಮನಸ್ಸು

ಮಾತ್ರ ಮುಂದೆ ಎಲ್ಲಿಗೆ ಹೋಗಬೇಕು? ಏನು ಮಾಡಬೇಕು? ಎನ್ನುವುದನ್ನು ಯೋಚಿಸುತ್ತಿತ್ತು. ಅವನ ಧ್ಯಾನಕ್ಕೆ ಎಲ್ಲಿ ಭಂಗ ಬರುವುದೊ ಎಂದು ಆ ರೈತರು ಗಟ್ಟಿಯಾಗಿ ಉಸಿರು ಸಹ ಬಿಡುತ್ತಿರಲಿಲ್ಲ. ಇಂತಹ ಸಂದರ್ಭಗಳಲ್ಲಿ ರಾಜುವಿಗೆ ಹಿಂಸೆಯಾಗುತ್ತಿತ್ತು. ಅಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಹೋದರೆ ಸಾಕೆನಿಸುತ್ತಿತ್ತು.

ಬೆಳಗೆಲ್ಲಾ ಅವನ ಹತ್ತಿರ ಯಾರೂ ಬರುತ್ತಿರಲಿಲ್ಲ. ಆದರೆ ಸಾಯಂಕಾಲವಾದ ಹಾಗೆಲ್ಲಾ ರೈತರು ಬರುವುದು ಹೆಚ್ಚುತ್ತಿತ್ತು.

ಒಂದು ದಿನ ಸಾಯಂಕಾಲ ಅವರು ಬರುವುದಕ್ಕೆ ಮೊದಲೇ ರಾಜು ದೇವಸ್ಥಾನದ ಹಿಂದಿದ್ದ ದೊಡ್ಡ ದಾಸವಾಳದ ಗಿಡದ ಹಿಂದೆ ಅವಿತಿಟ್ಟುಕೊಂಡನು.

ಗಿಡದ ತುಂಬಾ ಕೆಲವು ದಾಸವಾಳದ ಹೂವುಗಳು. ರಾಜು ಗಿಡದ ಮರೆಯಲ್ಲೇ ಕುಳಿತು ರೈತರು ಬರುವುದನ್ನು ನೋಡಿದನು. ಅವರ ಧ್ವನಿಯನ್ನೂ ಕೇಳಿದನು. ಹೆಚ್ಚು ಗದ್ದಲಮಾಡದೇ ಮೆತ್ತಗೆ ಪಿಸುಗುಟ್ಟುತ್ತಲೇ ಇದ್ದರು. ನದಿಯ ದಡದ ಹತ್ತಿರ ನೋಡಿ ರಾಜು ಅಲ್ಲೆಲ್ಲೂ ಕಾಣದೆ ಹೋಗಲು ದೇವಸ್ಥಾನದ ಸುತ್ತಲೂ ಹುಡುಕಿದರು. ದಾಸವಾಳದ ಗಿಡವನ್ನು ಅವರು ಹಾದು ಹೋದಾಗಲಂತೂ ರಾಜುವಿನ ಎದೆ ಡವಡವ ಹೊಡೆದುಕೊಂಡಿತು. ಒಂದು ವೇಳೆ ಅವರು ಗಿಡದ ಹಿಂದಿದ್ದ ತನ್ನನ್ನು ಕಂಡುಹಿಡಿದು ಬಿಟ್ಟರೆ ಆಗ ಏನು ಹೇಳುವುದೆಂದು ಮನಸ್ಸು ಯೋಚಿಸುತ್ತಿತ್ತು. ಧ್ಯಾನಕ್ಕೆ ಆ ದಾಸವಾಳದ ಗಿಡದ ನೆರಳು ಪ್ರಶಸ್ತವಾದದ್ದೆಂದು ಹೇಳಬಹುದು. ಆದರೆ ರೈತರಿಗೆ ಅವನಿದ್ದ ಸ್ಥಳವನ್ನು ಕಂಡುಹಿಡಿಯಲಾಗಲಿಲ್ಲ. ಗಿಡದ ಹತ್ತಿರವೆ ನಿಂತು ಮಾತನಾಡತೊಡಗಿದರು, ತಗ್ಗಿದ ಧ್ವನಿಯಲ್ಲಿ: .

"ಎಲ್ಲಿಗೆ ಹೋಗಿರಬಹುದು?"

"ಅವರೇನು ಮಹಾನುಭಾವರು. ಎಲ್ಲಿಗೆ ಬೇಕಾದರೂ ಹೋಗಿರಬಹುದು. ಅವರಿಗೆ ಮಾಡೋಕೆ ಒಂದೇ ಎರಡೇ—ನೂರೆಂಟು ಕೆಲಸ."

"ಇಲ್ಲ, ಇಲ್ಲ ನಿನಗೆ ಗೊತ್ತಿಲ್ಲ, ಅವರು ಸನ್ಯಾಸಿಗಳು. ಅವರಿಗೂ ಈ ಪ್ರಪಂಚಕ್ಕೂ ಸಂಬಂಧವೇ ಇಲ್ಲ. ಇವತ್ತು ಇಲ್ಲಿರಬೇಕಾಗಿತ್ತು. ಏನನ್ಯಾಯ! ನನಗೆ ಅವರ ದರ್ಶನಲಾಭ ಸಿಗದೇ ಹೋಯಿತಲ್ಲ."

" ಸುಮ್ಮನೆ ಅವರ ಹತ್ತಿರ ಕೂತಿದ್ದರೆ ಸಾಕು. ನೋಡು ನಮ್ಮನೇಲಿ ಎಷ್ಟು ಬದಲಾವಣೆಯಾಗಿ ಹೋಯಿತು. ನನ್ನ ದೊಡ್ಡಪ್ಪನ ಮಗ ನಿನ್ನೆ ರಾತ್ರಿ ಬಂದು ಕಾಗದ–ಪತ್ರಾನೆಲ್ಲಾ ತಂದು ಕೊಟ್ಟುಬಿಟ್ಟ. ಅವೆಲ್ಲಾ ಅವನ ಹತ್ತಿರ ಇದ್ದಷ್ಟು ದಿನವೂ ನಾನೇ ಅವನ ಕೈಲಿ ಚೂರಿ ಕೊಟ್ಟು ನಮ್ಮನ್ನ ತಿವಿ ಅಂತ ಹೇಳಿದ ಹಾಗಿತ್ತು ನನ್ನ ಸ್ಥಿತಿ."

" ಅಂತಹ ಮಹಾನುಭಾವ ನಮ್ಮೂರಿಗೆ ಬಂದದ್ದು ನಮ್ಮ ಅದೃಷ್ಟ."

" ಆದರೆ ಇವತ್ತು ಹೊರಟುಹೋಗಿದ್ದಾರಲ್ಲ. ಒಂದು ವೇಳೆ ನಮ್ಮ ಒಳ್ಳೆಯದಕ್ಕೆಂತಲೇ ಹೋಗಿದ್ದರೂ ಹೋಗಿರಬಹುದು."

" ಇಲ್ಲ, ಅವರು ಹೊರಟುಹೋಗಿರೋದು ನಮ್ಮ ದುರದೃಷ್ಟವೇ ನಿಜ."

" ಆದರೆ ಅವರ ಬಟ್ಟೆ–ಬರೆ ಇನ್ನೂ ಆ ಮಂಟಪದಲ್ಲೇ ಇವೆ."

" ಅವರಿಗೇನು ಬಟ್ಟೆಯ ಮೇಲೆ ಯೋಚನೆಯೇ ?"

" ನಿನ್ನೆ ನಾನು ತಂದಿಟ್ಟದ್ದ ಊಟ ತಿಂದುಬಿಟ್ಟಿದ್ದಾರೆ."

" ಇವತ್ತು ಏನು ತಂದಿದೆಯೊ ಅದನ್ನು ಅಲ್ಲೇ ಇಟ್ಟು ಬಾ. ಪಾಪ ಹೊರಗೆ ಸುತ್ತಾಡಿಕೊಂಡು ಬಂದರೆ ಹಸಿವಾಗಬಹುದು."

ಅವನ ಔದಾರ್ಯಕ್ಕಾಗಿ ರಾಜುವು ಮನಸ್ಸಿನಲ್ಲೇ ಅವನನ್ನು ವಂದಿಸಿದನು.

" ಕೆಲವು ಸಲ ಸುಮ್ಮನೆ ನೆನೆಸಿಕೊಂಡಾಕ್ಷಣ ಯೋಗಿಗಳು ಹಿಮಾಲಯ ಪರ್ವತಕ್ಕೆ ಹೊರಟುಹೋಗುತ್ತಾರೆ ಗೊತ್ತೇನು ?"

" ಅವರು ಅಂತಹ ಯೋಗಿಯೇನಲ್ಲ."

" ಹೇಗೆ ಹೇಳೋದು ? ಯಾವಾಗಲೂ ಮುಖ ನೋಡಿ ಮನುಷ್ಯನ ಲಕ್ಷಣ ಹೇಳೋದಕ್ಕಾಗೋದಿಲ್ಲ........"

ರೈತರೆಲ್ಲಾ ದಾಸವಾಳದ ಗಿಡವನ್ನು ದಾಟಿ ನದಿಯ ಮೆಟ್ಟಿಲಿನ ಬಳಿಗೆ ಹೋಗಿ ಕುಳಿತರು. ಬಹಳ ಹೊತ್ತು ಅವರು ತಮ್ಮತಮ್ಮಲ್ಲೇ ಮಾತನಾಡಿಕೊಳ್ಳುತ್ತಿರುವುದು ರಾಜುವಿಗೆ ಕೇಳಿಸುತ್ತಿತ್ತು. ಆಮೇಲೆ ಅವರೆಲ್ಲಾ ಹೊರಟುಹೋದರು........

" ತುಂಬಾ ಕತ್ತಲಾಗೋದಕ್ಕಿಂತ ಮುಂಚೆಯೇ ಮನೆ ಸೇರಿಕೊಂಡಿರ-

ಬೇಕು. ಇಲ್ಲೆಲ್ಲಾ ಮೊಸಳೆ ಇದೆಯಂತೆ."

"ಒಂದು ಸಲ ನನಗೆ ತಿಳಿದ ಒಬ್ಬ ಹುಡುಗನನ್ನ ಮೊಸಳೆ ಇದೇ ಸ್ಥಳದಲ್ಲಿ ಹಿಡಿದುಬಿಟ್ಟಿತು."

"ಆಮೇಲೆ?"

"ಆಮೇಲೇನು........ನೀರೊಳಕ್ಕೆ ಎಳೆದುಕೊಂಡು ಹೋಯಿತು."

ರಾಜುವಿಗೆ ಅವರ ಧ್ವನಿ ದೂರದಲ್ಲಿ ಕೇಳಿಸುತ್ತಿತ್ತು. ಗಿಡದ ಮರೆಯಿಂದ ಮೆಲ್ಲಗೆ ತಲೆಯೆತ್ತಿ ನೋಡಿದಾಗ ನದಿಯ ಆಚೆಯ ದಡದಲ್ಲಿ ಅವರು ಹೋಗುತ್ತಿದ್ದುದು ಮಸುಕು-ಮಸುಕಾಗಿ ಕಾಣಿಸುತ್ತಿತ್ತು. ಅವರು ಮರೆಯಾಗುವ ವರೆಗೂ ಕಾದಿದ್ದು ರಾಜು ಗುಡಿಯೊಳಗೆ ಹೋಗಿ ಎಣ್ಣೆಯ ದೀಪ ಹಚ್ಚಿದನು. ಹೊಟ್ಟೆ ಹಸಿಯುತ್ತಿತ್ತು. ಆ ಪುರಾತನ ಕಲ್ಲುದೇವರ ಮುಂದೆ ಬಾಳೆಯೆಲೆಯಲ್ಲಿ ಸುತ್ತಿದ್ದ ಊಟ ಅವನಿಗಾಗಿ ಕಾಯುತ್ತಿತ್ತು. ಪ್ರತಿನಿತ್ಯ ಊಟ–ತಿಂಡಿ ತಪ್ಪದೇ ತಂದಿಡುತ್ತಿದ್ದ ಅವರನ್ನು ಮನಸ್ಸಿನಲ್ಲಿ ವಂದಿಸಿದನು. ತನ್ನನ್ನು ಊಟದ ಅಗತ್ಯವೇ ಇಲ್ಲದ ಬರಿಯ ಅನಿಲಾಹಾರಿ ಎಂದು ತಿಳಿಯುವ ದಿನ ಮಾತ್ರ ಬರದಿರಲಿ ಎಂದು ಪ್ರಾರ್ಥಿಸಿದನು.

ಮಾರನೆಯ ದಿನ ಬೆಳಿಗ್ಗೆ ಎದ್ದು ಸ್ನಾನಾದಿಗಳನ್ನು ಮುಗಿಸಿ ಗುಡಿಯೊಳಗಿದ್ದ ತನ್ನ ಸ್ಟೋವ್ ಹೊತ್ತಿಸಿ ಕಾಫಿ ಮಾಡಿ ಕುಡಿದಮೇಲೆ ಮನಸ್ಸಿಗೆ ನೆಮ್ಮದಿಯಾಯಿತು. ತನ್ನ ಭವಿಷ್ಯವನ್ನು ಇಂದು ನಿರ್ಧರಿಸಬೇಕಾಗಿತ್ತು. ತನ್ನ ಹುಟ್ಟೂರಿಗೆ ಮರಳಿ ಒಂದೆರಡು ದಿನವಾದರೂ ಜನರ ಅಪಹಾಸ್ಯಕ್ಕೆ ಗುರಿಯಾಗಬೇಕು. ಅವರು ಹಾಸ್ಯ ಮಾಡಿದರೆ, ಕೇಕೆಹಾಕಿ ನಕ್ಕರೆ ಸುಮ್ಮನಿರಬೇಕು. ಇಲ್ಲವೇ ಬೇರೆ ಎಲ್ಲಿಗಾದರೂ ಹೋಗಿಬಿಡಬೇಕು. ಆದರೆ ಎಲ್ಲಿಗೆ ತಾನೆ ಹೋಗುವದು ಸಾಧ್ಯ? ಕಷ್ಟಪಟ್ಟು ಬೆವರು ಸುರಿಸಿ ದುಡಿದು ತಿನ್ನುವುದು ತನ್ನ ಜನ್ಮಕ್ಕೆ ಬಂದಿದ್ದಲ್ಲ. ಈಗಾದರೆ ಕೇಳದೇನೇ ತಾನಿರೋ ಜಾಗಕ್ಕೆ ಹೊತ್ತುಹೊತ್ತಿಗೆ ಊಟ-ತಿಂಡಿ ಬರುತ್ತಾ ಇದೆ. ಇನ್ನೆಲ್ಲಾದರೂ ಹೋದರೆ ಹೀಗೆ ಸುಮ್ಮನೆ ಕೂಡಿಸಿ ಅನ್ನ ಹಾಕುತ್ತಾರೆಯೆ? ಹಾಗಾದರೆ ಎಲ್ಲಿಗೆ ತಾನೆ ಹೋಗಬಹುದು? ಎಲ್ಲೂ ಇಲ್ಲ. ಸುತ್ತಲಿನ ಬೆಟ್ಟದ ತಪ್ಪಲಿನಲ್ಲಿ ಮೇಯುತ್ತಿದ್ದ ಹಸುಗಳು ಆ ಪ್ರದೇಶವನ್ನು ಪ್ರಶಾಂತ ರಮಣೀಯವಾಗಿ ಮಾಡಿದ್ದವು. ರಾಜುವಿಗೆ ಬೇರೆ ದಾರಿಯೇ ಇರಲಿಲ್ಲ. ಈ ಮಾಯಾ-

ನಾಟಕದಲ್ಲಿ ವೇಲನ್ ತನಗೆ ಕೊಟ್ಟ ಪಾತ್ರವನ್ನು ನಿರ್ವಹಿಸದೇ ವಿಧಿಯೇ ಇರಲಿಲ್ಲ.

ಹೀಗೆ ನಿರ್ಧರಿಸಿಕೊಂಡೇ ರಾಜು ಸಾಯಂಕಾಲ ಆ ರೈತರನ್ನು ಎದುರುಗೊಳ್ಳಲು ಸಿದ್ಧನಾದನು. ಎಂದಿನಂತೆ ನದಿಯ ಪಾವಟಿಗೆಯ ಮೇಲೆ ಕಣ್ಣುಮುಚ್ಚಿ ಕುಳಿತನು. ತಾನು ಹೇಳಿದ ಮಾತಿಗೆಲ್ಲಾ ಅವರೆಲ್ಲಿ ಹೆಚ್ಚಿನ ಅರ್ಥವನ್ನು ಕಲ್ಪಿಸಿಬಿಡುತ್ತಾರೊ ಎನ್ನುವುದೇ ಅವನ ಚಿಂತೆ. ಆದ್ದರಿಂದಲೇ ಆ ಮೌನವ್ರತ. ಆದರೆ ಇಂದಿನಿಂದ ಆ ವ್ರತದ ಅವಶ್ಯಕತೆ ಇರಲಿಲ್ಲ. ಎಷ್ಟು ಬುದ್ಧಿಯನ್ನು ಉಪಯೋಗಿಸಬಹುದೋ ಅಷ್ಟನ್ನೂ ಉಪಯೋಗಿಸಲು ರಾಜು ಮನಸ್ಸು ಮಾಡಿದನು. ಎಂತಹ ಆಟ ಬೇಕೋ ಅಂತಹ ಆಟವಾಡಿ, ಎಂತಹ ಮಾತು ಬೇಕೊ ಅಂತಹ ಮಾತಿನ ಮಳೆ ಸುರಿಸಿ ಆ ಹಳ್ಳಿಗರ ಮನಸ್ಸನ್ನಾಕರ್ಷಿಸಲು ಸಿದ್ಧನಾದನು. ಅದಕ್ಕೆ ನದಿಯ ದಂಡೆಗಿಂತ ಗುಡಿ-ಯೊಳಗಿನ ಮಂಟಪವೇ ಚೆನ್ನೆಂದು ಅಲ್ಲಿಗೆ ತನ್ನ ಸ್ಥಳವನ್ನು ಬದಲಾಯಿಸಿ-ದನು. ಸುಮಾರು ಎಷ್ಟು ಹೊತ್ತಿಗೆ ವೇಲನ್ ಹಾಗೂ ಅವನ ಸಂಗಡಿಗರು ಬರಬಹುದೋ ಅಷ್ಟು ಹೊತ್ತಿಗೆ ಸರಿಯಾಗಿ ತನ್ನ ಹೊಸ ಸ್ಥಳದಲ್ಲಿ ಅವರಿಗೆ ದರ್ಶನವೀಯುವುದಕ್ಕೆ ಸರಿಯಾದ ಭಾವಭಂಗಿಯಲ್ಲಿ ಕುಳಿತನು.

ಸೂರ್ಯಾಸ್ತಮಾನದ ಕೆಂಪು ಛಾಯೆ ಗುಡಿಯ ಕಂಬಗಳನ್ನೂ ಬೆಳ-ಗಿತ್ತು. ತೆಂಗಿನ ಮರಗಳೆಲ್ಲಾ ಪೊನ್ನಿನ ಮರಗಳ ಹಾಗೆ ರಾರಾಜಿಸುತ್ತಿ-ದ್ದುವು. ಗೂಡನ್ನು ಸೇರುವುದಕ್ಕೆ ಮೊದಲು ಹಕ್ಕಿಗಳು ತಮ್ಮ ಅಂದಿನ ಗಾನಕ್ಕೆ ಮಂಗಳ ಹಾಡುತ್ತಿದ್ದುವು. ಕತ್ತಲು ಕವಿಯಿತು. ಆದರೂ ವೇಲನ್ ಬರಲಿಲ್ಲ. ಅವನ ಸ್ನೇಹಿತರ ಸುಳಿವೂ ಇಲ್ಲ. ಅಂದೆಲ್ಲಾ ಅವರು ಬರಲೇ ಇಲ್ಲ. ರಾಜುವಿಗೆ ಅಂದು ಊಟವೂ ಇಲ್ಲ. ಆದರೆ ಅದೇನೂ ಅಂತಹ ಮಹತ್ತರ ವಿಷಯವಾಗಿರಲಿಲ್ಲ. ತಿನ್ನದೇ ಉಳಿದಿದ್ದ ಬಾಳೇಹಣ್ಣುಗಳು ಇದ್ದುವು. ಆದರೆ ಅವರು ಬರದೇನೆ ಹೋದರೆ ? ಮುಂದೇನು ಗತಿ ? ರಾಜು-ವಿಗೆ ದಿಕ್ಕೇ ತೋಚಲಿಲ್ಲ. ರಾತ್ರಿಯೆಲ್ಲಾ ಅದೇ ಚಿಂತೆ. ಹಿಂದಿನ ಸಮಸ್ಯೆ-ಗಳೆಲ್ಲಾ ಅವನನ್ನು ಕಿತ್ತು ತಿಂದವು. ಊರಿಗೆ ಮರಳಿದರೆ ತಾನು ಭೋಗ್ಯಕ್ಕೆ ಕೊಟ್ಟರೊ ಮನೇನ ಬಿಡಿಸಿಕೋಬೇಕು. ಅದಕ್ಕೆಲ್ಲ ಎಲ್ಲಿದೆ ದುಡ್ಡು ?

ನದಿ ದಾಟಿ ಊರೊಳಗೆ ಹೋಗಿ ವೇಲನ್‌ನ ಮನೆ ಪತ್ತೆ ಹಚ್ಚು-

ವುದೇ ? ಹಾಗೆ ಮಾಡೋದು ಗೌರವಕ್ಕೆ ಕಡಿಮೆ. ಹಾಗೆ ಮಾಡಿದರೆ ತನ್ನ ನಿಜ ಸ್ವರೂಪ ಬಯಲಾಗಿ ಅವರೆಲ್ಲ ತನ್ನನ್ನು ಅಲಕ್ಷಿಸೋದು ಖಂಡಿತ.

ನದಿಯ ಆಚೆಯ ದಂಡೆಯ ಮೇಲೆ ಒಬ್ಬ ಹುಡುಗ ಕುರಿ ಮೇಯಿಸು-ತ್ತಿದ್ದ. ಅವನನ್ನು ನೋಡಿದ ಕೂಡಲೇ ರಾಜು ಕೈತಟ್ಟಿ ಕರೆದ. ಹುಡುಗ ಬರಲಿಲ್ಲ. ರಾಜು ನದಿಯ ಮೆಟ್ಟಲಿಳಿದು ಹೋಗಿ ಪುನಃ ಕೈತಟ್ಟಿದ.

"ಮಗೂ, ಇಲ್ಲಿ ನೋಡು, ನಾನು ಈ ಗುಡಿಗೆ ಬಂದಿರೊ ಹೊಸ ಪೂಜಾರಿ. ಬಾಳೇಹಣ್ಣಿದೆ ಬೇಕೇ ?"

ಕೈಯಲ್ಲಿದ್ದ ಬಾಳೇಹಣ್ಣನ್ನು ರಾಜು ಹಾಗೇ ಅಲ್ಲಾಡಿಸಿದ. ಅದು ತನ್ನ ಹತ್ತಿರ ಉಳಿದಿದ್ದ ಒಂದೇ ಒಂದು ಬಾಳೇಹಣ್ಣು. ಅದನ್ನೇನಾದರೂ ಆ ಮಗು ತಿಂದು ಹೊರಟುಹೋದರೆ ತನ್ನ ಗತಿ ಅಧೋಗತಿ.

ತಾನೂ ಆ ಪಾಳುಗುಡಿಯಲ್ಲಿ ಮಲಗಿ ಅಲ್ಲಿನ ಕಲ್ಲಿನ ವಿಗ್ರಹಗಳ ಹಾಗೆ ಐತಿಹಾಸಿಕ ಅವಶೇಷವಾಗಬೇಕು ಅಷ್ಟೆ.........ಹೀಗೆಂದುಕೊಳ್ಳು-ತ್ತಿರುವಾಗಲೇ ಹುಡುಗ ಬಾಳೇಹಣ್ಣು ನೋಡಿ ಆಚೆ ದಡದಿಂದ ನದಿಯಲ್ಲಿ ಇಳಿದು ಬಂದಿದ್ದ. ಚೋಟುದ್ದ ಇದ್ದುದರಿಂದ ಕಿವಿಯ ವರೆಗೂ ನೆನೆದು-ಹೋಗಿದ್ದ. "ಮೊದಲು ಆ ತಲೇ ಮೇಲಿರೊ ಟವಲು ತೆಗೆದು ಮೈ ಒರೆ-ಸಿಕೊ" ಎಂದ ರಾಜು.

"ಇಲ್ಲ ಸ್ವಾಮಿ, ನನಗೆ ನೀರು ಅಭ್ಯಾಸವಾಗಿದೆ."

"ಆದರೂ ಹೀಗೆ ಒದ್ದೆಯಾಗಿರಬಾರದು."

ಬಾಳೇಹಣ್ಣಿಗಾಗಿ ಹುಡುಗ ಕೈ ಚಾಚಿ ನುಡಿದ :

"ನನಗೆ ಈಜಲು ಬರುತ್ತೆ. ನಾನು ಯಾವಾಗ ಬಂದರೂ ಈಜು-ತ್ತೇನೆ."

"ಆದರೆ ಇದಕ್ಕೆ ಮೊದಲು ನಾನಿಲ್ಲಿ ನಿನ್ನನ್ನು ನೋಡಲಿಲ್ಲವಲ್ಲ ?"

"ಇಲ್ಲಿ ಬರೋಲ್ಲ. ಇನ್ನೂ ಮುಂದೆ ಹೋಗಿ ಈಜುತ್ತೇನೆ."

"ಇಲ್ಲಿ ಯಾಕೆ ಬರೊಲ್ಲ."

"ಇಲ್ಲಿ ಮೊಸಳೆ ಇದೆ."

"ಆದರೆ ನಾನು ನೋಡಿಯೇ ಇಲ್ಲವಲ್ಲ."

"ಯಾವಾಗಲಾದರೂ ನೀವು ನೋಡೇ ನೋಡುತ್ತೀರಿ. ಸಾಮಾನ್ಯ-

ವಾಗಿ ನನ್ನ ಕುರಿಗಳೆಲ್ಲಾ ಅಲ್ಲಿ ಮೇಯುತ್ತವೆ. ಆದರೆ ಇವತ್ತು ಇಲ್ಲಿ ಒಬ್ಬಾತ ಕೂತಿದಾರೇನೊ ಅಂತ ನೋಡೋಕೆ ಬಂದಿದ್ದೆ."

"ಯಾಕೆ ?"

"ನಮ್ಮ ಚಿಕ್ಕಪ್ಪ ಹೇಳಿದರು, 'ಆ ದೇವಸ್ಥಾನದ ಮುಂದೆ ಕುರಿ ಕಾಯುತ್ತಾ ಇರು. ಮೆಟ್ಟಲಿನ ಮೇಲೆ ಯಾರಾದರೂ ಕೂತಿದ್ದರೆ ಬಂದು ಹೇಳು ಅಂತ' ಅದಕ್ಕೇ ಈವೊತ್ತು ಇಲ್ಲಿಗೆ ಬಂದೆ."

ರಾಜು ಹುಡುಗನಿಗೆ ಬಾಳೇಹಣ್ಣನ್ನು ಕೊಟ್ಟು, "ಆತ ಇಲ್ಲಿ ಬಂದಿದಾರೆ ಅಂತ ನಿಮ್ಮ ಚಿಕ್ಕಪ್ಪನಿಗೆ ಹೋಗಿ ಹೇಳು. ಹಾಗೇ ಇವತ್ತು ಸಾಯಂಕಾಲ ಬರಬೇಕಂತ ಹೇಳು" ಎಂದನು.

ಆ ಚಿಕ್ಕಪ್ಪ ಯಾರು ಅಂತ ರಾಜು ಕೇಳಲಿಲ್ಲ. ಯಾರಾದರೂ ಸರಿಯೆ ಬಂದವರಿಗೆಲ್ಲ ಸ್ವಾಗತ. ಹುಡುಗ ಬಾಳೇಹಣ್ಣು ಸುಲಿದು ತಿಂದು, ಸಿಪ್ಪೆಯನ್ನೂ ತಿನ್ನಲುತೊಡಗಿದನು.

"ಎಲಾ ಹುಡುಗಾ! ಸಿಪ್ಪೇನ ಯಾಕೊ ತಿನ್ನುತ್ತೀಯಾ? ವಾಂತಿಯಾಗುತ್ತೆ ಅಷ್ಟೆ."

"ಇಲ್ಲ ಆಗೋಲ್ಲ" ಎಂದನು ಹುಡುಗ. ಅಂತೂ ಅವನು ಬೇರೆಯವರ ಅಭಿಪ್ರಾಯಕ್ಕೆ ಬೆಲೆ ಕೊಡುವವನಾಗಿರಲಿಲ್ಲ.

ರಾಜು ಮೆಲ್ಲಗೆ ಸೂಚಿಸಬೇಕಾಯಿತು, "ಎಲ್ಲಿ, ಒಳ್ಳೆ ಹುಡುಗ ನೋಡೋಣ, ಓಡಿಹೋಗಿ ನಿಮ್ಮ ಚಿಕ್ಕಪ್ಪನಿಗೆ ಹೇಳಿಬಿಟ್ಟು ಬಾ ಮತ್ತೆ."

ಹುಡುಗ ಓಡುತ್ತಲೆ ತನ್ನ ಕುರಿಗಳತ್ತ ಬೊಟ್ಟು ತೋರಿಸಿ, "ನಾನು ಬರೋವರೆಗೂ ಅವುಗಳ ಮೇಲೆ ಕಣ್ಣಿಟ್ಟಿರಿ" ಎಂದು ಹೊಳೆಯನ್ನು ದಾಟಿ ಹೊರಟುಹೋದನು.

# 3

ಹುಣಿಸೆ ಮರದಾಚೆ ರೈಲು ನಿಲ್ದಾಣ ರೂಪುಗೊಂಡು ನಿಂತಿತ್ತು. ರೈಲು ಕಂಬಿಗಳು ಬಿಸಿಲಿನಲ್ಲಿ ಹೊಳೆಯುತ್ತಿದ್ದುವು. ಸಿಗ್ನಲ್ ದೀಪಗಳು ಕೆಂಪು ಹಸಿರಾಗಿ ವಿರಾಜಿಸುತ್ತಿದ್ದುವು. ಅಂತೂ ರೈಲು ನಿಲ್ದಾಣದಿಂದ ಈಚೆ-ಗೊಂದೂರು, ಆಚೆಗೊಂದೂರು ಆಯಿತು. ಬಿಡುವಿದ್ದಾಗಲೆಲ್ಲಾ ರೈಲು ದಾರಿಯಲ್ಲಿ ಅರ್ಧಮೈಲಿಯ ವರೆಗೂ ನಡೆದೇ ಹೋಗುತ್ತಿದ್ದೆವು. ನಿಲ್ದಾಣ-ದಲ್ಲಿ ಆ ಕೊನೆಯಿಂದ ಈ ಕೊನೆಯ ವರೆಗೂ ಓಡಾಡುತ್ತಿದ್ದೆವು. ಹೊರಾಂ-ಗಣದಲ್ಲಿ ಒಂದು ಗೋಲ್ಡ್ ಮೊಹರ್ ಸಸಿಯನ್ನು ನೆಟ್ಟಿದ್ದರು. ನಾವು ಆಗಾಗ ಸ್ಟೇಷನ್ ಮಾಸ್ಟರರ ಕೋಣೆಯೊಳಕ್ಕೆ ಇಣಿಕಿ ನೋಡುತ್ತಿದ್ದೆವು.

ಆ ಹೊತ್ತು ನಮಗೆಲ್ಲಾ ರಜೆ. ನಮಗೆ ಮಾತ್ರವೇಕೆ, ಒಟ್ಟು ಊರಿಗೇ ರಜೆ. 'ನಮ್ಮೂರಿಗೆ ರೈಲು ಬರುತ್ತೆ' ಅಂತ ಮಕ್ಕಳು–ಮುದುಕರಾದಿಯಾಗಿ ಎಲ್ಲರಿಗೂ ಸಂಭ್ರಮ. ನಿಲ್ದಾಣವೆಲ್ಲಾ ಬಾವುಟಗಳಿಂದ ಅಲಂಕೃತವಾಗಿತ್ತು. ಓಲಗ, ಜೊತೆಗೆ ಬ್ಯಾಂಡು........ರೈಲು ಕಂಬಿಗಳ ಮಧ್ಯೆ ಇಡಿಗಾಯಿ ಒಡೆದಾಯಿತು. ಅಷ್ಟು ಹೊತ್ತಿಗೆ ಎಂಜಿನ್ನೊಂದು ಹೊಗೆ ಕಾರುತ್ತಾ ನಿಲ್ದಾಣದೊಳಗೆ ನುಗ್ಗಿಬಂತು. ಆದರ ಹಿಂದೆ ಒಂದು ನಾಲ್ಕು ಕಂಪಾರ್ಟ-ಮೆಂಟುಗಳು. ಊರಿನ ಪ್ರಮುಖರೆಲ್ಲಾ ನಿಲ್ದಾಣದಲ್ಲಿ ಸೇರಿದ್ದರು. ಅವ-ರೆಲ್ಲರ ಕೈಯಲ್ಲೂ ಹಸಿರುಬಣ್ಣದ ಆಹ್ವಾನಪತ್ರಿಕೆ. ರೈಲ್ವೆ ನಿಲ್ದಾಣದ ಸುತ್ತ-ಮುತ್ತಲೂ ಪೋಲೀಸಿನವರು ಕಾವಲಿದ್ದು ನೂಕನುಗ್ಗಲನ್ನು ತಡೆಗಟ್ಟು-ತ್ತಿದ್ದರು. ನನಗಂತೂ ಇದರಿಂದ ಅಳುವೇ ಬಂದುಬಿಟ್ಟಿತ್ತು. ಜೊತೆಗೆ ರೋಷವೂ ಬಂದಿತ್ತು. ನನ್ನನ್ನು ತಡೆಯೋಕೆ ಇವರು ಯಾರು? ಕಟಕಟೆ-ಯೊಳಗೆ ಹಾಗೂ ಹೀಗೂ ತೂರಿ ಎಂಜಿನ್ ಬರೋಹೊತ್ತಿಗೆ ಅದನ್ನು ಬರ-ಮಾಡಿಕೊಳ್ಳೋದಕ್ಕೆ ಸೇರಿದವರಲ್ಲಿ ನಾನೂ ಒಬ್ಬನಾಗಿದ್ದೆ. ಚೋಟುದ್ದ ನಿಂತಿದ್ದ ನನ್ನನ್ನು ಯಾರೂ ಗಮನಿಸಲಿಲ್ಲ. ಮೇಜಿನ ಸುತ್ತಲೂ ಕೂತ ಜನರ ಮಧ್ಯೆ ಒಬ್ಬಿಬ್ಬರು ಎದ್ದು ಭಾಷಣ ಬಡಿದರು. "ಮಾಲ್ಗುಡಿ"

ಎನ್ನುವ ಹೆಸರನ್ನು ಬಿಟ್ಟರೆ ಅವರ ಭಾಷಣಗಳಲ್ಲಿ ಬೇರೆ ಏನೂ ನನಗೆ ತಿಳಿಯಲಿಲ್ಲ. ಆದರೆ ಅವರೆಲ್ಲಾ ಚಪ್ಪಾಳೆ ತಟ್ಟಿದಾಗ ನಾನೂ ತಟ್ಟಿದೆ. ಅಷ್ಟು ಹೊತ್ತಿಗೆ ಸಿಗ್ನಲ್ ಆಯಿತು. ಗಂಟೆ ಹೊಡೆಯಿತು. ಗಾರ್ಡ್ ತನ್ನ ವಿಸಲ್ ಊದಿದನು. ತಿಂಡಿ-ತೀರ್ಥ ತಿನ್ನುತ್ತಿದ್ದ ಜನ ಗಡಿಬಿಡಿಯಿಂದ ರೈಲಿನೊಳಗೆ ಹತ್ತಿದರು. ನನಗೂ ಅವರಂತೆಯೇ ಮಾಡೋಣವೆನಿಸಿತು. ಆದರೆ ಪೋಲೀಸಿನೋರು ತಡೆದುಬಿಟ್ಟರೆ? ರೈಲು ನಿಮಿಷದಲ್ಲಿ ಮರೆ-ಯಾಯಿತು. ಈಗ ಹೊರಗಿದ್ದವರನ್ನೆಲ್ಲ ಒಳಗೆ ಬಿಟ್ಟರು. ನಮ್ಮಪ್ಪನಿಗೆ ಆವೊತ್ತು ಆದಷ್ಟು ವ್ಯಾಪಾರ ಇನ್ನು ಯಾವತ್ತೂ ಆಗಿರಲಿಲ್ಲ.

ನಮ್ಮ ಮನೆಯ ಮುಂದಿದ್ದ ರೈಲು ನಿಲ್ದಾಣಕ್ಕೆ ಸ್ಟೇಷನ್‌ಮಾಸ್ಟರ್ ಬರುವ ವೇಳೆಗೆ ನಮ್ಮಪ್ಪ ಒಂದು ಜಟಕ ಇಡುವಷ್ಟು ಶ್ರೀಮಂತರಾಗಿದ್ದರು. ಆದರೆ ಅಮ್ಮನಿಗೆ ಮಾತ್ರ ಇದು ಹಿಡಿಸಲಿಲ್ಲ.

" ಇರೋ ಎರಡೆಮ್ಮೆ ಸಾಲದೂಂತ ಈ ಕುದುರೆ ಕಾಟ ಬೇರೆ. "

" ನಿನಗಿದೆಲ್ಲಾ ಗೊತ್ತಾಗೊಲ್ಲ. ದಿನಕ್ಕೆ ಇಪ್ಪತ್ನಾಲ್ಕು ಸಲ ಊರೊ-ಳಗೆ ಹೋಗಬೇಕು. ಹತ್ತಿಪ್ಪತ್ತು ಸಲ ಬ್ಯಾಂಕಿಗೆ ತಿರುಗಬೇಕು. ಒಂದು ಗಾಡಿನೂ ಇಲ್ಲದೇ ಹೋದರೆ ಹೇಗೆ? "

ಅಪ್ಪನೇನೋ 'ಬ್ಯಾಂಕ' ಪದವನ್ನು ಒತ್ತಿ ಹೇಳಿದರೂ ಅಮ್ಮನ ಮನಸ್ಸಿನ ಮೇಲೇನೂ ಅದು ಪರಿಣಾಮವನ್ನುಂಟುಮಾಡಲಿಲ್ಲ.

ಹೀಗಾಗಿ ಇದ್ದ ಮನೆಯ ಜೊತೆಗೆ ಕುದುರೆಗಾಗಿ ಒಂದು ಹುಲ್ಲು-ಜೋಪುಡಿ ಸಿದ್ಧವಾಯಿತು. ಅದನ್ನು ನೋಡವುದಕ್ಕಾಗಿ ಒಬ್ಬ ಆಳು. ನಮ್ಮ ಮನೆಯ ಜಟಕಾಗಾಡಿ ಊರಿನವರ ಮನೆಮಾತಾಯಿತು. ಆದರೆ ಅಮ್ಮನಿಗೆ ಮಾತ್ರ ಸಮಾಧಾನವಿಲ್ಲ. ಎಲ್ಲಾ ಅಪ್ಪನ ಒಣ ಜಂಭದ ಫಲ ಎಂದವಳ ಭಾವನೆ. ವರಮಾನ ಒಂದು ಪಾಲಾದರೆ ಅಪ್ಪನ ಕಲ್ಪನೆ ನಾಲ್ಕು ಪಾಲು ಎಂದು ಆಕೆಯ ವಾದ. ಅಪ್ಪನೇನಾದರೂ ಕೆಲಸವಿಲ್ಲದೇ ಇದ್ದರೆ, ಮನೆ-ಯಲ್ಲಿ ಕೂತಿದ್ದರೆ, ಗಾಡಿಯೇನಾದರೂ ಗುಡಿಸಲಿನಲ್ಲೇ ಇದ್ದರೆ ಆಗ ಅಮ್ಮ ರೇಗಾಡುವುದನ್ನು ಕೇಳಬೇಕು! ಊರೊಳಗೆ ಒಂದು ಗಂಟೆಗಿಂತ ಹೆಚ್ಚಿನ ಕೆಲಸವಿರುತ್ತಿರಲಿಲ್ಲ. ಅದನ್ನು ಮುಗಿಸಿದ ಕೂಡಲೇ ಅಪ್ಪ ಅಂಗಡಿಗೆ ವಾಪಸು ಬಂದುಬಿಡುತ್ತಿದ್ದರು. ಅಪ್ಪ ಊರೊಳಗೆ ಹೋದರೆ ಅಂಗಡಿ ನೋಡಿ-

ಕೊಳ್ಳಲು ಅಪ್ಪನ ಸ್ನೇಹಿತರೊಬ್ಬರು ಬರುತ್ತಿದ್ದರು. ದಿನ ಕಳೆದ ಹಾಗೆಲ್ಲ ಅಪ್ಪ ತಾಳ್ಮೆಯ ಪ್ರತೀಕವಾದರೆ, ಅಮ್ಮ ಕೋಪದ ಮೂರ್ತಿಯಾದಳು. ಆದರೆ ಅಪ್ಪ ಮಾತ್ರ ಗಾಡಿಗೆ ಕೆಲಸವಿಲ್ಲದೆ ಹುಣಿಸೆ ಮರದ ಕೆಳಗೆ ನಿಂತಾಗ,

"ನೀನು ಬೇಕಾದರೆ ಮಾರ್ಕೆಟ್ಟಿಗೆ ಹೋಗಿ ಬಾ" ಎನ್ನುತ್ತಿದ್ದರು. ಅಮ್ಮ ನಿರಾಕರಿಸಿಬಿಡುತ್ತಿದ್ದಳು.

"ದಿನಾ ಅಲ್ಲಿಗೆ ಹೋಗಿ ಏನು ಮಣ್ಣು ಹೊರಲಿ?........ಮಂಗಳ-ವಾರವೊ, ಶುಕ್ರವಾರವೊ ಆದರೆ ಗುಡಿಗಾದರೂ ಹೋಗಿಬರಬಹುದು. ಸುಮ್ಮನೆ ಇಲ್ಲಿರೊ ದೇವಸ್ಥಾನಕ್ಕೆ ಹೋಗೋಕೆ ಒಂದು ಗಾಡಿ ಬೇಕೋ? ಹುರುಳಿ ಬೆಲೆ ಎಷ್ಟಾಗಿದೆ ಅನ್ನೋದು ಗೊತ್ತಿದೆಯೊ?" ಅಮ್ಮನ ರೇಗಾಟ ತಾಳಲಾರದೆ ಅಪ್ಪ ಗಾಡಿಯನ್ನು ಮಾರಿಬಿಡುವ ಯೋಚನೆ ಮಾಡಿದ್ದರು. ಒಂದೇ ಮಾರಿಬಿಡಬೇಕು ಇಲ್ಲವೇ ಕುದುರೆಗಾಡಿಯನ್ನು ಎತ್ತಿನ ಗಾಡಿ-ಯನ್ನಾಗಿ ಮಾರ್ಪಡಿಸಬೇಕು.

ಈ ಸಲಹೆ ಕೇಳಿ ಕುದುರೆಯಾಳು ಮನಸಾರೆ ನಕ್ಕ. ಹಾಗೇನಾದರೂ ಮಾರ್ಪಡಿಸಿದರೆ ಗಾಡಿ, ಗಾಡಿಯಾಗುವ ಬದಲು ಹುಣಿಸೆ ಮರದ ಕೆಳಗೆ ಕೂಡಲು ಗದ್ದುಗೆಯಾಗುವದೆಂದು ಹೇಳಿದ.

"ಆ ಮರಗೆಲಸದವನು ಹಾಗೇನಾದರೂ ಹೇಳಿದ್ದರೆ........ ಕುದು-ರೇನ, ಕೋಣನಾಗಿಸೊ ಪ್ರಯತ್ನಾನೇ" ಎಂದಿದ್ದ. ಆದರೆ ಅವನ ಸಲಹೆ ಮಾತ್ರ ಅಪ್ಪನಿಗೆ ತುಂಬ ಹಿಡಿಸಿತು.

"ನಿಮಗೆ ಯಾವಾಗ ಗಾಡಿ ಬೇಡವೊ ಆಗ ಹೇಳಿ. ಊರಿನೊಳಗೆ ಬಾಡಿಗೆಗೆ ಈ ಗಾಡಿ ಹೊಡೀತೀನಿ. ಹುಲ್ಲು–ಹುರುಳಿ ವಿಚಾರವೆಲ್ಲ ನಂದು. ಆದರೆ ಈ ಜೋಪಡಿ ಮಾತ್ರ ಬೇಕು. ನಿಮಗೆ ದಿನಾಲೂ ಎರಡು ರೂಪಾಯಿ. ತಿಂಗಳಿಗೊಂದು ಸಲ ಜೋಪಡಿ ಬಾಡಿಗೆ ಒಂದು ರೂಪಾಯಿ ಕೊಟ್ಟು-ಬಿಡುತ್ತೇನೆ. ಎರಡು ರೂಪಾಯಿಗಿಂತ ಹೆಚ್ಚಿಗೆ ಏನಾದರೂ ಬಂದರೆ ಅದು ನನಗೆ."

ಅಪ್ಪನಿಗೆ ಈ ಸಲಹೆ ಬಹಳ ಪ್ರಿಯವಾಯಿತು. ಬೇಕಾದಾಗೆಲ್ಲಾ ನಮಗೆ ಗಾಡಿ ಸಿಗುತ್ತಿತ್ತು. ತಾವಾಗಿ ಏನೂ ಖರ್ಚು ಮಾಡದೆಯೇ ದಿನಕ್ಕೆ ಎರಡು ರೂಪಾಯಿ ಸಿಗುತ್ತಿತ್ತು. ದಿನ ಕಳೆದ ಹಾಗೆ ಊರಿನಲ್ಲಿ ಗಾಡಿ ಬಾಡಿ-ಗೆಯೇ ಸಿಕ್ಕೋಲ್ಲವೆಂಬ ಕೂಗೆದ್ದಿತು. ನಮ್ಮ ಮನೆಯ ಮುಂದೆ ಮುಸ್ಸಂಜೆ-

ಯಲ್ಲಿ ನಮ್ಮ ತಂದೆಗೂ ಆ ಗಾಡಿ ಹೊಡೆಯೋನಿಗೂ ಭಾರೀ ಜಗಳ. ಕೊನೆಗೆ ಆ ಜಗಳಕ್ಕೆ ಅಮ್ಮನೂ ಹೋದಳು.

"ಜನಾನ ನಂಬಲೇಬಾರದು. ಜಾತ್ರೆಗೆ ಊರಿನ ಜನವೆಲ್ಲಾ ಬಂದು ಸೇರಿದಾಗ ಗಾಡಿ ಬಾಡಿಗೆಯೇ ಬರಲಿಲ್ಲ—ಅಂತ ಹೇಳುತ್ತಾನಲ್ಲ........ ಇವನ್ನ ಹ್ಯಾಗೆ ನಂಬೋದು?"

"ಬರೋದನ್ನೆಲ್ಲಾ ಕುಡಿದುಬಿಡುತ್ತಾನೆ" ಎಂದು ಅಮ್ಮನ ವಾದ. "ಕುಡಿದರೆ ಕುಡೀಲಿ, ಅದನ್ನೆಲ್ಲಾ ಕಟ್ಟಿಕೊಂಡು ನಿನಗೇನು?" ಎಂದು ಅಪ್ಪನ ಸಮಾಧಾನ.

ಇದು ಪ್ರತಿದಿನದ ಪಲ್ಲವಿಯಾಯಿತು. ದಿನಾಲೂ ಗಾಡಿ ಹೋಡೆಯು-ವವನು ಹುಣಿಸೆಮರದ ಹತ್ತಿರ ನಿಂತು ಬೇಡುವುದನ್ನು ಬಿಡಲಿಲ್ಲ. ಅಂತೂ ದುಡ್ಡನ್ನು ಗಾಡಿಯವನು ದುರುಪಯೋಗಪಡಿಸಿಕೊಳ್ಳುತ್ತಿದ್ದನೆಂಬುದು ಖಂಡಿತ. ಒಂದೆರಡು ವಾರದಲ್ಲಿ ಗಾಡಿಯವನ ಗೊಣಗಾಟ ಜೋರಾ-ಯಿತು.

"ಕುದುರೆ ಹುಲ್ಲು ತಿನ್ನೋಲ್ಲ. ನೀರು ಕುಡಿಯೋಲ್ಲ. ಶುದ್ಧ ಮೂಳೆ-ಮೂಳೆಯಾಗಿ ಬಿಡುತ್ತಾ ಇದೆ. ಬೇರೆ ಕುದುರೆ ತರದೇ ಹೋದರೆ ವ್ಯಾಪಾರ ನಿಂತುಹೋಗೋದು ಖಂಡಿತ. ಈ ಕುದುರೆ ಮಾರಿ ಬೇರೆ ಕುದುರೆ ತರ-ಬೇಕು........"

ಈ ಗೊಣಗಾಟ ಅಮ್ಮನ ಕಿವಿಗೆ ಬಿದ್ದರೆ ಅಮ್ಮನಿಗೆ ತಡೆಯಲಾರದ ಕೋಪ ಬಂದುಬಿಡುತ್ತಿತ್ತು. ಅಂತೂ ಕೊನೆಗೊಂದು ದಿನ ಕುದುರೆ, ಗಾಡಿ ಎರಡಕ್ಕೂ ಸೇರಿ ಎಪ್ಪತ್ತು ರೂಪಾಯಿಗೆ ಕೊಂಡುಕೊಳ್ಳೋದಕ್ಕೆ ಸಿದ್ಧ-ವಾಗಿದ್ದೇನೆಂದಕೂಡಲೇ ಅಪ್ಪ ಚೌಕಸಿ ಮಾಡಿ ಎಪ್ಪತ್ತೈದಕ್ಕೆ ವ್ಯಾಪಾರ ಕುದುರಿಸಿದರು. ಗಾಡಿಯವನು ತಾನೇ ಹೊಡೆದುಕೊಂಡು ಹೋದ. ಅಪ್ಪನ ಕೈಗೆ ಎಪ್ಪತ್ತೈದು ರೂಪಾಯಿ ಬಂತು. ಆದರೆ ಅದರಲ್ಲಿ ಮುಕ್ಕಾಲು ಭಾಗ ನಮಗೆ ನ್ಯಾಯವಾಗಿ ಸಲ್ಲಬೇಕಾಗಿದ್ದ ಬಾಡಿಗೆ ಹಣ. ಸಧ್ಯ ಶನಿ ತೊಲಗಿ-ತಲ್ಲ ಎಂದು ನಾವೂ ಸುಮ್ಮನಾದೆವು. ಆದರೆ ಗಾಡಿಯವನ ಪ್ರಚಂಡ ಬುದ್ಧಿ-ಯನ್ನು ಎಷ್ಟು ಹೊಗಳಿದರೂ ಸಾಲದು. ನಮ್ಮೂರಿಗೆ ರೈಲು ಬಂದಕೂಡಲೇ ನಮ್ಮ ಕಣ್ಣೆದುರಿನಲ್ಲೇ ನಮ್ಮ ಗಾಡಿಯವನು ನಮ್ಮ ಜಟಕದಲ್ಲೇ ಜನ-

ರನ್ನು ರೈಲು ನಿಲ್ದಾಣಕ್ಕೂ, ರೈಲು ನಿಲ್ದಾಣದಿಂದ ಊರಿನೊಳಕ್ಕೂ ಕರೆ-ದೊಯ್ಯತೊಡಗಿದ. ಅವನ ಅದೃಷ್ಟ ಖುಲಾಯಿಸಿತು.

ನಿಲ್ದಾಣದಲ್ಲಿ ಅಂಗಡಿ ತೆಗೆಯಲು ಅಪ್ಪನಿಗೆ ಅನುಮತಿ ದೊರೆಯಿತು. ಎಷ್ಟು ಸೊಗಸಾದ ಅಂಗಡಿ! ನೆಲಕ್ಕೆಲ್ಲಾ ಸಿಮೆಂಟು. ಸುತ್ತಲೂ ಬೀರು-ಗಳು. ನಮ್ಮ ಅಂಗಡಿಯಲ್ಲಿದ್ದ ಸಾಮಾನೆಲ್ಲಾ ಅಲ್ಲಿಗೆ ತೆಗೆದುಕೊಂಡು ಹೋದರೂ ಅಂಗಡಿಯ ಕಪಾಟುಗಳೆಲ್ಲಾ ಖಾಲಿ-ಖಾಲಿಯಾಗಿ ಉಳಿದದ್ದನ್ನು ನೋಡಿ ಅಪ್ಪನಿಗಾದ ವ್ಯಥೆ ಹೇಳತೀರದು. ಅಂತೂ ತಾನು ಇದುವರೆಗೂ ನಡೆಸುತ್ತಿದ್ದ ವ್ಯಾಪಾರ ಅಂತಹ ಭಾರಿಯಾದದ್ದೇನಲ್ಲ ಎನ್ನುವುದು ಈಗೀಗ ಅಪ್ಪನ ಅರಿವಿಗೆ ಬರತೊಡಗಿತು.

ನಿಲ್ದಾಣಕ್ಕೆ ಬಂದು ಅಪ್ಪನ ಅಂಗಡಿಯ ವಿತರಣೆಯನ್ನು ನೋಡು-ತ್ತಿದ್ದ ಅಮ್ಮ ಸುಮ್ಮನಿರಲಿಲ್ಲ.

"ವ್ಯಾಪಾರ ನೋಡಿದರೆ ಇಷ್ಟು ಲಕ್ಷಣ! ಮೋಟಾರುಕಾರು ತಗೋ-ತಾರಂತೆ. ಆ....ಹ....ಹ...."

ಅಪ್ಪ ಮೋಟಾರು ಕೊಳ್ಳುವ ವಿಚಾರವನ್ನು ಯಾವಾಗಲೂ ಎತ್ತಿರ-ಲಿಲ್ಲ. ಆದರೂ ಅಪ್ಪನನ್ನು ಕಾಡಿಸಬೇಕೆಂದರೆ ಅಮ್ಮನಿಗೆ ಪ್ರೀತಿ.

"ಅದೆಲ್ಲಾ ಪುರಾಣ ಈಗ ಬೇಡ. ಈಗಿನ ಸ್ಥಿತಿ ಹೇಳು. ಈ ಜಾಗಾ-ನೆಲ್ಲಾ ತುಂಬೋಕೆ ಇನ್ನೊಂದೈನೂರು ರೂಪಾಯಿ ಸಾಮಾನು ತರಬೇಕು."

ಹಸುರು ರುಮಾಲು ಸುತ್ತಿ, ಬೆಳ್ಳಿ ಕಟ್ಟಿನ ಕನ್ನಡಕವನ್ನು ಮೂಗಿ-ಗೇರಿಸಿದ್ದ ಸ್ಟೇಷನ್ ಮಾಸ್ಟರ್ ಅಂಗಡಿಯ ಪರಿಶೀಲನೆಗೆ ಬಂದರು. ಅವ-ರನ್ನು ನೋಡಿ ಅಪ್ಪನ ಜಂಘಾಬಲವೇ ಉಡುಗಿಹೋಯಿತು. ಸ್ಟೇಷನ್ ಮಾಸ್ಟರರ ಹಿಂದೆ ಪೋರ್ಟರ್ ಕರಿಯ. ನೀಲಿಬಣ್ಣದ ಷರಟು, ತಲೆಗೊಂದು ಕೆಂಪು ರುಮಾಲು. ಅಮ್ಮ ಸದ್ದಿಲ್ಲದೆ ಮನೆಗೆ ಹೊರಟುಹೋದಳು. ತಲೆ-ಯನ್ನು ಒಂದು ಕಡೆಗೆ ವಾಲಿಸಿ ಸ್ಟೇಷನ್‌ಮಾಸ್ಟರ್ ಅಂಗಡಿಯನ್ನು ನೋಡಿದ್ದೂ ನೋಡಿದ್ದೇ! ಯಜಮಾನರು ಏನು ಹೇಳಿದರೂ ಅದಕ್ಕೆ ಹೂ-ಗುಟ್ಟಲು ಸಿದ್ಧನಾಗಿದ್ದ ಕರಿಯ. ಸ್ವಲ್ಪ ಹೊತ್ತು ನೋಡಿ ಆಮೇಲೆ ಮಾಸ್ಟರ್, "ಆ ಖಾಲೀ ಜಾಗಾನೆಲ್ಲ ಭರ್ತಿ ಮಾಡಬೇಕು. ಇಲ್ಲದೆ ಹೋದರೆ ಎ. ಟಿ. ಎಸ್. ನಿನ್ನ ಸುಮ್ಮನೆ ಬಿಡೋಲ್ಲ. ನೂರೆಂಟು ಪ್ರಶ್ನೆ ಕೇಳಿ ಅಂಗಡಿ

ಖಾಲಿ ಮಾಡಿಸಬಹುದು. ನಿನಗೆ ಈ ಅಂಗಡಿ ಕೊಡಿಸೋಕೆ ಎಷ್ಟೋ ಕಷ್ಟ ಪಡಬೇಕಾಯಿತು " ಎಂದರು.

ಅಂಗಡಿಯಲ್ಲಿ ನನ್ನನ್ನು ಕೂಡಿಸಿ ಅಪ್ಪ ಸಾಮಾನು ತರಲು ಊರಿಗೆ ಹೋದರು.

" ಅಕ್ಕಿ-ಗಿಕ್ಕಿ ಎಲ್ಲಾ ಈ ಅಂಗಡೀಲಿ ಬೇಡ. ರೈಲಿಗೆ ಬರೋರು ಉಪ್ಪು–ಮೆಣಸಿನಕಾಯಿ.........ಕೇಳೋಲ್ಲ " ಸ್ಟೇಷನ್ ಮಾಸ್ಟರರ ಮಾತಿಗೆ ಅಪ್ಪ ಹೂಗುಟ್ಟಿದರು. ಆತನೇ ಅಪ್ಪನಿಗೆ ಈಗ ಪ್ರತ್ಯಕ್ಷ ದೇವರು. ಅವರು ಹೇಳಿದ್ದೇ ವೇದವಾಕ್ಯ. ಹೀಗೆ ಆಗಿ ನಿಲ್ದಾಣದ ಅಂಗಡಿಯಲ್ಲಿ ಬಾಳೇಹಣ್ಣಿನ ಗೊನೆಗಳು, ಮಾವಿನ ಹಣ್ಣುಗಳು, ಚಕ್ಕಲಿ, ಕೋಡುಬಳೆ ಪೇರಿಸಿದ ತಟ್ಟೆ-ಗಳು, ಗಾಜಿನ ಡಬ್ಬಿಗಳಲ್ಲಿ ಬಣ್ಣ–ಬಣ್ಣದ ಪೆಪ್ಪರಮೆಂಟು ಚಾಕಲೇಟುಗಳು, ಬ್ರೆಡ್ಡು, ಬನ್ನು, ಬಿಸ್ಕತ್ತುಗಳು ಪ್ರದರ್ಶನಕ್ಕೆ ಸಿದ್ಧವಾದುವು. ಆ ತಿಂಡಿಗಳ ನೋಟ ಎಂತಹವರ ಬಾಯಲ್ಲೂ ನೀರೂರಿಸುತ್ತಿತ್ತು. ಇದರ ಜೊತೆಗೆ ಸಿಗ-ರೇಟು ಪ್ಯಾಕುಗಳ ಸಾಲು–ಸಾಲು. ಯಾವ ರೈಲು ಪ್ರಯಾಣಿಕ ಏನೇ ಕೇಳಲಿ ಇಲ್ಲವೆನ್ನದೇ ಒದಗಿಸಬೇಕಾಗಿತ್ತು.

'ಗುಡಿಸಿಲಂಗಡಿ' ನನ್ನ ಪಾಲಿಗೆ ಬಂತು. ಹಳೆಯ ಗಿರಾಕಿಗಳು ಆಗಾಗ ಬಂದು ಸ್ವಲ್ಪ ಹೊತ್ತು ಹರಟೆ ಹೊಡೆಯುತ್ತಿದ್ದು ಅದೂ ಇದೂ ಕೊಂಡು ಹೋಗುತ್ತಿದ್ದರು. ಆದರೆ ಅವರಿಗೆ ನಾನು ಸರಿಯಾದ ಜೊತೆ-ಯಾಗಿರಲಿಲ್ಲ. ಅವರ ಕೋರ್ಟು-ಕಛೇರಿ ಜಗಳವನ್ನೆಲ್ಲಾ ಕೇಳುವುದು ನನ್ನಿಂದ ಸಾಧ್ಯವಾಗುತ್ತಿರಲಿಲ್ಲ. ಆ ವ್ಯವಹಾರದಲ್ಲೆಲ್ಲಾ ಆಸಕ್ತಿ ವಹಿಸು-ವಷ್ಟು ವಯಸ್ಸೂ ನನಗಾಗಿರಲಿಲ್ಲ.

ತುಟಿ ಪಿಟಿಕ್ಕೆನ್ನದೆ ಕೇಳುತ್ತಾ ಕೂಡುತ್ತಿದ್ದ ನನ್ನನ್ನು ನೋಡಿದರೆ ಅವರಿಗೆ ಬೇಜಾರು. ನನ್ನನ್ನೂ, ನಮ್ಮ ಅಂಗಡಿಯನ್ನೂ ಬಿಟ್ಟು ನಿಲ್ದಾಣದ ಅಂಗಡಿಯಲ್ಲಿದ್ದ ಅಪ್ಪನನ್ನು ಹುಡುಕಿಕೊಂಡು ಹೊರಡುತ್ತಿದ್ದರು. ಆದರೆ ಆ ವಾತಾವರಣ ಅವರಿಗೆ ಹಿಡಿಸಲಿಲ್ಲ.

ಸ್ವಲ್ಪ ದಿನಗಳಿಗೆಲ್ಲಾ ಅಪ್ಪ ಹೊಸ ಅಂಗಡಿಯ ವ್ಯವಹಾರವನ್ನು ನನ-ಗೊಪ್ಪಿಸಿ ಹಳೆಯ ಅಂಗಡಿಗೇ ಬಂದರು. 'ಮಾಲ್ಗುಡಿ'ಯ ಸೇತುವೆ ಮುಗಿದಕೂಡಲೇ ನಮ್ಮೂರಿಗೆ ರೈಲು ಪ್ರತಿದಿನ ಬರಲಾರಂಭಿಸಿತು. ಆ

ತಡೆಬಿಡುವಿಲ್ಲದ ಕೋಲಾಹಲವೇ ಒಂದು ಸೊಗಸು. ಹಸುರು ರುಮಾಲಿನ ಸ್ಟೇಷನ್‌ಮಾಸ್ಟರ್, ಕೆಂಪು ರುಮಾಲಿನ ಪೋರ್ಟರ್ ಇವರು ಒಂದಲ್ಲ, ಎರಡು ರೈಲು ಬಂದು ಹೋಗುವುದನ್ನೂ ನೋಡಿಕೊಳ್ಳಬೇಕಾಗಿತ್ತು. ಮಧ್ಯಾಹ್ನ ಬರುತ್ತಿದ್ದುದು ಮದರಾಸಿನ ರೈಲು. ಸಾಯಂಕಾಲದ್ದು ತಿರು-ಚಿನಾಪಳ್ಳಿ ರೈಲು. ನನಗಂತೂ ಅಂಗಡಿಯಲ್ಲಿ ಬಿಡುವೇ ಇರುತ್ತಿರಲಿಲ್ಲ. ಇಷ್ಟುಹೊತ್ತಿಗೆ ನೀವಾಗಲೇ ಊಹಿಸಿರಬಹುದು—ವ್ಯಾಪಾರ ಹೆಚ್ಚಿದ್ದರಿಂದ ನನಗೆ ಸ್ಕೂಲಿನ ಕಾಟ ತಪ್ಪಿತು.

# 4

ಹುಡುಗನಿಗೆ ಕೊಟ್ಟ ಬಾಳೇಹಣ್ಣು ವ್ಯರ್ಥವಾಗಲಿಲ್ಲ. ಮನೆ-ಮನೆಗೂ ಹೋಗಿ ಹುಡುಗ, ನದಿಯ ತೀರದ ಸನ್ಯಾಸಿ ಮತ್ತೆ ಬಂದಿದ್ದಾನೆಂದು ಸಾರಿದ್ದ. ಮಕ್ಕಳು, ಮುದುಕರು, ಗಂಡುಸರು, ಹೆಂಗುಸರು ಎಲ್ಲರೂ ಗುಂಪು-ಗುಂಪಾಗಿ ಬಂದರು. ದಿನವಿಡೀ ಅವರಿಗೆ ಸನ್ಯಾಸಿಯ ಮುಖದ ಮೇಲೆ ಮೂಡಿದ್ದ ವರ್ಚಸ್ಸನ್ನು ನೋಡುವುದೇ ಕೆಲಸವಾಯಿತು. ಮಕ್ಕಳಂತೂ ದಿಗ್ಭ್ರಮೆಗೊಂಡು ನಿಂತಿದ್ದರು. ಒದಗಿಬಂದ ಸಂದರ್ಭವನ್ನು ಉಪಯೋಗಿಸಿಕೊಳ್ಳಲು ರಾಜುವೂ ಶ್ರಮಪಡುತ್ತಿದ್ದ. ಮಕ್ಕಳ ಕೆನ್ನೆ ಚಿವುಟಿದ. ಮಕ್ಕಳೊಂದಿಗೆ ಮಗುವಾಗಿ ಮುದ್ದು-ಮುದ್ದು ಮಾತನಾಡಿದ. ಹಲವು ದೊಡ್ಡ ಮನುಷ್ಯರನ್ನು ಅನುಕರಿಸಿ, ಮಗು ಹತ್ತಿರ ಬಂದಾಗ "ಏನು ಓದುತ್ತೀಯಾ?" ಎಂದು ಕೇಳಿದ. ಸುತ್ತಲಿದ್ದ ಮಕ್ಕಳೆಲ್ಲಾ ಹಲ್ಲುಕಿರಿದರು. "ನಮಗೆ ಸ್ಕೂಲೇ ಇಲ್ಲ." "ಹಾಗಾದರೆ ದಿನವೆಲ್ಲಾ ಏನು ಮಾಡುತ್ತೀರಿ?" ಕೇಳಿದ ಪ್ರಶ್ನೆಯಲ್ಲಿ ಅವನಿಗೆ ನಿಜವಾದ ಆಸಕ್ತಿ ಏನೂ ಇರಲಿಲ್ಲ. ಆದರೆ ದೊಡ್ಡವರೊಬ್ಬರು ಮಗುವಿಗೆ ಕೇಳಿದ ಪ್ರಶ್ನೆಗೆ ಉತ್ತರ ಕೊಟ್ಟರು, "ಪಟ್ಟಣ ವಾಸದೋರು ಕಳಿಸೋಹಾಗೆ ನಾವು ಕಳಿಸೋಕಾದೀತಾ ಸ್ವಾಮಿ? ಅವರು ದನಕರು, ಮೇವಿಗೆ ಅಟ್ಕೊಂಡು ಹೋಗಬೇಕು."

ರಾಜುವಿಗೆ ಇದು ಒಪ್ಪಿಗೆಯಾಗಲಿಲ್ಲ. ತಲೆಯಲ್ಲಾಡಿಸಿದ. ನೆರೆದ ಜನ ದುಃಖದಿಂದ ಅವನನ್ನು ನೋಡಿದರು. ರಾಜು ಬಹಳ ತಿಳಿದವನಂತೆ ಉಪದೇಶ ಮಾಡಿದ, "ನಮ್ಮ ಹುಡುಗರೆಲ್ಲಾ ಓದಬೇಕು; ಅಪ್ಪ-ಅಮ್ಮನಿಗೆ ಸಹಾಯ ಮಾಡಬಾರದು—ಅಂತ ನಾನು ಹೇಳಲಿಲ್ಲ. ಅವರ ಕೆಲಸದಲ್ಲಿ ನೆರವಾಗೋದರ ಜೊತೆಗೆ ಓದಲೂ ಬೇಕು........" ರಾಜುವಿಗೆ ಇದ್ದಕ್ಕಿದ್ದ ಹಾಗೇ ಏನೋ ಹೊಳೆಯಿತು.

"ಬೆಳಗಿನ ಹೊತ್ತು ಓದೋಕೆ ಆಗದೆಹೋದರೆ ಸಾಯಂಕಾಲಾನೋ ರಾತ್ರಿನೋ ಯಾಕೆ ಒಟ್ಟಿಗೆ ಸೇರಿ ಓದಬಾರದು?"

"ಎಲ್ಲಿ?"

"ಇಲ್ಲಿ ಬೇಕಾದರೆ ಬರಬಹುದು" ಎಂದು ರಾಜು ಮಂಟಪದ ಕಡೆ ಕೈ ತೋರಿಸಿ ಮತ್ತೆ ಕೇಳಿದ

"ನಿಮ್ಮಲ್ಲಿ ಉಪಾಧ್ಯಾಯರು ಇಲ್ಲವೇ ?"

"ಇದ್ದಾರೆ, ಇದ್ದಾರೆ."

"ಅವರಿಗೆ ನನ್ನನ್ನೇ ಬಂದು ನೋಡೋಕೆ ಹೇಳಿ" ಅವನ ಧ್ವನಿಯಲ್ಲಿ ತಪ್ಪುಮಾಡಿದ್ದ ಮೇಷ್ಟ್ರರನ್ನು ದಂಡಿಸುವ ಮುಖ್ಯೋಪಾಧ್ಯಾಯನ ದರ್ಪವಿತ್ತು.

ಮಾರನೆಯ ದಿನ ಬೆಳಿಗ್ಗೆ ಪೇಟವನ್ನು ಸುತ್ತಿದ್ದ ಬಡಕಲು ಪ್ರಾಣಿಯೊಬ್ಬ ದೇವಸ್ಥಾನದ ಮಂಟಪಕ್ಕೆ ಬಂದ. ರಾಜು ಆಗ ತಾನೆ ಊಟಮಾಡಿ ಮಂಟಪದ ನೆಲದಮೇಲೆ ಮೈಚಾಚಿ ಹಗಲುಗನಸು ಕಾಣುತ್ತಿದ್ದ. ಬಂದಾತ ಮಂಟಪದ ಕಲ್ಲಿನ ಹಿಂದೆ ನಿಂತು ಒಂದು ಸಲ ಕೆಮ್ಮಿ ಗಂಟಲು ಸರಿಪಡಿಸಿಕೊಂಡ. ರಾಜು ಕಣ್ಣುಬಿಟ್ಟು ಅವನನ್ನೇ ನೋಡಿದ. ಅಷ್ಟೊಂದು ಜನ ಬಂದುಹೋಗುವಾಗ ರಾಜು ಯಾರನ್ನೇ ಆಗಲಿ ಯಾಕೆ ಬಂದೆ? ನೀನು ಯಾರು? ಎಂದು ಕೇಳುತ್ತಲಿರಲಿಲ್ಲ. ಆತನನ್ನು ಕುಳಿತುಕೊಳ್ಳಲು ಕೈಬೀಸಿ ಹೇಳಿ ರಾಜು ಪುನಃ ತನ್ನ ನಿದ್ದೆ ಪ್ರಾರಂಭಿಸಿದ. ನಿದ್ದೆಹೋಗಿ ಎದ್ದಾಗ ಆ ಬಡಕಲು ಪ್ರಾಣಿ ರಾಜುವಿನ ಹತ್ತಿರದಲ್ಲೇ ಕುಳಿತಿದ್ದುದು ಕಂಡುಬಂತು.

"ನಾನು ಮೇಷ್ಟ್ರು..........." ಎಂದಿತು ಆ ಪ್ರಾಣಿ. ಇನ್ನೂ ಅರ್ಧ ನಿದ್ರಾವಸ್ಥೆಯಲ್ಲಿದ್ದ ರಾಜುವಿಗೆ ಮೇಷ್ಟ್ರುಗಳ ಬಗ್ಗೆ ಇದ್ದ ಹೆದರಿಕೆಯಿಂದ ಮೈ ನಡುಗಿತು. ಆ ಕಾಲವೆಲ್ಲಾ ಕಳೆದುಹೋಯಿತು ಎನ್ನುವುದೂ ಮರೆತುಹೋಯಿತು.

ರಾಜು ಎದ್ದು ಕುಳಿತ.

ಅವನು ಎದ್ದಿದ್ದು ನೋಡಿ ಮೇಷ್ಟ್ರರು,

"ಇಲ್ಲ, ಏಳಬೇಡಿ. ಪಾಪ ತೊಂದರೆಯಾಯಿತು, ಏನೂ ಪರವಾಗಿಲ್ಲ. ಬೇಕಾದರೆ ಕಾದುಕೊಂಡಿರುತ್ತೇನೆ. ನೀವು ನಿಧಾನವಾಗಿ ಏಳಿ" ಎಂದರು.

"ಅದು ಸರಿ" ಎಂದಾಗ ರಾಜುವಿಗೆ ತನ್ನ ಇಂದಿನ ಪರಿಸ್ಥಿತಿಯ ಅರಿವು

ಮೂಡಿತ್ತು.

"ಓಹೋ........ನೀವೇನೊ..........ಮೇಷ್ಟ್ರು?" ಒಂದು ನಿಮಿಷ ಯೋಚಿಸಿ ರಾಜು ಮತ್ತೆ ಕೇಳಿದ :

"ಏನು, ಹೇಗಿದೆ ಕೆಲಸ, ಕಾರ್ಯ?"

"ಎಲ್ಲಾ ಯಥಾಪ್ರಕಾರ."

"ಈ ವೃತ್ತಿ ನಿಮಗೆ ಇಷ್ಟವೇನು?"

"ಇಷ್ಟವೊ, ಅಲ್ಲವೊ ಅನ್ನೋದು ಮುಖ್ಯವಲ್ಲ. ನನ್ನ ಕೈಲಾದಷ್ಟು ಮಾಡುತ್ತೇನೆ. ಮಾಡೋದನ್ನ ಮನಸ್ಸಿಟ್ಟು ಚೆನ್ನಾಗಿ ಮಾಡುತ್ತೇನೆ."

"ಮನಸ್ಸಿಟ್ಟು ಮಾಡದೇಹೋದರೆ ಮಾಡಿ ಏನು ತಾನೆ ಪ್ರಯೋಜನ?"

ನಿದ್ದೆಯಿಂದ ರಾಜುವಿಗೆ ಇನ್ನೂ ಸಂಪೂರ್ಣವಾಗಿ ಎಚ್ಚರವಾಗಿರಲಿಲ್ಲ. ಮೇಷ್ಟ್ರರನ್ನು ತಾನೇಕೆ ಬರಹೇಳಿದೆ ಎನ್ನುವುದು ಸರಿಯಾಗಿ ನೆನಪಿಗೆ ಬರದೇ ಇರಲು ರಾಜು ಬೇರೆ ಮಾತು ತೆಗೆದನು :

"ಈವಾಗ ನೋಡಿ, ಎಷ್ಟೇ ಆದರೂ ಒಬ್ಬರ ಕರ್ತವ್ಯ........" ರಾಜು ತನ್ನ ಮಾತನ್ನು ಮುಂದುವರಿಸಲು ಬಿಡದೆ ಮೇಷ್ಟ್ರರು, "ನನಗೆ ಎಷ್ಟು ಸಾಧ್ಯವೋ ಅಷ್ಟು ಮಾಡುತ್ತಾ ಇದ್ದೇನೆ" ಎಂದರು.

ಅರ್ಥಗಂಟಿಯಾದರೂ ಮಾತು ಒಂದು ಮಟ್ಟಕ್ಕೆ ಬರದಿರಲು ಮೇಷ್ಟ್ರರೇ ತಾವು ಬಂದ ವಿಷಯವನ್ನು ಪ್ರಸ್ತಾಪಿಸಿದರು :

"ರಾತ್ರಿಹೊತ್ತು ಮಕ್ಕಳನ್ನೆಲ್ಲಾ ಇಲ್ಲಿ ಸೇರಿಸಿಕೊಂಡು ಪಾಠ ಹೇಳಿಕೊಡಬೇಕು ಎಂದಿರಂತೆ."

"ಆ್ಞ........ಹೌದು........ಹೌದು........ಆ ವಿಚಾರ ನಿರ್ಧರಿಸಬೇಕಾದೋರು ನೀವು, ನಾನೇನು ಇಲ್ಲಿ ಶಾಶ್ವತವಲ್ಲ. ಇವತ್ತಿದ್ದು ನಾಳೆ ಹೋಗುವವನು. ಶಾಲೆ ನಡೆಸೋಕೆ ಜಾಗೆಯು ಬೇಕಾದರೆ ಈ ಮಂಟಪವನ್ನು ಉಪಯೋಗಿಸಿಕೊಳ್ಳಬಹುದು ಅಂತ ಹೇಳಿದೆ ಅಷ್ಟೆ."

ಒಂದು ನಿಮಿಷ ಯೋಚಿಸಿ ಮೇಷ್ಟ್ರರು ಹೇಳಿದರು :

"ಆದರೆ........ಇದು ಸಾಧ್ಯವೇ ಅಂತ........?"

ಮೇಷ್ಟ್ರರು ಮಾತು ಮುಗಿಸುವುದಕ್ಕೆ ಮೊದಲೇ ರಾಜು ತನ್ನನ್ನೇ

ಸಮರ್ಥಿಸಿಕೊಂಡನು, " ಇಲ್ಲಿ ನೋಡಿ ಮೇಷ್ಟ್ರರೆ, ನಮ್ಮ ಮಕ್ಕಳು ವಿದ್ಯಾವಂತರಾಗಬೇಕು. ಪ್ರತಿಯೊಬ್ಬನನ್ನು ಸುಖಿಯಾಗಿ ಮಾಡುವುದು ನಮ್ಮ ಕರ್ತವ್ಯ. "

ರಾಜುವಿನ ಉನ್ನತ ಧ್ಯೇಯಕ್ಕೆ ಮೇಷ್ಟ್ರರು ಮಾರುಹೋದರು. "ತಮ್ಮ ಮಾರ್ಗದರ್ಶನದಲ್ಲಿ ನಾನು ಏನು ಬೇಕಾದರೂ ಮಾಡಲು ಸಿದ್ಧ........"

" ಅಷ್ಟು ದೊಡ್ಡ ಮಾತು ಬೇಡ. ನನಗೆ ದಾರಿ ತೋರಿಸೋದಕ್ಕೆ ಒಬ್ಬ ಮಾರ್ಗದರ್ಶಿ ಬೇಕು. "

ಮೇಷ್ಟ್ರರು ಹಳ್ಳಿಗೆ ಮರಳಿದಾಗ ಸಂಪೂರ್ಣವಾಗಿ ಬದಲಾಯಿಸಿಬಿಟ್ಟಿದ್ದರು. ಮಾರನೆಯ ದಿನ ಮೇಷ್ಟ್ರರು ಒಂದು ಡಜನ್ ಹುಡುಗರನ್ನು ಕರೆದುಕೊಂಡು ಮಂಟಪಕ್ಕೆ ಬಂದಿಳಿದರು. ಹಣೆಯಲ್ಲಿ ವಿಭೂತಿ. ರಾತ್ರಿಯ ಮಿಣುಕು ದೀಪದಲ್ಲಿ ಮಕ್ಕಳ ಸ್ಲೇಟುಗಳು ಕರ-ಕರಗುಟ್ಟಿದುವು. ರಾಜು ಬುದ್ಧದೇವನಂತೆ ಕುಳಿತು ನೋಡಿದ.

" ಇನ್ನೂ ಒಂದಿಷ್ಟು ಜನ ಹುಡುಗರು ಬರುವವರಿದ್ದರು. ಆದರೆ ರಾತ್ರಿಹೊತ್ತು, ನೋಡಿ, ಹೊಳೇಲಿ ಮೊಸಳೆಯಿದೆ ಅಂತ ಹೆದರಿಕೋತಾರೆ. "

" ಮನಸ್ಸು ಸರಿಯಾಗಿದ್ದರೆ ಏನು ತಾನೆ ಮಾಡುತ್ತೆ ? ಮನುಷ್ಯನ ಕೆಲಸ–ಕಾರ್ಯಗಳಿಗೆಲ್ಲಾ ಮನಸ್ಸೇ ಮೂಲ " ತನ್ನ ಹೃದಯಾಂತರಾಳದಿಂದ ಹೊರಹೊಮ್ಮುತ್ತಿದ್ದ ಭಾವನೆಗಳನ್ನು ಕಂಡು ತನಗೇ ಆಶ್ಚರ್ಯವಾಯಿತು.

" ಕಡಿಮೆ ಹುಡುಗರು ಅಂತ ನಿರಾಶೆಯಾಗಬೇಕಾಗಿಲ್ಲ. ನೂರು ಜನ ಸುಮ್ಮನೆ ಕೂತು ಕಾಲ ಕಳೆಯೋದಕ್ಕಿಂತ ಹತ್ತು ಜನ ಮನಸ್ಸಿಟ್ಟು ಕಲಿಯೋದೇ ಉತ್ತಮ. ಲೆಕ್ಕಕ್ಕೆ ನೂರು ಕೋರಿಯಾದರೆ ಪ್ರಯೋಜನವಿಲ್ಲ. ಗುಣದಲ್ಲಿ ಕೊಹಿನೂರ್ ರತ್ನಗಳಾಗಬೇಕು. "

" ನೀವು ಏನು ತಿಳಿದುಕೊಳ್ಳದೇ ಹೋದರೆ ಒಂದು ಮಾತು ಕೇಳಬೇಕೂಂತ ಇದೀನಿ........ನಿಮಗೆ ಸಾಧ್ಯವಾದಾಗಲೆಲ್ಲಾ ಈ ಮಕ್ಕಳಿಗೆ ಒಂದಿಷ್ಟು ಉಪದೇಶ ಮಾಡಿದರೆ........"

ರೋಗಿ ಬಯಸಿದ್ದೂ ಹಾಲೂ–ಅನ್ನ, ವೈದ್ಯ ಹೇಳಿದ್ದೂ ಹಾಲೂ–ಅನ್ನ, ಎಂದಹಾಗಾಯಿತು. ರಾಜುವಿನ ಬುದ್ಧಿಪ್ರದರ್ಶನಕ್ಕೆ ಅವಕಾಶ ಸಿಕ್ಕಿತು.

ದೈವತ್ವ, ಶುಚಿತ್ವ, ರಾಮಾಯಣ, ಮಹಾಭಾರತ........ಎಲ್ಲವೂ ರಾಜುವಿನ ಉಪದೇಶಾಮೃತದ ವಿವಿಧ ಭಾಗಗಳಾದುವು. ಆ ಮಿಣುಕು ದೀಪದಲ್ಲಿ ಮಕ್ಕಳ ಮುಖಗಳು ತೇಜಃಪುಂಜವಾದುದನ್ನು ನೋಡಿ ತನ್ನ ವಾಣಿಯ ಭವ್ಯತೆಯನ್ನು ಕೇಳಿ ರಾಜು ತನಗೆ ತಾನೇ ಮನಸೋತನು.

* * * *

ಅಂತೂ ನಾನೇನು ತಿಳಿದುಕೊಂಡಷ್ಟು ದಡ್ಡನಾಗಿರಲಿಲ್ಲ. ಸಾಮಾನ್ಯ-ವಾಗಿ ನಮಗೆ ನಮ್ಮ ಬುದ್ಧಿಯ ಆಳ ತಿಳಿದಿರುವುದು ಅಪರೂಪ. ಹಿಂದಿನ ದಿನಗಳಲ್ಲಿ ಈ ಪಾತ್ರಕ್ಕೆ ನನಗರಿವಿಲ್ಲದಂತೆಯೇ ನನ್ನನ್ನು ನಾನೇ ಸಿದ್ಧ-ಪಡಿಸಿಕೊಂಡಿದ್ದೆ. ರೈಲು ನಿಲ್ದಾಣದ ಅಂಗಡಿಯಲ್ಲಿ ಕುಳಿತು ಒಳ್ಳೆಯ ಸಾಹಿತ್ಯ ಓದಿದ್ದೆ. ಅಂಗಡಿಯಲ್ಲಿ ಕುಳಿತು ಬ್ರೆಡ್ಡು, ಬಿಸ್ಕತ್ತು, ಪಾನೀಯ-ಗಳನ್ನು ಮಾರುವುದು ನನ್ನ ಕೆಲಸವಾಗಿದ್ದರೂ ನನಗೆ ನನ್ನ ಕೆಲಸ ಹಿಡಿಸ-ಲಿಲ್ಲ. ಅಪ್ಪನಿಗೇನೊ ಅಂಗಡಿಯನ್ನು ಕಂಡರೆ ಅಭಿಮಾನ. ನಮ್ಮ ಅಂಗ-ಡಿಯ ಸಮಾನವಿಲ್ಲ ಎಂಬ ಭಾವನೆ. ಆದರೆ ನನಗಂತೂ ಈ ಕೆಲಸ ಬೇಜಾರ ಹಿಡಿಸಿತ್ತು. ಆ ಕೆಲಸ ನನಗೆ ತಕ್ಕುದಲ್ಲ ಎನಿಸಿತ್ತು.

ಆ ವರುಷದ ಮಳೆಗಾಲದಲ್ಲಿ ನಮ್ಮ ಅಪ್ಪ ಇದ್ದಕ್ಕಿದ್ದಂತೆಯೇ ತೀರಿ-ಕೊಂಡರು. ರಾತ್ರಿಯ ತನಕ ಅಂಗಡಿಯಲ್ಲಿ ಕುಳಿತಿದ್ದು........ರಾತ್ರಿಯ ವ್ಯಾಪಾರ ಮುಗಿದಾಗ ಅಂದಿನ ಆದಾಯವನ್ನು ಲೆಕ್ಕಹಾಕಿ ಮನೆಗೆ ಬಂದರು. ಎಂದಿನಂತೆ ಮೊಸರನ್ನವನ್ನು ತಿಂದು ಮಲಗಿದವರು ಏಳಲೇ ಇಲ್ಲ.

ಅಮ್ಮ ಹಠಾತ್ತಾಗಿ ಬಂದೊದಗಿದ ಪರಿಸ್ಥಿತಿಗೆ ಹೇಗೋ ಹೊಂದಿ-ಕೊಂಡಳು. ಅನ್ನ-ಬಟ್ಟೆಗೆನೂ ಅಪ್ಪ ಕೊರತೆಮಾಡಿರಲಿಲ್ಲ. ನಾನೂ ಸಾಧ್ಯ-ವಾದಷ್ಟು ಅಮ್ಮನ ಹತ್ತಿರದಲ್ಲೇ ಇರುತ್ತಿದ್ದೆ. ಆಕೆಯ ಅನುಮತಿ ಪಡೆದು 'ಗುಡಿಸಿಲಂಗಡಿ' ಮುಚ್ಚಿಬಿಟ್ಟು ನಿಲ್ದಾಣದಲ್ಲೇ ಅಂಗಡಿ ತೆಗೆದೆ. ಆಗ ನನಗೆ ಹೊಸ ಹೊಸ ಯೋಚನೆಗಳು ಹೊಳೆದುವು. ಹಳೇ ವೃತ್ತಪತ್ರಿಕೆ-ಗಳನ್ನು ಶೇಖರಿಸುವುದರ ಜೊತೆಗೆ ಸ್ಕೂಲು ಪುಸ್ತಕಗಳನ್ನೂ ಕೊಂಡು ಮಾರುತ್ತಿದ್ದೆ. ಗಿರಾಕಿಗಳೇನೋ ಬಹಳ ಜನವಿರಲಿಲ್ಲ. ಆದರೆ ರೈಲಿನಲ್ಲಿ ಶಾಲೆಗೆ ಹೋಗೋ ಮಕ್ಕಳು ಬರುತ್ತಿದ್ದರು. ಹತ್ತೂವರೆ ರೈಲಿನಲ್ಲಂತೂ ಆಗ ತಾನೆ ಶುರುವಾಗಿದ್ದ ಆಲ್ಬರ್ಟ ಮಿಷನ್ ಕಾಲೇಜಿಗೆ ಹೋಗೋ

ಹುಡುಗರು ತುಂಬಿರುತ್ತಿದ್ದರು. ಜನಗಳೊಂದಿಗೆ ಮಾತನಾಡ್ತೋದೆಂದರೆ ನನಗೆ ತುಂಬಾ ಇಷ್ಟ. ಬಾಳೇಹಣ್ಣು ತಿನ್ನೋದಕ್ಕೆ ಮಾತ್ರ ಬಾಯಿಬಿಡದೆ ಏನಾದರೂ ಸಮಾಚಾರವನ್ನು ಹೇಳೋದಕ್ಕೆ ಬಾಯಿಬಿಡುವ ಗಿರಾಕಿಗಳನ್ನು ಕಂಡರೆ ನನಗೆ ಬಲು ಪ್ರೀತಿ. ಆದರೆ ಅವರು ಮಳೆ-ಬೆಳೆ ವಿಚಾರವಾಗಿಯೊ ಇಲ್ಲವೆ ಹಳ್ಳಿಯ ಹಳೆಯ ವ್ಯಾಜ್ಯದ ವಿಚಾರವಾಗಿಯೊ ಮಾತು ತೆಗೆದರೆ ನನಗೆ ತುಂಬಾ ಬೇಜಾರಾಗಿಬಿಡುತ್ತಿತ್ತು. ಅಪ್ಪ ಹೋದ ಮೇಲಂತೂ ಆ ಹಳೆಯ ಗಿರಾಕಿಗಳೆಲ್ಲಾ ಒಬ್ಬೊಬ್ಬರಾಗಿ ಜಾರಿಕೊಂಡುಬಿಟ್ಟರು.

ರೈಲಿಗೆ ಕಾಯಬೇಕಾಗಿ ಬಂದಾಗ ಶಾಲೆಯ ಹುಡುಗರು ನನ್ನ ಅಂಗಡಿಗೆ ಬರುತ್ತಿದ್ದರು. ಮೊದಲು ತೆಂಗಿನಕಾಯಿದ್ದ ಕಡೆ ಈಗ ಪುಸ್ತಕಗಳು, ಹಳೇ ಪುಸ್ತಕಗಳು, ಅಲ್ಲಿ ಇಲ್ಲಿ ಕದ್ದ ಪುಸ್ತಕಗಳೂ ಇನ್ನೂ ತರಹೆವಾರಿ ಪುಸ್ತಕಗಳೂ ನನ್ನ ಅಂಗಡಿಗೆ ಬಂದು ಬೀಳುತ್ತಿದ್ದುವು. ನಾನೂ ಬೇಕಾದಷ್ಟು ಚೌಕಸಿ ಮಾಡಿ ಆರಕ್ಕೆ ಮೂರಾಗಿ ಕೊಂಡು ಮಾರುವಾಗ ಒಂದಕ್ಕೆ ನಾಲ್ಕರಷ್ಟು ಲಾಭ ಸಂಪಾದಿಸುತ್ತಿದ್ದೆ. ನ್ಯಾಯವಾಗಿ ಹಾಗೆ ಮಾಡಬಾರದಾಗಿತ್ತು. ಆದರೆ ನನ್ನ ಗೆಳೆಯನಾದ ಸ್ಟೇಷನ್ ಮಾಸ್ಟರ್ ತನಗೂ ತನ್ನ ಮಕ್ಕಳಿಗೂ ಏನು ಬೇಕಾದರೂ ಅಂಗಡಿಯಲ್ಲಿ ಮಿತಿಯಿಲ್ಲದೆ ಸಾಲಮಾಡುತ್ತಾ ಇದ್ದುದಷ್ಟೇ ಅಲ್ಲದೇ ನನ್ನ ಅಂಗಡಿ ಮುಂದೆ ಬೆಳೀತಾ ಇದ್ದ ಪುಸ್ತಕಗಳ ರಾಶಿಯಿಂದ ತನಗೆ ಓದೋದಕ್ಕೆ ಬೇಕಾದದ್ದನ್ನೆಲ್ಲಾ ತೆಗೆದುಕೊಳ್ಳುತ್ತಾ ಇದ್ದರು.

ಹಳೇ ಕಾಗದದಲ್ಲಿ ಪೊಟ್ಟಣ ಕಟ್ಟಬೇಕು. ಅಂದು ನನಗೆ ಕಾಗದ ಹುಡುಕೋ ಸಂಭ್ರಮದಲ್ಲಿ ಈ ಪುಸ್ತಕ ವ್ಯಾಪಾರದ ಯೋಚನೆ ಹೊಳೆಯಿತು. ಯಾರಾದರೂ ಏನಾದರೂ ಕೊಂಡುಕೊಂಡು ಅದನ್ನು ಹಾಗೆ ಯಾತರಲ್ಲೂ ಸುತ್ತಿಕೊಳ್ಳದೇ ಕೈಯಲ್ಲಿ ಹಿಡಿದುಕೊಂಡು ಹೋದರೆ ನನಗೆ ಸರಿಬೀಳುತ್ತಿರಲಿಲ್ಲ. ಸಾಮಾನು ಕೊಟ್ಟರೆ ಅದನ್ನು ಚೆನ್ನಾಗಿ ಸುತ್ತಿಕೊಡಬೇಕು. ಆದರೆ ಅಂಗಡಿ ಅಪ್ಪನದಾಗಿದ್ದಾಗ, "ಕಾಗದ ತಂದೋರು ಕೊಂಡುಕೊಂಡ ಸಾಮಾನನ್ನು ಅದರಲ್ಲಿ ಮಹಾರಾಯರ ಹಾಗೆ ಕಟ್ಟಿಕೊಂಡು ಹೋಗಲಿ. ನಾವು ಕಾಗದ ಕೊಂಡಿಟ್ಟುಕೊಳ್ಳೋದಕ್ಕೆ ಆಗೋದಿಲ್ಲ. ನಮಗಿರೋ ಲಾಭ ನೋಡಿದರೆ ಇಷ್ಟು. ಈವಾಗ ಎಣ್ಣೆ ಕೊಂಡರೆ ನಾವು ಅದಕ್ಕೆ

ಶ್ರೀ ರಂಗಪ್ಪ ಡಾ ಗ್ರಂಥಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ಗ್ರಂಥಾಲಯ ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ


ಪಾತ್ರೆ ಕೊಡುತ್ತೇವೇನು ?" ಎಂದುಬಿಟ್ಟದ್ದರು. ಅಪ್ಪ ಈ ವಾದವನ್ನು ಮುಂದೊಡ್ಡುತ್ತಿದ್ದಷ್ಟು ದಿನವೂ ನಮ್ಮ ಅಂಗಡಿಯಲ್ಲಿ ಒಂದು ಚೂರು ಕಾಗದವೂ ಇರುತ್ತಿರಲಿಲ್ಲ. ಆದರೆ ಅವರು ಕಾಲವಾದ ನಂತರ ನಾನು ಬೇರೆ ಯೋಜನೆ ಮಾಡಿದೆ. ನನಗೆ ಹಳೆ ಕಾಗದ, ಪುಸ್ತಕ ಬೇಕಾಗಿದೆ-ಯೆಂದು ಪ್ರಕಟಿಸಿದೆ. ನನ್ನ ಅಂಗಡಿಯ ಮುಂದೆ ಒಂದು ದೊಡ್ಡ ರಾಶಿಯೇ ಬಿತ್ತು. ಗಡಿಬಿಡಿ ಇಲ್ಲದಾಗ, ಪ್ರಯಾಣಿಕರ ಗದ್ದಲವಿಲ್ಲದಾಗ ವಿಂಗಡಿಸಿಟ್ಟ ಹಳೆಯ ಪುಸ್ತಕಗಳ ಕಟ್ಟೊಂದನ್ನು ತೆಗೆದುಕೊಂಡು ಗದ್ದಿಗೆಯ ಮೇಲೊರಗಿ-ಕೊಂಡು ಓದುವುದಕ್ಕಿಂತ ಆಹ್ಲಾದಕರವಾದುದು ಬೇರೊಂದಿರಲಿಲ್ಲ. ಮಧ್ಯೆ-ಮಧ್ಯೆ ತಲೆಯೆತ್ತಿ ದೂರದಲ್ಲಿ ಕಾಣುತ್ತಿದ್ದ ಹುಣಿಸೆಮರವನ್ನು ನೋಡು-ತ್ತಿದ್ದೆ. ಬೇಸರ ಹಿಡಿಸಿದ ಪುಸ್ತಕಗಳನ್ನೂ, ಬೇಸರ ಹಿಡಿಸುವ ಪುಸ್ತಕ-ಗಳನ್ನೂ, ವೇದಾಂತ ಚರಿತ್ರೆಗಳನ್ನೂ, ವೀರ ಯೋಧರ ಕಥೆಗಳನ್ನೂ ಓದು-ತ್ತಿದ್ದೆ. ದೇಗುಲ, ದೇವಸ್ಥಾನಗಳ ದೃಶ್ಯಗಳನ್ನು ಸುಂದರ ತರುಣಿಯರ ಚಿತ್ರಗಳನ್ನು ಮನಸ್ಸಿನಲ್ಲೇ ಮೆಲುಕುಹಾಕುತ್ತಿದ್ದೆ. ಅಂತೂ ಕಸದಲ್ಲಿ ರಸ-ವನ್ನು ಕಂಡೆ.

027597

* * * *

ರಾಜುವಿನ ಪಾಠ ಮಕ್ಕಳಿಗೆ ಬಹಳವಾಗಿ ಹಿಡಿಸಿತ್ತು. ಮಕ್ಕಳ ಜೊತೆಗೆ ಮೇಷ್ಟ್ರರೂ ಕಣ್ಣು-ಕಣ್ಣು, ಬಾಯಿ-ಬಾಯಿ ಬಿಟ್ಟುಕೊಂಡು ಕೇಳುತ್ತಿದ್ದರು. ಮನೆಗೆ ಬಂದಮೇಲೆ ಮಕ್ಕಳು ಸ್ವಾಮೀಜಿಯ ಭಾಷಣವನ್ನು ಬಣ್ಣಿಸಿದ್ದೂ ಬಣ್ಣಿಸಿದ್ದೆ. ಮಕ್ಕಳ ವರ್ಣನೆಯನ್ನು ಕೇಳಿದ ಹಿರಿಯರ ಬಾಯಲ್ಲೂ ನಿರೂ-ರಿತು. ಮಾರನೆಯ ದಿನ ಮಕ್ಕಳ ಜೊತೆಗೆ ತಂದೆ-ತಾಯಿಯರೂ ಬಂದರು. ಮಕ್ಕಳ ಶಾಲೆಗೆ ಮುದುಕರು ಬಂದರೆ ಅದಕ್ಕೆ ಕಾರಣವಿರಬೇಕಲ್ಲವೇ ?

" ಮಕ್ಕಳು ರಾತ್ರೆ ಮನೆಗೆ ಬರೋದು ತುಂಬಾ ಹೊತ್ತಾಗುತ್ತೆ ನೋಡಿ ಅದಕ್ಕೆ ನಾವೂ........"

" ಓ ಆಗಲಿ........ಆಗಲಿ........ಅದಕ್ಕೇನಂತೆ. ನಾನೇ ಹೇಳಬೇ-ಕೂಂತ ಇದ್ದೆ. ನೀವೇ ಬಂದಿರಲ್ಲ, ಸಂತೋಷ. ಆದರೆ ಇಲ್ಲಿಗೆ ಬಂದರೆ ನೀವು ಕಣ್ಣುಮುಚ್ಚಿ ಕಿವಿ ತೆರೆದಿರಬೇಕು."

ದಿನ ಕಳೆದ ಹಾಗೆಲ್ಲಾ ರಾಜುವಿನ ಶಿಷ್ಯಕೋಟಿ ಹೆಚ್ಚಿತು. ಮಕ್ಕಳು,

ಮುದುಕರು, ಮೇಷ್ಟ್ರರು ಎಲ್ಲರೂ ಅಲ್ಲಿ ಕೂತು ಕೇಳುತ್ತಿದ್ದರು. ಹಳ್ಳಿಗರು ತಂದ ಲಾಂದ್ರಗಳಿಂದ ಮಂಟಪ ಕಂಗೊಳಿಸುತ್ತಿತ್ತು. ರಂಗಸ್ಥಳದಲ್ಲಿ ಬಂದು ನಿಂತು ಏನು ಹೇಳಲು ತೋಚದವನ ಹಾಗಿತ್ತು ರಾಜುವಿನ ಸ್ಥಿತಿ.

"ಮಕ್ಕಳನ್ನು ಬೇಕಾದರೆ ಮಂಟಪದ ಒಂದು ಮೂಲೆಗೆ ಕರೆದು-ಕೊಂಡು ಹೋಗಿ ಪಾಠ ಆರಂಭಿಸಿ. ಜೊತೆಗೆ ಒಂದು ಲಾಂದ್ರ ತೆಗೆದು-ಕೊಂಡು ಹೋಗಿ."

ಹಾಗೆ ಹೇಳುತ್ತಿರುವಾಗಲೇ ರಾಜುವಿಗೆ ಅನ್ನಿಸಿತು: ಆ ಮಕ್ಕಳಾದರೂ ತನ್ನವಲ್ಲ. ಆ ಮೇಷ್ಟ್ರರು ತನ್ನ ಮಾತು ಕೇಳಬೇಕಾಗಿಲ್ಲ. ಆ ಲಾಂದ್ರ-ವಾದರೊ ತನ್ನದಲ್ಲ. ಆದರೂ ತಾನು ಎಂತಹ ಅಧಿಕಾರವಾಣಿಯಿಂದ ಮಾತಾಡಬಲ್ಲೆ........ಮೆಷ್ಟ್ರರೇನೊ ಎದ್ದರು. ಆದರೆ ಹುಡುಗರು ಏಳಲಿಲ್ಲ. "ಮೊದಲು ಪಾಠ, ಆಮೇಲೆ ಮಾತು. ಈವಾಗ ನಿಮ್ಮ ಹಿರಿಯರಿಗೆ ಒಂದಿಷ್ಟು ವಿಚಾರ ಹೇಳುತ್ತೇನೆ. ಅದೆಲ್ಲಾ ನಿಮಗೆ ಹಿಡಿಸೊಲ್ಲ........" ರಾಜುವಿನ ಮಾತಿಗೆ ಪ್ರತಿಹೇಳದೆ ಮಕ್ಕಳೆದ್ದು ಮೇಷ್ಟ್ರರ ಸಂಗಡ ಮಂಟಪದ ಮೂಲೆಯೊಂದಕ್ಕೆ ಹೋದರು.

ವೇಲನ್ ಮಧ್ಯದಲ್ಲಿ ಬಾಯಿಹಾಕಿದ, "ಏನಾದರೂ ಉಪದೇಶ ಮಾಡಿ ಸ್ವಾಮಿ. ಹೂವಿನಿಂದ ನಾರೂ ಸ್ವರ್ಗಕ್ಕೇರಿತು ಅನ್ನೋಹಾಗೆ ನಿಮ್ಮಿಂದ ನಾವು ಸ್ವಾಮಿ ಪಾದ ಸೇರೋ ಮಾರ್ಗ ನೋಡೋಣ........" ಜನರೆಲ್ಲ ಇದಕ್ಕೆ ತಲೆಯಾಡಿಸಿ ಒಪ್ಪಿಗೆಯಿತ್ತರು.

ರಾಜು ಈಗ ತನ್ನ ಪಾತ್ರವನ್ನು ರಂಗದ ಮೇಲೆ ಪ್ರದರ್ಶಿಸದೆ ವಿಧಿ-ಯಿರಲಿಲ್ಲ. ಆದರೆ ಹೇಗೆ ಷುರು ಮಾಡುವುದು?

ಒಂದಾನೊಂದು ಕಾಲದಲ್ಲಿ........ಒಬ್ಬಾನೊಬ್ಬ ರಾಜ........ಕೆಟ್ಟದೋ ಒಳ್ಳೆಯದೋ ಮಾಡೋದಕ್ಕೆ ಹೋಗಿ ಕಷ್ಟ–ಸುಖ ಅನುಭವಿಸಿದ ಅಂತ ಹೇಳೋದೆ? ಅದೆಲ್ಲ ಸರಿಯಲ್ಲ. ಈಗ ತನಗೆ ಮಾಡೋಕೆ ಇರುವ ವಿಷಯ-ವೊಂದೆ. ಜೈಲು ಜೀವನ........ಜೈಲಿನ ನಂತರದ ಜೀವನ........ಆದರಲ್ಲೂ ಕಳ್ಳನೊಬ್ಬನನ್ನು ಸನ್ಯಾಸಿಯೆಂದು ತಿಳಿದಿದ್ದರಿಂದ ಆಗುವ ಫಲಗಳು ಇತ್ಯಾದಿ........

ಜನ ರಾಜುವಿಗೆ ಸ್ಫೂರ್ತಿದೇವಿ ಪ್ರತ್ಯಕ್ಷವಾಗುವುದನ್ನು ಎದುರು-

ನೋಡುತ್ತಿದ್ದರು.

"ಅಯ್ಯೋ ಮೂರ್ಖರೆ! ತಂದಿರೊ ಹಿಟ್ಟು ರೊಟ್ಟಿ, ಅಲ್ಲಿಟ್ಟುಬಿಟ್ಟು ನಿಮ್ಮ ಪಾಡಿಗೆ ನೀವು ಹೋಗಬಾರದೆ?" ಎಂದು ಕೂಗಬೇಕೆನಿಸಿತು. ಬಹಳ ಹೊತ್ತು ಯೋಚಿಸಿ ರಾಜು ಹೇಳಿದ:

"ಯಾವುದಕ್ಕೂ ಕಾಲ ಬರಬೇಕು."

ಮುಂದುಗಡೆಯ ಸಾಲಿನಲ್ಲಿ ಕುಳಿತಿದ್ದ ವೇಲನಿಗೂ ಅವನ ಸ್ನೇಹಿತ-ರಿಗೂ ನಿರಾಶೆಯಾಯಿತು. ಆದರೂ ರಾಜು ಏನು ಹೇಳುತ್ತಾನೆಂದು ಅವ-ರಿಗೆ ತಿಳಿಯಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದು ರಾಜು ಮತ್ತೆ "ಇನ್ನೊಂದು ದಿನ ಮಾತನಾಡುತ್ತೇನೆ, ಇವತ್ತಿಲ್ಲ."

"ಯಾಕೆ ಸ್ವಾಮಿ, ಯಾಕೆ ಇನ್ನೊಂದು ದಿನ?"

"ಯಾಕೆ ಅಂದರೆ ಅದಕ್ಕೆ. ಮಕ್ಕಳು ಪಾಠ ಮುಗಿಸಿಕೊಂಡು ಬರೋ-ತನಕ ಇಲ್ಲೇ ಕೂತು ಬೆಳಗಿನಿಂದ ಈಗಿನ ತನಕ ಮಾಡಿರೊ ಕೆಲಸಗಳ-ನೆಲ್ಲಾ ವಿಚಾರಮಾಡಿ ನೋಡಿ."

"ಎಂತಹ ಕೆಲಸ-ಕಾರ್ಯ?"

"ನೀವು ಮಾಡಿದ ಕೆಲಸ ಕಾರ್ಯ.........ಆವಾಗಿನ ಭಾಷೆ-ಭಾವನೆ-ಗಳು........"

"ಸರಿಯಾಗಿ ನೆನಪಿಲ್ಲ."

"ಅದಕ್ಕೇ ಹೇಳಿದ್ದು. ಜ್ಞಾಪಿಸಿಕೊಳ್ಳಿ ಅಂತ. ನಿಮಗೆ ನಿಮ್ಮ ಮಾತೇ ನೆನಪಿಲ್ಲದೇ ಹೋದಮೇಲೆ ಬೇರೆಯವರ ಮಾತು ಭಾಷಣ ಜ್ಞಾಪಕಕ್ಕೆ ಬರುತ್ತದೆಯೇ?"

ಇದು ಜನಕ್ಕೆ ಮೆಚ್ಚುಗೆಯಾಯಿತು. ಜನ ಮೆಲ್ಲನೆ ನಕ್ಕರು. ನಗು ನಿಂತಾಗ ರಾಜು ಹೇಳಿದ:

"ನಿಮ್ಮಲ್ಲಿ ಪ್ರತಿಯೊಬ್ಬರೂ ನಿಮ್ಮದೇ ಆದ ಸ್ವತಂತ್ರ ವಿಚಾರಣಾ-ಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಮೂಗುದಾರ ಹಾಕಿ ಎತ್ತುಗಳನ್ನು ಎಳ-ಕೊಂಡು ಹೋಗೋಹಾಗೆ ಇನ್ನೊಬ್ಬರ ಭಾವನೆಗಳು ನಿಮ್ಮನ್ನು ಎಳ-ಕೊಂಡು ಹೋಗಬಾರದು. ಹಾಗೇನಾದರೂ ಆದರೆ ಎತ್ತಿಗೆ ಮೂಗುದಾರ ಹಾಕಿದ ಹಾಗಾಗುತ್ತೆ."

ಜನ ಮಾತ್ರ ಇದನ್ನು ಒಪ್ಪಲಿಲ್ಲ.

ವೇಲನ್ ಕೇಳಿದ, "ಅಲ್ಲಾ ಸ್ವಾಮಿ, ನೀವೇನೋ ಹೇಳಿಬಿಟ್ರಿ? ಆದರೆ ಬೆಳಗಿನಿಂದ ಸಂಜೆಯತನಕ ಬೇಸಾಯ ಮಾಡೋದು, ದನಕರು ನೋಡಿಕೊಳ್ಳೋದು ಇಂತಹ ಕೆಲಸ ಮಾಡೋ ನಮಗೆ ವೇದಾಂತ ಯೋಚಿಸುವುದಕ್ಕಾಗುತ್ತಾ? ಅದಕ್ಕೆಲ್ಲಾ ನೀವು ಸ್ವಾಮಿ ನೀವು, ನಮಗೆ ನೀವು ಹೇಳಬೇಕು."

ಇನ್ನೊಬ್ಬ ಮಧ್ಯದಲ್ಲೇ ಪ್ರಶ್ನಿಸಿದ :

"ಅದೂ ಅಲ್ಲದೆ ಬೆಳಗಿನಿಂದ ಮಾತಾಡಿರೋದನ್ನೆಲ್ಲಾ ಯಾಕೆ ವಿಚಾರ ಮಾಡಬೇಕು?"

ಯಾಕೆ ವಿಚಾರ ಮಾಡಬೇಕೆಂಬುದು ರಾಜುವಿಗೆ ಸರಿಯಾಗಿ ಗೊತ್ತಿರಲಿಲ್ಲ, "ಮಾಡಿದರೆ ಯಾಕೆ ಮಾಡಬೇಕೂಂತ ನಿಮಗೇ ಗೊತ್ತಾಗುತ್ತೆ."

"ನೀವು ಪ್ರಯತ್ನ ಪಡೋವವರೆಗೂ ಏನು ಮಾಡೋಕಾಗುತ್ತೆ, ಏನು ಮಾಡೋಕೆ ಆಗೋದಿಲ್ಲ ಅನ್ನೋದು ಹೇಗೆ ಗೊತ್ತಾಗುತ್ತೆ?"

ರಾಜುವಿನ ಮಾತಿನ ಸರಣಿಗೆ ಆ ಮುಗ್ಧಜೀವಿಗಳು ಮರುಳಾದರು. ಆದರೂ ಅವರಲ್ಲೊಬ್ಬ ಕೇಳಿದ, "ಈಗ ಒಂದು ನಿಮಿಷದ ಹಿಂದೆ ಏನು ಹೇಳಿದೆ ಅನ್ನೋದು ನನಗೆ ಮರೆತುಹೋಗಿದೆ. ನೂರಾರು ಯೋಚನೆಗಳು ಒಟ್ಟಿಗೆ ತಲೆಯಲ್ಲಿ ತುಂಬಿರೋವಾಗ ಎಲ್ಲಾನೂ ಜ್ಞಾಪಕದಲ್ಲಿಟ್ಟುಕೊಳ್ಳೋದು ಹೇಗೆ ಸಾಧ್ಯ?"

"ಅದೊಂದು ದುರ್ಬಲತೆ. ಅದನ್ನು ಮುಖ್ಯವಾಗಿ ನೀವು ಹೋಗಲಾಡಿಸಿಕೊಳ್ಳಬೇಕು. ಅದನ್ನು ಮಾಡೋವರೆಗೂ ಅದರ ಸೊಗಸು ನಿಮಗೆ ತಿಳಿಯೋದಿಲ್ಲ" ರಾಜು ಅಲ್ಲಿ ಕುಳಿತಿದ್ದವರಲ್ಲಿ ಮೂರು ಜನಗಳನ್ನು ಆರಿಸಿ ಅವರಿಗೆ ಆಜ್ಞೆಯಿತ್ತ, "ನಾಳೆಯೋ, ನಾಡದೋ ನೀವು ಬಂದಾಗ ಬೆಳಗಿನಿಂದ ಸಂಜೆಯತನಕ ನೀವು ಉಪಯೋಗಿಸಿದ ಆರು ಪದಗಳನ್ನು ನನಗೆ ಹೇಳಬೇಕು. ಆರೇ ಆರು ಪದಗಳು ಆರುನೂರಲ್ಲ. ತಿಳೀತೇ?"

"ಆರುನೂರು! ಅಬ್ಬಾ, ಆರುನೂರು ಪದ ಹೇಗೆ ಜ್ಞಾಪಕದಲ್ಲಿ ಇಟ್ಟಿರೋದು ಸಾಧ್ಯ ಸ್ವಾಮಿ?"

"ಸಾಧ್ಯ, ನನಗೆ ಸಾಧ್ಯ" ರಾಜುವಿನ ಶಕ್ತಿಗೆ ಎಲ್ಲರೂ ತಲೆದೂಗಿ-

ದರು. ತನಗೆ ಸಲ್ಲಬೇಕಾಗಿದ್ದ ಗೌರವ ಸಂದದ್ದನ್ನು ಕಂಡು ರಾಜು ಹಿಗ್ಗಿದ. ಅಷ್ಟುಹೊತ್ತಿಗೆ ಮಕ್ಕಳು ಬಂದರು. ರಾಜುವಿಗೆ ಸದ್ಯ ಬಂದರಲ್ಲ ಎನಿಸಿತು. ಕುಳಿತಲ್ಲಿಂದ ಎದ್ದು ನದಿಯ ದಂಡೆಯ ಕಡೆಗೆ ಹೊರಟ. ಇತರರೂ ಅವನನ್ನು ಅನುಸರಿಸಿದರು ನದಿಯ ಪಾವಟಿಗೆಗಳನ್ನಿಳಿಯುತ್ತಾ, "ಪಾಪ, ಮಕ್ಕಳಿಗೆ ನಿದ್ದೆ ಬರುತ್ತಿರಬೇಕು. ಈಗ ಮನೆಗೆ ಕರೆದುಕೊಂಡು ಹೋಗಿ, ಮತ್ತೆ ಯಾವಾಗಲಾದರೂ ಬನ್ನಿ" ಎಂದ.

ಜನ ಮತ್ತೊಂದು ದಿನ ಬಂದು ಸೇರಿದಾಗ ರಾಜು ಅವರನ್ನು ನಿರಾಶೆಗೊಳಿಸಲಿಲ್ಲ. ಕೈಯಲ್ಲಿ ತಾಳ ಹಾಕುತ್ತಾ ಒಂದು ಭಜನೆ ಪ್ರಾರಂಭಿಸಿದ. ಭಜನೆಯ ಪಲ್ಲವಿಯನ್ನು ಜನರೆಲ್ಲಾ ಹಾಡಿದರು. ನೂರಾರು ಧ್ವನಿಗಳ ಸಮ್ಮಿಳತದ ಧ್ವನಿಯಿಂದ ಹೊರಹೊಮ್ಮುತ್ತಿದ್ದ ಆ ದಿವ್ಯಗೀತೆ ಮಂಟಪದಲ್ಲೆಲ್ಲಾ ಪ್ರತಿಧ್ವನಿಸುತ್ತಿತ್ತು. ಯಾರೋ ದೊಡ್ಡ ನಂದಾದೀಪಗಳನ್ನು ತಂದಿದ್ದರು. ಇನ್ನೊಬ್ಬರು ಅವಕ್ಕೆ ಎಣ್ಣೆ-ಬತ್ತಿ ಹಾಕಿದರು. ಕೆಲವರು ತಾವು ತಂದಿದ್ದ ದೇವರ ಪಠಗಳನ್ನು ಮಂಟಪದ ಕಂಬಗಳಿಗೆ ತೂಗು ಹಾಕಿದರು. ಸ್ವಲ್ಪ ದಿನ ಕಳೆಯುವುದರೊಳಗಾಗಿ ಹೆಂಗಸರು ಬೆಳಿಗ್ಗೆ ಬಂದು ಮಂಟಪವನ್ನು ಸಾರಿಸಿ, ರಂಗೋಲಿ ಹಾಕಿ ಹೋಗುತ್ತಿದ್ದರು. ಕಂಬ-ಕಂಬಕ್ಕೂ ಮಾವಿನ ತೋರಣದ ಅಲಂಕಾರ. ದೇವರ ಪಠಗಳಿಗೆ ಹೂವಿನ ಮಾಲೆ. ಮಂಟಕ್ಕೆ ಹೊಸ ಕಳೆ ಬಂದಿತ್ತು. ಮಂಟಪದ ಮಧ್ಯದಲ್ಲಿ ರಾಜು ಕುಳಿತುಕೊಳ್ಳುತ್ತಿದ್ದ ಪೀಠಕ್ಕೆ ಯಾರೋ ಮೆತ್ತನೆಯ ಜಮಖಾನೆಯನ್ನು ತಂದುಹಾಕಿದರು. ಜನ ಕುಳಿತುಕೊಳ್ಳುವುದಕ್ಕೆ ಚಾಪೆಗಳಿದ್ದುವು.

ಗಡ್ಡಬಿಟ್ಟು ಜಟ ಬೆಳೆಸಿಕೊಂಡರೆ ತನ್ನ ವ್ಯಕ್ತಿತ್ವ ಮತ್ತಿಷ್ಟು ಆಕರ್ಷಕವಾಗುತ್ತದೆಂದು ತಿಳಿಯಲು ರಾಜುವಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಗಡ್ಡ ಬೋಳಿಸಿ ಕ್ರಾಫ್ ಬಿಟ್ಟ ವ್ಯಕ್ತಿ ಸನ್ಯಾಸಿಯ ಹಾಗೆ ಕಾಣಿಸುವುದು ಸಾಧ್ಯವೇ ? ಎಷ್ಟೇ ಅಸಹನೀಯವಾದರೂ ರಾಜು ಧೈರ್ಯದಿಂದ ಸನ್ಯಾಸಿಯ ವೇಷದ ವಿವಿಧ ಘಟ್ಟಗಳನ್ನು ದಾಟಿದನು. ಕೈಯಿಂದ ನೀವಿಕೊಳ್ಳಬಹುದಾದಷ್ಟು ದೊಡ್ಡದಾಗಿ ಗಡ್ಡ ಬೆಳೆಯುವ ಹೊತ್ತಿಗೆ ತಾನು ಕನಸಿನಲ್ಲೂ ಎಣಿಸದಂತಹ ಕೀರ್ತಿ ಬಂದಿತ್ತು. ಜನರ ಗುಂಪು ಮಂಟಪವನ್ನೂ, ಪ್ರಾಕಾರವನ್ನೂ ತುಂಬಿ ಅದಕ್ಕೂ ಮೀರಿ ನದಿಯ ದಂಡೆಯ ವರೆಗೂ

ಹರಡುತ್ತಿತ್ತು.

ವೇಲನ್ ಹಾಗೂ ಇನ್ನೊಂದಿಬ್ಬರನ್ನು ಬಿಟ್ಟು ರಾಜುವಿಗೆ ಇತರರ ಕುಲ-ಗೋತ್ರಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳುವ ಅವಶ್ಯಕತೆಯಿರಲಿಲ್ಲ. ಈಗಂತೂ ತನ್ನಿಂದಲೇ ಪ್ರಪಂಚವೋ ಎನ್ನುವಂತಿತ್ತು. ತನ್ನ ಶಕ್ತಿಗೆ ಮಿತಿಯೇ ಇಲ್ಲದೆ ಹೋಯಿತು. ವೇದ-ಮಂತ್ರಗಳನ್ನು ಜಪಿಸಿ, ವೇದಾಂತದ ಮೇಲೆ ಉಪನ್ಯಾಸ ಮಾಡುವುದರ ಜೊತೆಗೆ ವೈದ್ಯನಾಗುವ ಘಟ್ಟಕ್ಕೂ ಬಂದು ನಿಂತ ರಾಜು. ಮಕ್ಕಳೇನಾದರೂ ಸರಿಯಾಗಿ ನಿದ್ದೆಹೋಗದೇ ಇದ್ದಲ್ಲಿ ತಾಯಿಯರು ರಾಜುವಿನ ಬಳಿಗೆ, ಮಕ್ಕಳ ಸಮೇತ ಹಾಜರಾಗಿಬಿಡುತ್ತಿದ್ದರು.

ಅವರ ಹೊಟ್ಟೆ ಅದುಮಿ ನೋಡಿ ಯಾವುದೋ ಒಂದು ಮೂಲಿಕೆ ಕೊಟ್ಟು ಹುಶಾರಾಗದಿದ್ದರೆ ಮತ್ತೆ ಕರೆದುಕೊಂಡು ಬರಬೇಕೆಂದು ಹೇಳಿಕಳುಹಿಸುತ್ತಿದ್ದ. ಮಗುವಿನ ತಲೆ ಮುಟ್ಟಿದರೆ ಸಾಕು, ಮಗುವಿನ ಖಾಯಿಲೆ ಗುಣವಾದ ಹಾಗೆಯೇ ಎಂದು ನಂಬಿದ್ದವರೇ ಹೆಚ್ಚು. ಇದರ ಜೊತೆಗೆ ವ್ಯಾಜ್ಯ-ವ್ಯವಹಾರಗಳ ತೀರ್ಮಾನವೂ ಅವನೆದುರಿನಲ್ಲೇ ಆಗುತ್ತಿತ್ತು.

ಮಧ್ಯಾಹ್ನವೆಲ್ಲಾ ಇವುಗಳಿಗಾಗಿ ಮೀಸಲು. ಈಗಂತೂ ಅವನಿಗೆ ಅವನೆಂಬುವ ಜೀವನವೇ ಇರಲಿಲ್ಲ. ಪ್ರಾತಃರ್ವಿಧಿಗಳನ್ನು ಮುಗಿಸಬೇಕಾದರೆ ಕೋಳಿಗಳು ಕೂಗುವುದಕ್ಕೆ ಎಷ್ಟೋ ಮುಂಚೆ ಏಳಬೇಕಾಗುತ್ತಿತ್ತು. ಸನ್ಯಾಸಿಯ ಬದುಕು ಸುಲಭದ ಕೆಲಸವಾಗಿರಲಿಲ್ಲ. ನದಿಯ ದಂಡೆಯ ಮೇಲಿನ ಜನರ ಗುಂಪೆಲ್ಲಾ ಕಳೆದ ಮೇಲೆ ಮಧ್ಯರಾತ್ರಿಯ ವೇಳೆಗೆ ರಾಜು ನೆಮ್ಮದಿಯ ನಿಟ್ಟುಸಿರನ್ನು ಬಿಡುತ್ತಿದ್ದನು. ಆಗ ಮಾತ್ರ ಅವನೂ ಎಲ್ಲರಂತೆ ತಿಂದು ಎಲ್ಲರಂತೆ ನಿದ್ರಿಸುವುದು ಸಾಧ್ಯವಾಗುತ್ತಿತ್ತು.

# 5

ನನಗೆ ರೈಲ್ವೆರಾಜು ಎಂದೇ ಹೆಸರಾಯಿತು. ನನ್ನನ್ನು ಕಂಡರಿಯ-ದವರೂ ಸಹಾ ಮಾಲ್ಗುಡಿಯ ನಿಲ್ದಾಣದಲ್ಲಿ ಇಳಿದ ಕೂಡಲೇ ನನ್ನ ಅಂಗಡಿ-ಯನ್ನು ಹುಡುಕಿಕೊಂಡು ಬರುತ್ತಿದ್ದರು. ತಾವಾಗಿ ಬಯಸದೆಯೇ ಇನ್ನೊ-ಬ್ಬರ ಕಣ್ಣಿಗೆ ಬೀಳೋದು ಕೆಲವರ ಹಣೇಲಿ ಬರೆದಿದೆ ಅಂತ ಕಾಣುತ್ತೆ. ನಾನಾಗಿ ನಾನು ಯಾರ ಸ್ನೇಹವನ್ನೂ ಬೆಳೆಸಿ, ಬಯಸಿ ಹೋಗುತ್ತಿರಲಿಲ್ಲ. ಆದರೆ ಅವರಾಗಿಯೇ ಬಂದು ನನ್ನ ಸ್ನೇಹವನ್ನು ಬಯಸಿದಾಗ ಇಲ್ಲವೆನ್ನು-ತ್ತಿರಲಿಲ್ಲ. ರೈಲಿನಿಂದ ಇಳಿದಕೂಡಲೇ ಎದುರಿಗೆ ಕಾಣುತ್ತಿದ್ದ ನನ್ನ ಅಂಗಡಿಗೆ ಬಂದು :

" ಇಲ್ಲಿಂದ ಎಷ್ಟು ದೂರ? " ಎಂತಲೋ, ಇಲ್ಲವೆ "ಅಲ್ಲಿಗೆ ಹೋಗೋಕೆ ಯಾವ ಕಡೆ ಹೋಗಬೇಕು ? " ಎಂದೋ, ಇಲ್ಲವೆ " ಈ ಊರಲ್ಲಿ ನೋಡು-ವಂತಹ ಸ್ಥಳಗಳು ಏನಿವೆ ? " ಎಂತಲೋ ಕೇಳುತ್ತಿದ್ದರು. ಕೆಲವರು " ನಿಮ್ಮ 'ಸರಯೂ ನದಿಯ ಮೂಲ' ಆ ಬೆಟ್ಟದಲ್ಲಿ ಇದೆಯಂತಲ್ಲ........ಬಹು ಸೊಗಸಾಗಿದೆ ಅಂತ ಹೇಳಿದರು. ಹೌದೇನು ? " ಎನ್ನುತ್ತಿದ್ದರು. ಇವರೆಲ್ಲಾ ಈ ರೀತಿ ಕೇಳುವುದನ್ನು ನೋಡಿ ನನಗೆ ನನ್ನ ಅಜ್ಞಾನದ ಪರಿಚಯ-ವಾಯಿತು. ಆದರೆ ನಾನು ಮಾತ್ರ ನನಗೆ ಗೊತ್ತಿಲ್ಲವೆಂದು ಹೇಳುತ್ತಿರಲಿಲ್ಲ. ಗೊತ್ತಿಲ್ಲ ಎನ್ನುವ ಶಬ್ದವೇ ನನ್ನ ಶಬ್ದಭಾಂಡಾರದಲ್ಲಿಲ್ಲ. ನಾನೇನಾದರೂ ಅವರು ಕೇಳಿದ ಪ್ರಶ್ನೆಗಳಿಗೆ ಗೊತ್ತಿಲ್ಲವೆಂದು ತಲೆಯಾಡಿಸಿಬಿಟ್ಟಿದ್ದರೆ ನನ್ನ ಜೀವನ ಬೇರೊಂದು ರೀತಿಯಲ್ಲಿ ಹರಿಯುತ್ತಿತ್ತೇನೊ ! ಆದರೆ ನಾನು "ಓಹೋ. ಸೊಗಸಾದ ಸ್ಥಳ. ನೀವು ನೋಡಿಲ್ಲವೆ? ಎಷ್ಟೋ ಕೆಲಸವಿದ್ದರೂ ಅದನ್ನು ಮಾತ್ರ ನೋಡದೆಹೋದರೆ ನೀವು ಇಲ್ಲಿಗೆ ಬಂದಿದ್ದು ವ್ಯರ್ಥ " ಎನ್ನುತ್ತಿದ್ದೆ. ಹಾಗೆ ಏಕಾದರೂ ಹೇಳಿದೆನೋ ಎನ್ನುತ್ತಿದ್ದೆ. ಬರೀ ಸುಳ್ಳಿನ ಕಂತೆ. ಆದರೆ ನಾನು ಸುಳ್ಳು ಹೇಳಬೇಕೆಂದು ಆ ರೀತಿ ಹೇಳಿರಲಿಲ್ಲ. ಕೇಳಿ-ದ್ದಕ್ಕೆ ಇಲ್ಲವೆಂದು ತಲೆಯಲ್ಲಾಡಿಸಬಾರದೆಂದು ಹಾಗೆ ಮಾಡಿದ್ದೆ.

ಸ್ಥಳ ರಮಣೀಯತೆಯ ಬಗ್ಗೆ ಪ್ರಶ್ನೆ ಮಾಡಿದವರೊಬ್ಬರು ಅದಕ್ಕೆ ದಾರಿಯನ್ನು ತೋರಿಸಲು ಕೇಳಿದ್ದು ಸಹಜ. "ಅದೋ, ಆ ದಾರೀಲಿ ಮಾರುಕಟ್ಟೆಯ ಚೌಕಕ್ಕೆ ಹೋದರೆ ಅಲ್ಲಿ ಟ್ಯಾಕ್ಸಿ ಸ್ಟ್ಯಾಂಡಿದೆ. ಅಲ್ಲಿ ಯಾವನಾದರೂ ಒಬ್ಬ ಟ್ಯಾಕ್ಸಿಯವನನ್ನು ಕೇಳಿದರೆ.........." ಆದರೆ ಈ ರೀತಿ ದಾರಿ ತೋರಿಸಿ ಪ್ರಯೋಜನವಿರಲಿಲ್ಲ. ಮಾರ್ಕೆಟ್ ಚೌಕಕ್ಕೇ ದಾರಿ ತೋರಿಸಬೇಕೆಂದು ಕೇಳಿದರು.

ಪೋರ್ಟರ್ ಕರಿಯನ ಮಗ ಹೆಚ್ಚಿಗೇನೂ ಕೆಲಸವಿಲ್ಲದೆ ಓಡಾಡು-ತ್ತಿದ್ದದ್ದರಿಂದ ಅವನನ್ನು ಅಂಗಡಿ ನೋಡಿಕೊಳ್ಳಲು ಹೇಳಿ ನಾನು ಆ ಪ್ರವಾ-ಸಿಗೆ ಟ್ಯಾಕ್ಸಿ ಹುಡುಕಿಕೊಡಲು ಹೋದೆ.

ಮಾರ್ಕೆಟ್ ಚೌಕದಲ್ಲಿ ಹಳೆಯ ಹದ್ದು ಗಫೂರ್ ಕಾದಿದ್ದನು........ ಅವನ ಬುಟ್ಟಿಗೆ ಇನ್ನೂ ಯಾರೂ ಬಿದ್ದಿರಲಿಲ್ಲ. ಊರಿನಲ್ಲಿದ್ದ ಹಳೇ-ಹಳೇ ಕಾರುಗಳನ್ನೆಲ್ಲಾ ಹೇಗೋ ಸಂಪಾದಿಸಿ ಅವುಗಳಿಗೆ ಹೊಸ ಕಳೆ ಬರಿಸಿ ಗುಡ್ಡ-ಬೆಟ್ಟಗಳ ನಡುವೆ ಓಡಾಡಿಸುತ್ತಿದ್ದನು. ಗಫೂರನ ಸ್ಥಾನ ಚೌಕದಲ್ಲಿದ್ದ ಚಿಲುಮೆಯ ಕಟ್ಟೆ. ಮೊಹರಿಯ ಪಕ್ಕದ ರಸ್ತೆಯಲ್ಲಿ ಕಾರು. 'ಗಫೂರ್' ಎಂದು ಗಟ್ಟಿಯಾಗಿ ಕೂಗಿದೆ.

"ನನ್ನ ಸ್ನೇಹಿತರೊಬ್ಬರು ಬಂದಿದ್ದಾರೆ. ಅವರಿಗೆ ಊರು ತೋರಿಸಿ-ಕೊಂಡು ಬರಬೇಕು. ತುಂಬಾ ಹುಷಾರು. ಅದಕ್ಕೆಂತಲೇ ನಾನೇ ನಿನ್ನ ಹತ್ತಿರ ಕರಕೊಂಡು ಬಂದೆ. ಅಂಗಡೀನೂ ಬಿಟ್ಟುಬಂದಿದ್ದೀನಿ." ಆಮೇಲೆ ಬಾಡಿಗೆಗಾಗಿ ಚೌಕಸಿ. ಪ್ರವಾಸಿಗಳು ಎಷ್ಟು ಕೊಡಬಲ್ಲರೋ ಅದನ್ನು ಹೇಳಿಸಿ ಗಫೂರ್ ಅವರು ಕೊಟ್ಟಷ್ಟನ್ನು ತೆಗೆದುಕೊಳ್ಳುವ ಹಾಗೆ ಮಾಡು-ತ್ತಿದ್ದೆ. ಮೋಟಾರಿನ ಸ್ಥಿತಿ ನೋಡಿ ಪ್ರವಾಸಿಗಳು ಭಯಪಟ್ಟಾಗ ಗಫೂರನ ಪರವಾಗಿ ವಾದಿಸುತ್ತಿದ್ದೆ, "ನೋಡಿ ಸಾರ್, ಅಂತಹ ಗಾಡೀನೆಲ್ಲ ನಮ್ಮ ಗಫೂರ್ ಇಡುವದಿಲ್ಲ. ಈ ಕಾರು ಸಿಗಬೇಕು ಅಂತ ಗಫೂರ್ ಊರು ಪೂರ್ತಿ ಹುಡುಕಿ ಬಿಟ್ಟ. ರಸ್ತೆ-ಗಿಸ್ತೆ ಇಲ್ಲದಿರೋ ಕಡೇಲೆಲ್ಲಾ ಹೋಗೋ ಮೋಟಾರು ಅಂದರೆ ಇದನ್ನು ಬಿಟ್ಟರೆ ಬೇರೆ ಇಲ್ಲ. ಗಫೂರ್ ನಿಮ್ಮನ್ನು ಹುಷಾರಾಗಿ ಕರೆದುಕೊಂಡು ಹೋಗಿ ಊರು ತೋರಿಸಿ ರಾತ್ರಿ ಊಟದ ಹೊತ್ತಿಗೆ ತಂದು-ಬಿಡುತ್ತಾನೆ. ಅಲ್ಲವೆ ಗಫೂರ್?"

"ನೋಡಿ ಸ್ವಾಮಿ, ಎಪ್ಪತ್ತು ಮೈಲಿ ಹೋಗಬೇಕು. ಈಗಾಗಲೇ ಒಂದು ಘಂಟೆ. ಈಗಲೇ ಹೊರಟರೆ........ದಾರೀಲಿ ಟೈರು ಪಂಚರ್-ಗಿಂಚರ್ ಆಗದೆಹೋದರೆ...." ನಾನು ಅವನ ಮಾತು ಮುಗಿಸೋದಕ್ಕೆ ಅವಕಾಶ ಕೊಡಲಿಲ್ಲ. ಇದರ ಫಲವಾಗಿ ಅವರು ಬಂದಾಗ ಮಧ್ಯರಾತ್ರಿಯಾಗಿತ್ತು. ಗಫೂರ್ ಹಾರನ್ ಮಾಡಿ ನನ್ನನ್ನೆಬ್ಬಿಸಿ ತನಗೆ ಸಲ್ಲಬೇಕಾದ ಹಣ ವಸೂಲು ಮಾಡಿಕೊಂಡು ಹೊರಟುಹೋದ. ಆತ ಹೊರಡಬೇಕಾಗಿದ್ದ ರೈಲು ಬೆಳಿಗ್ಗೆ ಎಂಟು ಘಂಟೆಗೆ. ರಾತ್ರಿ ಆತ ನನ್ನ ಅಂಗಡಿಯಲ್ಲೇ ಮಲಗಬೇಕಾಯಿತು. ನನ್ನ ಅಂಗಡಿಯಲ್ಲಿದ್ದ ಹಣ್ಣು–ಪಾನೀಯಗಳು ಆತನ ಹಸಿವಾರಿಸಿದುವು.

ಸಾಮಾನ್ಯವಾಗಿ ಪ್ರವಾಸಿಗಳ ಉತ್ಸಾಹಕ್ಕೆ ಮಿತಿಯೇ ಇರುವುದಿಲ್ಲ. ನೋಡುವುದಕ್ಕೆ ಏನಾದರೂ ಸಿಕ್ಕಿಬಿಟ್ಟರಾಯಿತು. ಎಷ್ಟೇ ತೊಂದರೆಯಾದರೂ ಸಹಿಸಿಕೊಂಡುಬಿಡುತ್ತಾರೆ. ಕಾಲಕಾಲಕ್ಕೆ ಊಟ-ನಿದ್ರೆಗಳಿಲ್ಲದೇ ನೂರಾರು ಮೈಲಿ ರೈಲು ಪ್ರಯಾಣ ಮಾಡುತ್ತಾರಲ್ಲ? ಯಾಕಾದರೂ ಮಾಡುತ್ತಾರೊ? ಆದರೆ ಅದನ್ನೆಲ್ಲಾ ಕೇಳೋಕೆ ನಾನು ಯಾರು? ಎಲೆ ಎತ್ತೊ ಗುಂಡ ಅಂದರೆ ಉಂಡೋರು ಎಷ್ಟು ಜನ ಅಂದಹಾಗಾಗುತ್ತೆ ಅಷ್ಟೆ. ನದೀ ನಮ್ಮ ಮನೇ ಎದುರಿಗೇ ಹರೀತಿರೋವಾಗ ಅದರ ಮೂಲ ಹುಡುಕಿಕೊಂಡು ನೂರು ಮೈಲಿ ಹೋಗೋದು ಎಂಥ ಬುದ್ಧಿವಂತಿಕೆ! ಸರಯೂಗೆ ಒಂದು ಮೂಲವಿದೆ ಅಂತ ಆ ಕ್ಷಣದ ವರೆಗೂ ನನಗೆ ತಿಳಿದಿರಲಿಲ್ಲ. ಆದರೆ ಅದನ್ನು ನೋಡಿಕೊಂಡು ಬಂದಾತ ಮಾತ್ರ ಅದನ್ನ ಹೊಗಳಿದ್ದೂ ಹೊಗಳಿದ್ದೆ.

"ನನ್ನ ಹೆಂಡತೀನಾ, ತಾಯೀನ ಕರೆದುಕೊಂಡು ಬರಬೇಕಾಗಿತ್ತು" ಎಂದು ಹೇಳುತ್ತಿದ್ದರು. ಅಂತೂ ಊರು ನೋಡೋಕೆ ಒಬ್ಬರೆ ಬಂದೋರೆಲ್ಲ ಮನೆಯವರನ್ನು ಕರೆದುಕೊಳ್ಳದೇ ಬಂದುಬಿಟ್ಟೆವಲ್ಲ ಎಂದು ಮರುಗದೇ ಇರುತ್ತಿರಲಿಲ್ಲ. ಮುಂದೆ ನಾನು ಪ್ರವಾಸಿಗಳಿಗಾಗಿಯೇ ಮೀಸಲಾದ ಮಾರ್ಗದರ್ಶಿಯಾದಾಗ ಯಾರಾದರೂ ಹಾಗೆ ಹಲುಬದೇ ಹೋದರೆ, "ನೋಡಿ ಸಾರ್, ಇಂತಹ ಜಾಗಗಳಿಗೆಲ್ಲಾ ಒಂಟೊಂಟೀ ಬರಬಾರದು. ಮನೆಯವರೆಲ್ಲಾ ಬಂದರೇನೇ ಚೆನ್ನಾಗಿರೋದು" ಎನ್ನುತ್ತಿದ್ದೆ. ಮುಂದಿನ ಸಲ ತಪ್ಪದೆ ಅವರು ಕರೆದುಕೊಂಡು ಬರುವುದಾಗಿ ಮಾತು ಕೊಡುತ್ತಿದ್ದರು.

ಆಗ ತಾನೇ ಸರಯೂ ಮೂಲವನ್ನು ನೋಡಿಬಂದಾತ ರಾತ್ರಿಯೆಲ್ಲಾ ಅದರ ಸೌಂದರ್ಯವನ್ನು ಬಣ್ಣಿಸಿದ.

"ನಿಜವಾಗಿ ಆ ಬೆಟ್ಟದ ಮೇಲೆ ಆ ದೇವಸ್ಥಾನವಿದೆ ನೋಡಿ, ಬಲು ಸೊಗಸಾಗಿದೆ. ಪುರಾಣದಲ್ಲಿ ಹೇಳಿದಾರಲ್ಲ ಕಥೆ..........ಅದೇ ಪಾರ್ವತಿ ಅಗ್ನಿಯಲ್ಲಿ ಬಿದ್ದುಹೋಗಿ ಅಲ್ಲಿ ನೀರಿನ ಚಿಲುಮೆ ಉಕ್ಕುವುದು ಇದೇ ಇರಬೇಕು.

ಯಾಕಂದರೆ ಅಲ್ಲೇ ಒಂದು ಕಂಬದ ಮೇಲೆ ಕೆತ್ತನೆ ಕೆಲಸವಿದೆ. 'ಪಾರ್ವತಿದೇವಿ ಅಗ್ನಿಪ್ರವೇಶ ಮಾಡುವ ದೃಶ್ಯ' ಇತ್ಯಾದಿ ಇತ್ಯಾದಿ.

ಕೆಲವು ಸಲ ವಿದ್ವಾಂಸರುಗಳು ಬಂದಾಗ ನನಗೆ ತಿಳಿದಿದ್ದ ವಿಷಯಗಳ ಜೊತೆಗೆ ಅವರ ವಿದ್ವತ್ತಿನ ಫಲವಾಗಿ ಹೊಸ ವಿಷಯಗಳು ತಿಳಿಯುತ್ತಿದ್ದುವು—ಆ ದೇವಸ್ಥಾನದ ಗೋಪುರಾನ ಕ್ರಿ. ಪೂ. ಮೂರನೇ ಶತಮಾನದಲ್ಲಿ ಕಟ್ಟಿರಬೇಕು ಅಂತಲೇ ತಿಳಿಸುತ್ತಿದ್ದರು. ಇಲ್ಲವೇ ಶಿಲ್ಪಕಲೆಯನ್ನು ನೋಡಿದರೆ ಕ್ರಿ. ಶ. ದಲ್ಲಿ ಕಟ್ಟಿರಬೇಕು ಎಂತಲೋ ತಿಳಿಸುತ್ತಿದ್ದರು. ಆದರೆ ಇಂತಹ ಪಾಂಡಿತ್ಯದಲ್ಲಿ ನನಗೆ ಆಸಕ್ತಿಯಿರಲಿಲ್ಲ. ಅದೂ ಅಲ್ಲದೆ ಕಾಲೇಜು ವಿದ್ವಾಂಸರು ಬಂದರೆ ನಾನೂ ಅದೂ ಇದೂ ಸ್ವಲ್ಪ ಮಾತಾಡಿಬಿಟ್ಟು, ಅಂಕಿ ಅಂಶಗಳನ್ನೆಲ್ಲಾ ಬಿಟ್ಟುಬಿಡುತ್ತಿದ್ದೆ. ಅನೇಕ ವೇಳೆ ಅವರೇ ಮಾತಾಡುತ್ತಿದ್ದರು. ನಾನು ಹೂಂಗುಟ್ಟುತ್ತಿದ್ದೆ. ಆದರೆ ಏನೂ ಅರಿಯದ ಪ್ರಾಣಿಯಾದರೆ ನನ್ನ ಬಾಯಿಗೆ ಬಿಡುವೇ ಇರುತ್ತಿರಲಿಲ್ಲ. ಯಾವುದೋ ತುಣುಕನ್ನು ತೋರಿಸಿ ಪ್ರಪಂಚದಲ್ಲೇ ಅಂತಹದನ್ನು ಬಿಟ್ಟರೆ ಇನ್ನಿಲ್ಲವೆಂದುಬಿಡುತ್ತಿದ್ದೆ. ಮನಸ್ಸಿಗೆ ಬಂದ ಅಂಕಿ–ಅಂಶಗಳನ್ನು ಕೊಡುತ್ತಿದ್ದೆ. ಒಬ್ಬನಿಗೆ ಒಂದು ಮಂಟಪವನ್ನು ಕ್ರಿ. ಶ. ಹದಿಮೂರನೇ ಶತಮಾನದ್ದು ಎಂದು ತೋರಿಸಿದರೆ ಇನ್ನೊಬ್ಬನಿಗೆ ಅದೇ ಮಂಟಪವನ್ನು ಕ್ರಿ. ಶ. ಪೂ. ಎನ್ನುತ್ತಿದ್ದೆ. ನನ್ನ ಪ್ರವಾಸಿಯೊಂದಿಗೆ ಬೇಸರ ಬಂದಾಗ, 'ಕಟ್ಟಿ ಇನ್ನೂ ಇಪ್ಪತ್ತು ವರುಷವಾಗಿರಲಿಲ್ಲ. ಆದರೆ ನೋಡಿದಿರಾ ಇದರ ಗತಿ, ಗಾಳಿ–ಮಳೆಗೆ ಜೀರ್ಣವಾಗಿ ಹೋಗಿದೆ. ಇಂತಹ ಮಂಟಪಗಳು ಇಲ್ಲಿ ನೂರಾರು' ಎನ್ನುತ್ತಿದ್ದೆ. ಹಾಗೆಂದಾಗ ಅವರಿಗೆ ಹಿಂದಿನ ಉತ್ಸಾಹ ಉಡುಗಿಹೋಗುತ್ತಿತ್ತು.

ಪೋರ್ಟರ್‌ನ ಮಗ ಮಾತ್ರ ದಿನವೆಲ್ಲಾ ಅಂಗಡಿಯಲ್ಲಿ ಕೂಡುತ್ತಿದ್ದ.

ರಾತ್ರಿ ಒಂದು ಹತ್ತುನಿಮಿಷ ಮಾತ್ರ ಬಂದು ಸಾಮಾನು ಸರಿಯಾಗಿವೆಯೋ ಇಲ್ಲವೋ ನೋಡಿ ದುಡ್ಡು ಎಣಿಸಿಕೊಂಡು ಹೋಗುತ್ತಿದ್ದೆ. ಅವನಿಗೆ ನಾನು ಸಂಬಳ ಕೊಡಬೇಕೆ ? ಎನ್ನುವುದು ನಿರ್ಧಾರವಾಗಿರಲಿಲ್ಲ. ಆಗಾಗ ಒಂದಾಣೆ ಎರಡಾಣೆ ಕೊಡುತ್ತಿದ್ದೆ. ಆದರೆ ಅಮ್ಮನಿಗೆ ಮಾತ್ರ ಈ ಪದ್ಧತಿ ಹಿಡಿಸಲಿಲ್ಲ. "ಸುಮ್ಮನೇ ಊರೆಲ್ಲಾ ತಿರುಗೋ ಬದಲು ನೀನು ಅಂಗಡಿ ನೋಡಿಕೋ-ಬಾರದೆ. ನೀನೇ ಅಂಗಡಿ ಕೆಲಸ ಮಾಡಬೇಕು, ಇಲ್ಲದೆ ಹೋದರೆ ಆ ಹುಡು-ಗನಿಗೆ ಏನಾದರೂ ಗೊತ್ತುಮಾಡಬೇಕು" ಎನ್ನುತ್ತಿದ್ದಳು. ಆಗ ನಾನು—

"ಅಮ್ಮ, ನಾನೇನೂ ಸುಮ್ಮನೆ ಊರು ಸುತ್ತೋದಿಲ್ಲ. ಅಂಗಡಿ ಕೆಲಸಕ್ಕಿಂತ ಈ ಕೆಲಸ ಎಷ್ಟೋ ವಾಸಿ. ಒಳ್ಳೊಳ್ಳೆ ಸ್ಥಳಗಳನ್ನು ನೋಡಿದ ಹಾಗೂ ಆಗುತ್ತೆ. ನನ್ನ ಹೆಸರನ್ನು ಕೇಳದವರೇ ಇಲ್ಲ. ಬೊಂಬಾಯಿ ಮದ-ರಾಸಿನಿಂದ ನನ್ನ ಕೇಳಿಕೊಂಡು ಬರುತ್ತಾರೆ. ರೈಲ್ವೆರಾಜು ಅಂತಲೇ ನನ್ನ ಹೆಸರು. ಯಾರೊ ಒಬ್ಬರು ಹೇಳಿದರು........ಲಕ್ನೋಲಿ ಕೂಡ ನನ್ನ ಹೆಸರು ಕೇಳಿದವರು ಇದಾರಂತೆ. ಅಂಗಡೀಲಿ ಕೂತುಕೊಂಡು ಹೊಗೆಸೊಪ್ಪು ಬೆಂಕಿಕಡ್ಡಿ ಮಾರೋದಕ್ಕಿಂತ ಇಂತಹ ಹೆಸರು ಸಂಪಾದಿಸೋದು ಹುಡು-ಗಾಟವೆ !"

"ಆದರೆ ನಿಮ್ಮಪ್ಪ ಅಂಗಡೀಲೇ ಕೂತಿರುತ್ತಾ ಇರಲಿಲ್ಲವೊ ?"

"ಕೂತಿರುತ್ತಾ ಇದ್ದರು. ಇಲ್ಲ ಅಂತ ಹೇಳಲಿಲ್ಲ. ಅದು ತಪ್ಪು ಅಂತಲೂ ಹೇಳುತ್ತ ಇಲ್ಲ. ಅದೂ ಅಲ್ಲದೆ ನಾನೇನು ಅಂಗಡಿ ಮುಚ್ಚಿ-ಬಿಡುತ್ತೀನಿ ಅಂತ ಹೇಳಲಿಲ್ಲವಲ್ಲ........"

ಇದರಿಂದ ಮುದುಕಿಗೆ ಸಂತೋಷವಾಯಿತು. ಆಗಾಗ ನಮ್ಮ ಸೋದರ-ಮಾವನ ಮಗಳ ಪ್ರಸ್ತಾಪವೂ ಬರುತ್ತಿತ್ತು. ಎಂದಾದರೂ ಒಂದು ದಿನ ಆ ಹಳ್ಳಿಯ ಹುಡುಗಿಯನ್ನು ಮದುವೆಯಾಗಲು ಒಪ್ಪುವೆನೆಂದೇ ಅಮ್ಮ ನಂಬಿದ್ದಳು.

"ನೋಡು, ಲಲಿತೆಗೆ ಸ್ಕೂಲಿನಲ್ಲಿ ಪ್ರೈಸ್ ಬಂದಿದೆಯಂತೆ. ಅಣ್ಣ-ನಿಂದ ಕಾಗದ ಬಂತು" ಎಂದು ಹೇಳುತ್ತಿದ್ದಳು.

"ರೈಲು ನಿಲ್ದಾಣಕ್ಕೆ ಬರುವುದಕ್ಕೆ ಮೊದಲೇ ನನ್ನ ಗಿರಾಕಿಯನ್ನು ನಾನು ಕಂಡುಕೊಳ್ಳುವಷ್ಟು ತಜ್ಞನಾಗಿದ್ದೆ. ಒಳ್ಳೆ ಗಿರಾಕಿಯೇ ಇರಬೇ-

ಕೆಂದು ಅನ್ನಿಸಿದ ಕೂಡಲೇ ಹೊಗೆಯಾಡುತ್ತಿದ್ದ ರೈಲುಬಂಡಿಯ ಕಡೆ ಮುನ್ನುಗ್ಗುತ್ತಿದ್ದೆ. ಪ್ರವಾಸಿ ಸುಮಾರು ಯಾವ ಕಂಪಾರ್ಟ್‌ಮೆಂಟಿನಿಂದ ಇಳಿಯಬಹುದೊ ಅಲ್ಲೇ ನಿಲ್ಲುತ್ತಿದ್ದೆ. ಭುಜದಿಂದ ಇಳಿಬಿಟ್ಟ ಕ್ಯಾಮರಾ, ಬೈನಾಕ್ಯುಲರ್ಸ್‌ಗಳನ್ನು ನೋಡಿಯೆ 'ಓಹೋ, ಇವನು ಪ್ರವಾಸಿ' ಎಂದು ಕಂಡುಹಿಡಿಯಬೇಕಾಗಿರಲಿಲ್ಲ. ಈ ಯಾವ ವೇಷಭೂಷಣವೂ ಇಲ್ಲದೇನೇ ಯಾವ ಪ್ರವಾಸಿ ಎಲ್ಲಿದ್ದರೂ ಅವನಿಗೆ ಗಂಟುಬೀಳುತ್ತಿದ್ದೆ. ಸ್ವಲ್ಪ ದಿನಗಳಿಗೆಲ್ಲಾ ಪ್ರವಾಸಿಗಳ ಮಾರ್ಗದರ್ಶಿಯಾಗಿ ನನ್ನನ್ನು ಬಿಟ್ಟರಿಲ್ಲ ಎನ್ನುವಂತಾಯಿತು. ಮೊದಲು ನಾನು ಅಂಗಡಿಯ ವ್ಯಾಪಾರಿಯಾಗಿ ಆಗಾಗ ಮಾತ್ರ ಪ್ರವಾಸಿಗಳೊಡನೆ ಹೋಗುತ್ತಿದ್ದೆ. ಆದರೆ ಬರುಬರುತ್ತಾ ಮೂರುಹೊತ್ತೂ ಪ್ರವಾಸಿಗಳ ಜೊತೆಗೆ ತಿರುಗುತ್ತಿದ್ದು ಆಗಾಗ ಅಂಗಡಿಯಲ್ಲಿ ಕೂಡುತ್ತಿದ್ದೆ.

ಪ್ರವಾಸಿ ಇಲ್ಲದೆ ಹೋದಾಗಲೂ ನೇರವಾಗಿ ಅಂಗಡಿಗೆ ಹೋಗಿ ಕುಳಿತುಕೊಳ್ಳದೆ ಚಿಲುಮೆಯ ಹತ್ತಿರವಿದ್ದ ಗಫೂರನ ಬಳಿಗೆ ಹೋಗಿ ಹಳೆಯ ಮೋಟಾರುಗಳ ಬಗ್ಗೆ ಹರಟೆಹೊಡೆಯುತ್ತಿದ್ದೆ.

ನನ್ನ ಹತ್ತಿರ ಬರುತ್ತಿದ್ದ ಪ್ರವಾಸಿಗಳನ್ನೆಲ್ಲಾ ವಿಂಗಡಿಸಿ ಬೇರೆ ಬೇರೆ ಗುಂಪುಗಳಾಗಿರಿಸಿದ್ದೆ. ಸಾಮಾನ್ಯವಾಗಿ ಒಬ್ಬರ ಹಾಗೆ ಇನ್ನೊಬ್ಬರಿರುತ್ತಿರಲಿಲ್ಲ. ಆದರೂ ಅವರಲ್ಲಿ ಒಂದು ಗುಂಪಿಗೆ ಛಾಯಾಚಿತ್ರದ ಹುಚ್ಚು. ಕ್ಯಾಮರಾದ ಹಿಂದೆ ಕಣ್ಣಿದ್ದರೆ ಮಾತ್ರ ಇವರಿಗೆ ಸೌಂದರ್ಯದ ಅರಿವಾಗುತ್ತಿತ್ತು. ಇನ್ನೂ ರೈಲು ಇಳಿಯೋದಕ್ಕಿಲ್ಲ ಆಗಲೇ "ಇಲ್ಲಿ ಫಿಲ್ಮ್ಸ್ ಡೆವ್ಲಪ್ ಮಾಡಿಕೊಡುತ್ತಾರೆಯೆ?" ಎನ್ನುತ್ತಿದ್ದರು.

"ಓಹೋ, ಇಲ್ಲದೇ ಏನು? ಮಾಲ್ಗುಡಿ ಫೋಟೋ ಬ್ಯೂರೋ ಇದೆಯಲ್ಲಾ........"

"ಒಂದು ವೇಳೆ 'ಫಿಲ್ಮ್ ರೋಲ್ಸ್' ಬೇಕಾದರೆ........ನಾನೇನೋ ಬೇಕಾದಷ್ಟು ತಂದಿದ್ದೇನೆ. ಆದರೂ ಮುಗಿದುಹೋದರೆ........ಅದಕ್ಕಂತ ಕೇಳಿದೆ ಅಷ್ಟೆ........ಸೂಪರ್ ಪ್ಯಾನ್‌ಕ್ರೋ ನೋ ಅಥವಾ ಇನ್ನು ಯಾವುದಾದರೂ ಬೇರೆ ಸಿಗುತ್ತೊ?"

"ಸಿಗದೆ........ಆ ಅಂಗಡಿ ಅದಕ್ಕೆ ಪ್ರಸಿದ್ಧಿ ಸಾರ್."

"ಪ್ರಿಂಟ್ ಈಗಲೇ ಡೆವ್ಲಪ್ ಮಾಡಿಕೊಡುತ್ತಾರೆಯೇ?"

"ಓಹೋ! ಇಪ್ಪತ್ತು ಎಣಿಸುವುದರೊಳಗೇ ಸಿದ್ಧ........ಅವನು ಏನು ಅಂತ ತಿಳಿದುಕೊಂಡಿರಿ ಸಾಮಿ, ಈ ಕಲೇಲಿ ಪ್ರಚಂಡ......."

"ಭೇಷ್, ಭೇಷ್ ಪರವಾಗಿಲ್ಲ. ಹಾಗಾದರೆ........ಈಗ ಮೊದಲು ಎಲ್ಲಿಗೆ ಹೋಗೋಣ?" ಇಂತಹ ಪ್ರಶ್ನೆಗಳಂತೂ ಸಾಮಾನ್ಯ. ಇವಕ್ಕೆಲ್ಲಾ ತೃಪ್ತಿಕರ ಉತ್ತರಗಳನ್ನು ಸಿದ್ಧವಾಗಿಯೇ ಇಟ್ಟಿರುತ್ತಿದ್ದೆ. 'ಎಲ್ಲಿಗೆ ಕರೆದು-ಕೊಂಡು ಹೋಗುತ್ತೀ?' ಎನ್ನುವ ಪ್ರಶ್ನೆಯನ್ನು ಮಾತ್ರ ಸ್ವಲ್ಪ ಯೋಚಿಸಿ ಹೇಳುತ್ತಿದ್ದೆ. ಎಲ್ಲಿಗೆ ಬೇಕಾದರೂ ಹೋಗಬಹುದಾಗಿತ್ತು. ಆದರೆ ಅದಕ್ಕೆ ಪ್ರವಾಸಿಯ ಕಾಲದ ಪರಿಮಿತಿ, ಹಣದ ಪರಿಮಿತಿ ಎರಡನ್ನೂ ತಿಳಿದುಕೊಳ್ಳ-ಬೇಕಾಗುತ್ತಿತ್ತು. ಬರೀ ಊರನ್ನು ತೋರಿಸಿ ಆಯಿತೆನ್ನಬಹುದಾಗಿತ್ತು. ಇಲ್ಲವೆ ಊರಿನ ಸುತ್ತುಮುತ್ತು ತೋರಬಹುದಾಗಿತ್ತು. ಪ್ರವಾಸಿಗಳ ಬಳಿ ಇದ್ದ ದುಡ್ಡಿನ ಗಂಟಿನ ತೂಕವರಿಯದೇ ಏನೂ ಮಾಡುವ ಹಾಗಿರಲಿಲ್ಲ. ಮಾಡುತ್ತಲೂ ಇರಲಿಲ್ಲ. ಒಂದೊಂದು ಸಲ ಸಂದಿಗ್ಧಕ್ಕೆ ಸಿಕ್ಕಿಹಾಕಿ-ಕೊಳ್ಳುತ್ತ ಇದ್ದುದೂ ಉಂಟು. ಒಬ್ಬೊಬ್ಬರು ನಮ್ಮ ಗಫೂರನಿಗೊ, ಆ ಪೋಟ ಅಂಗಡಿಯವನಿಗೊ, ಇಲ್ಲವೆ ಮೆಂಪಿ ಬೆಟ್ಟದ ಮೇಲಿದ್ದ ಬಂಗಲೆಯ ಯಜಮಾನನಿಗೋ ಚೆಕ್ ಬರೆದುಕೊಡುತ್ತೇವೆನ್ನುತ್ತಿದ್ದರು. ಆದರೆ ಯಾರೊ? ಎಲ್ಲಿಯವನೊ? ಅವನನ್ನು ನಂಬಿ ಅವನು ಬರೆದುಕೊಟ್ಟ ಚೆಕ್ ಹೇಗೆ ತೆಗೆದುಕೊಳ್ಳುವುದು?........ಇಂತಹ ಪರಿಸ್ಥಿತಿ ಬಂದಾಗ ನಾನು, "ನೋಡಿ ಸಾರ್, ನೀವೇನೊ ಚೆಕ್ ಬರೆದುಕೊಡುತ್ತೀರಿ. ಆದರೆ ನಮ್ಮೂ-ರಿನ ಬ್ಯಾಂಕುಗಳು ನೋಡಿ, ಇಪ್ಪತ್ತು ದಿನವಾದರೂ ಹಣ ಕೈಗೆ ಬರೋಲ್ಲ. ಪಾಪ, ಈ ಬಡಪಾಯಿಗಳ ಕಥೆಯೇನಾಗಬೇಕು ಹೇಳಿ? ಅದಕ್ಕೋಸ್ಕರ ಅಷ್ಟೆ, ಇನ್ನೇನೂ ಇಲ್ಲ" ಎಂದು ಹೇಳಿ ತಪ್ಪಿಸಿಕೊಳ್ಳುತ್ತಿದ್ದೆ. ಆದರೆ ಇದ-ರಿಂದ ನಾನು ನಮ್ಮೂರಿನ ಬ್ಯಾಂಕುಗಳಿಗೆ ಬಗೆಯುತ್ತಿದ್ದ ಅನ್ಯಾಯವನ್ನು ಅಷ್ಟು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ.

ಒಬ್ಬ ಪ್ರವಾಸಿ ಬಂದಿಳಿದ ತಕ್ಷಣ ಆತ ತನ್ನ ಹಾಸಿಗೆ–ಪೆಟ್ಟಿಗೆಯನ್ನು ಸಾಗಿಸುವ ರೀತಿಯಲ್ಲೇ ಅವನ ಬೇಳೆ-ಕಾಳೆಲ್ಲ ತಿಳಿದುಹೋಗುತ್ತಿತ್ತು. ಹಾಸಿಗೆ–ಪೆಟ್ಟಿಗೆಗಳನ್ನು ಹೊರುವವರನ್ನು ಕರೆಯುವವರೂ ಇದ್ದರು. ಬೆರಳಿ-ಗೊಂದು ಬ್ಯಾಗು ತಗುಲು ಹಾಕಿಕೊಂಡು ತಾವೇ ಸಾಮಾನು ಹೊರು-

ವವರೂ ಇದ್ದರು.

ಇದನ್ನೆಲ್ಲಾ ಕಣ್ಣುಮುಚ್ಚಿಬಿಡುವಷ್ಟರಲ್ಲಿ ಗಮನಿಸಿ ಆತ ಹೊರಗಡೆ ಟ್ಯಾಕ್ಸಿ ಹತ್ತುವವನೋ, ಜಟಕಾಗಾಡಿಗೆ ಚೌಕಸಿ ಮಾಡುವವನೋ ಎನ್ನುವುದನ್ನು ನೋಡಬೇಕಾಗಿತ್ತು ಅವನ ಪರವಾಗಿಯೇನೊ ನಾನು ಇದನ್ನೆಲ್ಲ ಮಾಡುತ್ತಿದ್ದೆ. ಆದರೆ ಈ ವ್ಯವಹಾರದಲ್ಲೆಲ್ಲಾ ತನಗೆ ಯಾವ ಪಾಲೂ ಇರುತ್ತಿರಲಿಲ್ಲ. ರೈಲಿನಿಂದಿಳಿದವನೇ ರೈಲ್ವೆರಾಜುವಿಗಾಗಿ ಹುಡುಕಿದನೆಂಬುದಕ್ಕಾಗಿ ಮಾತ್ರ ನಾನಿದೆಲ್ಲ ಮಾಡುತ್ತಿದ್ದೆ ಅಷ್ಟೆ. ಸರಿ, ಇನ್ನು ಹೋಟಲಿಗೆ ಹೋದರೆ ಅವನಿಗೆ ಒಳ್ಳೆಯ ರೂಮು ಕೊಡಿಸುವುದೂ ನನ್ನ ಇಷ್ಟ. ಆದರೆ ಕೆಲವರು ಹೆಚ್ಚು ಬೆಲೆಯ ರೂಮುಗಳಲ್ಲಿರಲು ಪ್ರಯತ್ನಿಸುತ್ತಿರಲಿಲ್ಲ.

"ದಿನವೆಲ್ಲಾ ಹೊರಗೆ ತಿರುಗುತ್ತಾ ಇರುತ್ತೇವೆ. ಏನೋ ರಾತ್ರಿ ಸ್ವಲ್ಪ ಹೊತ್ತು ಮಲಗಿರೋದಕ್ಕಾಗಿ ಅಷ್ಟೊಂದು ದುಡ್ಡು ಕೊಡೋದು ದಂಡ, ಅಲ್ಲವೆ?" ಎನ್ನುತ್ತಿದ್ದರು. 'ಹೌದು, ಹೌದು' ಎಂದು ನಾನೂ ತಲೆಯಲ್ಲಾಡಿಸುತ್ತಿದ್ದೆ. ಇಷ್ಟು ಹೊತ್ತಾದರೂ ಆತನನ್ನು ಮೊದಲು ಎಲ್ಲಿಗೆ ಕರೆದುಕೊಂಡು ಹೋಗುತ್ತೇನೆಂದು ಹೇಳುತ್ತಿರಲಿಲ್ಲ. ಆಗ ತಾನೆ ನೂರಾರು ಮೈಲಿಗಳ ಪ್ರಯಾಣ ಮಾಡಿ ರೈಲಿನಿಂದಿಳಿದವರೊಡನೆ ಚರ್ಚೆ ಸರಿಯಲ್ಲ. ಮುಖ ತೊಳೆದು, ಬಟ್ಟೆ ಬದಲಾಯಿಸಿ ಇಡ್ಲಿ–ಕಾಫಿಯ ಸೇವನೆಯಾದ ಮೇಲೇ ಮುಂದಿನ ಯೋಚನೆ. ನನಗೂ ಒಂದಿಷ್ಟು ಕಾಫಿ–ಗೀಫಿ ಕೊಡಿಸಿದರೆ ಪರವಾಗಿಲ್ಲ ಮನುಷ್ಯ ಎಂದುಕೊಳ್ಳುತ್ತಿದ್ದೆ. ಆದರೆ ನಮ್ಮ ಸ್ನೇಹ ಒಂದಿಷ್ಟು ಕುದುರಿಕೊಳ್ಳೋವರೆಗೆ ನಾನು ಮಾತ್ರ ಅವರಿಂದ ಅವನ್ನೆಲ್ಲಾ ತೆಗೆದುಕೊಳ್ಳುತ್ತಿರಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ನಾನು ನೇರವಾಗಿ ಕೇಳಿಬಿಡುತ್ತಿದ್ದೆ :

"ಈ ಊರಿನಲ್ಲಿ ಎಷ್ಟು ದಿನ ಇರಬೇಕೂಂತ ಇದೀರಾ?"

"ಬಹಳ ಬಹಳ ಅಂದರೆ ಮೂರು ದಿನ ಅಷ್ಟೆ. ಅಷ್ಟರಲ್ಲಿ ಎಲ್ಲಾ ನೋಡೋಕೆ ಸಾಧ್ಯವೇ?"

"ಓಹೋ ಸಾಧ್ಯವಾಗದೆ ಏನು? ಆದರೆ ಯಾವುದನ್ನು ನೋಡಬೇಕು, ಯಾವುದನ್ನು ಬಿಡಬೇಕು ಅನ್ನೋದನ್ನ ನೀವು ಮೊದಲು ನಿರ್ಧರಿಸಬೇಕು........" ಹೀಗೆ ಹೇಳಿ ಆತನ ಅಭಿರುಚಿಯನ್ನು ಕಂಡುಕೊಳ್ಳು-

ತ್ತಿದ್ದೆ. ಮಾಲ್ಗುಡಿಯಲ್ಲಂತೂ ನೋಡಬೇಕಾದದ್ದು ನೂರಾರು ಚರಿತ್ರಾರ್ಹ ಅವಶೇಷಗಳು, ರಮಣೀಯ ಪ್ರದೇಶಗಳು ಇತ್ಯಾದಿ. ಯಾತ್ರಾರ್ಥಿಗಳಾದರೆ ಮಾಲ್ಗುಡಿಯಲ್ಲಿದ್ದ ಹತ್ತು ದೇವಸ್ಥಾನಗಳಲ್ಲೂ ಸುತ್ತಿಸಿಬಿಡುತ್ತಿದ್ದೆ. ಸರಯೂ ನದಿಯಂತೂ ಪುಣ್ಯತೀರ್ಥವಾಗಿಬಿಡುತ್ತಿತ್ತು.

ಅಂತೂ ಒಬ್ಬರ ಹಾಗೆ ಇನ್ನೊಬ್ಬರಿರುತ್ತಿರಲಿಲ್ಲ. ಆಹಾರದಲ್ಲಿ ಹೇಗೋ ಹಾಗೆ ಪ್ರವಾಸದಲ್ಲೂ ಒಬ್ಬೊಬ್ಬರ ಅಭಿರುಚಿ ಒಂದೊಂದು ವಿಧ. ಒಬ್ಬರು ಜಲಪಾತವನ್ನು ನೋಡಬಯಸಿದರೆ ಇನ್ನೊಬ್ಬರು ಪಾಳು ಗುಡಿಯಲ್ಲಿ ಮುರಿದ ವಿಗ್ರಹಗಳನ್ನು ನೋಡುತ್ತಾ ಗಂಟೆಗಟ್ಟಲೆ ನಿಂತುಬಿಡುತ್ತಿದ್ದರು. ಒಬ್ಬರಿಗೆ ದೇವಸ್ಥಾನ, ಇನ್ನೊಬ್ಬರಿಗೆ ಕಾರ್ಖಾನೆ. ಒಬ್ಬರಿಗೆ ರಮಣೀಯವಾದ ಪ್ರದೇಶವಾದರೆ ಸರಿ. ಅಂತಹವರನ್ನು ಮೆಂಪಿಬೆಟ್ಟದ ಮೇಲಿದ್ದ ಗಾಜಿನ ಮನೆಗೆ ಕರೆದುಕೊಂಡು ಹೋದರೆ ಸಾಕು. ಆದರೆ ಅಲ್ಲಿಗೆ ಹೋಗುವವರಲ್ಲೂ ಎರಡು ಬಗೆ. ಅಲ್ಲಿನ ಸೌಂದರ್ಯವನ್ನು ನೋಡಿ ಆನಂದಿಸುವ ಕಾವ್ಯ-ಯೋಗಿಗಳು ಹಲವರು. ಆದರೆ ಅಲ್ಲಿನ ಹಣ್ಣು-ಹೂವುಗಳ ಸೌಂದರ್ಯ-ವನ್ನು ನೋಡಿ ಆನಂದಿಸುವುದರ ಜೊತೆಗೆ ಹೆಣ್ಣಿನ ಸೌಂದರ್ಯವನ್ನೂ ಅನುಭೋಗಿಸಲು ಬರುತ್ತಿದ್ದವರು ಹಲವರು. ಅಲ್ಲಿ ಪ್ರಕೃತಿ ಕಾವ್ಯೋದ್ದೀಪನ ಮಾಡುವುದರ ಜೊತೆಗೆ ಕಾಮೋದ್ದೀಪನ ಮಾಡುವ ಹಾಗಾಗಿತ್ತು. ಆದರೆ ಅದನ್ನೆಲ್ಲಾ ಯೋಚಿಸುವುದು ನನ್ನ ಕೆಲಸವಾಗಿರಲಿಲ್ಲ. ಪ್ರವಾಸಿಗಳನ್ನು ಗುಡ್ಡದ ಮೇಲಿದ್ದ ಬಂಗಲೆಗೆ ಕರೆದುಕೊಂಡು ಹೋಗಿಬಿಡುವುದು, ಅಲ್ಲಿಂದ ಅವರ ಉಪಯೋಗಕ್ಕಾಗಿ ಗಫೂರನನ್ನು ಅವನ ಟಾಕ್ಸಿಯ ಸಮೇತ ಅಲ್ಲಿಗೆ ಕಳಿಸುವುದು, ಇವಿಷ್ಟೂ ನನ್ನ ಪಾಲಿನ ಕೆಲಸ.

ಆದರೆ ಇನ್ನು ಕೆಲವು ಪ್ರವಾಸಿಗಳು ಬರುವುದಕ್ಕೆ ಮೊದಲೇ ನಮ್ಮೂ-ರಿನ ವಿಷಯವನ್ನೆಲ್ಲಾ ತಿಳಿದುಕೊಂಡೇ ಬಂದುಬಿಡುತ್ತಿದ್ದರು. ಅಂತಹವರನ್ನು ಕಂಡರೆ ನನಗೆ ತುಂಬಾ ಹೆದರಿಕೆ.

"ಈ ಊರಿನ ಜನಸಂಖ್ಯೆ ಎಷ್ಟು?"

"ವಿಸ್ತರಣ ಎಷ್ಟು?"

"ಬುರುಡೆ ಬಿಡಬೇಡಯ್ಯ, ಗೊತ್ತಿದೆ ಎಲ್ಲಾ. ಎರಡನೇ ಶತಮಾನ-ವಲ್ಲ, ಹನ್ನೆರಡನೆ ಶತಮಾನ."

" ಕೇಳಿಕೊಳ್ಳೋದಿಲ್ಲ, ಮಾಡೋದಿಲ್ಲ. ಏನು ಕೆಲಸಾಂತ ಮಾಡು-ತ್ತೀರಿ ? ಗೈಡ್ ಅಂತೆ ಗೈಡ್"........ಇಂತಹ ನೂರಾರು ಅವಹೇಳನಗಳನ್ನು ಸಹಿಸಿಕೊಂಡು ಆದಷ್ಟುಮಟ್ಟಿಗೆ ಅವರಿಂದ ದೂರವಿರುತ್ತಿದ್ದೆ.

ಇಷ್ಟೆಲ್ಲಾ ಮಾಡಿದ್ದರಿಂದ ಬಂದ ಲಾಭವೇನು ಅಂತ ನೀವು ಕೇಳ-ಬಹುದು. ಅದಕ್ಕೆ ನಿಶ್ಚಿತವಾದ ಉತ್ತರವನ್ನು ಹೇಳಲಾರೆ. ಸಾಮಾನ್ಯ-ವಾಗಿ ನನ್ನ ಫೀಜು ಹತ್ತು ರೂಪಾಯಿ. ಆದರೆ ಅಲ್ಲಿ ಇಲ್ಲಿ ವಿಪರೀತವಾಗಿ ಸುತ್ತಾಡಬೇಕಾದರೆ ಇನ್ನೂ ಸ್ವಲ್ಪ ಹೆಚ್ಚು ಕೇಳುತ್ತಿದ್ದೆ. ಸಾಲದ್ದಕ್ಕೆ ಗಿರಾಕಿ-ಗಳನ್ನು ಹುಡುಕಿಕೊಡುತ್ತಿದ್ದುದಕ್ಕಾಗಿ ಗಫೂರ್, ಫೋಟೋ ಬ್ಯೂರೋವಿನ ಮಾಲಿಕರು, ಹೋಟಲಿನ ಮ್ಯಾನೇಜರು ಎಲ್ಲರೂ ನನ್ನ ಅಭಿನಂದಿಸಿದ್ದೂ ಅಭಿನಂದಿಸಿದ್ದೆ. ಅಂತೂ ಕಲಿಕೆ ಗಳಿಕೆ ಎರಡೂ ಒಟ್ಟಿಗೆ ಆಗುತ್ತಿದ್ದ ನನ್ನ ಕೆಲಸ ನನಗೆ ತುಂಬ ಪ್ರಿಯವಾಗಿತ್ತು.

ವಿಶೇಷ ಸಂದರ್ಭಗಳಲ್ಲಂತೂ ಪ್ರವಾಸಿಗಳ ಹಿಂಡು ಹಿಂಡೇ ಬಂದು-ಬಿಡುತ್ತಿತ್ತು. ಚಳಿಗಾಲದಲ್ಲಿ ಮೆಂಪಿನ ಆನೆ ಕಾಡಿನಲ್ಲಿ ಆನೆಗಳನ್ನು ಹಿಡಿಯು-ವಾಗ ಅನೇಕರು ನೋಡಲು ಬರುತ್ತಿದ್ದರು. ಆಗಂತೂ ಅವರಿಗೂ ಹಬ್ಬ. ಆ ಅವಕಾಶವನ್ನು ಒದಗಿಸಿದ ನನಗೂ ಹಬ್ಬ. ನನಗೇನೂ ಆನೆಗಳಲ್ಲಿ ಅಂತಹ ಆಸಕ್ತಿ ಇರಲಿಲ್ಲ. ಆದರೆ ನನ್ನ ಪ್ರವಾಸಿಗಳಿಗೆ ಏನಿಷ್ಟವೋ ನನಗೂ ಅದೇ ಇಷ್ಟ, ನನಗೆ ಬೇಕೋ ಬೇಡವೋ ಅದು ಬೇರೆ ವಿಷಯ. ಯಾರಾದರೂ ಹುಲಿಯನ್ನು ನೋಡಲೋ ಅಥವಾ ಹುಲಿಯ ಬೇಟೆಗೋ ಬಂದರೆ ಅದಕ್ಕೆ ಸರಿಯಾದ ಏರ್ಪಾಡು ಮಾಡಲು ನನಗೆ ಶಕ್ತಿ ಇತ್ತು. ಯುಕ್ತಿಯೂ ಇತ್ತು. ಕಾಡಿನಲ್ಲಿ ಮಚಾನ ಕಟ್ಟಿಸಿ ಅದರ ಕೆಳಗೊಂದು ಕುರಿ ಕಟ್ಟಿಹಾಕಿಸಿ ನನ್ನ ಪ್ರವಾಸಿಯನ್ನು ಕರೆದುಕೊಂಡು ಹೋಗಿ ಮೇಲೆ ಕೂಡಿಸುತ್ತಿದ್ದೆ. ಕುರಿ-ಯನ್ನು ತಿನ್ನಲು ಹುಲಿ ಬಂದಾಗ ಮರದ ಮೇಲಿಂದ ಗುಂಡು ಹೊಡೆದು ಹುಲಿಯನ್ನು ಸಾಯಿಸಿ ಬೆನ್ನು ತಟ್ಟಿಕೊಳ್ಳುತ್ತಿದ್ದರು. ಹುಲಿ ಸಾಯುವು-ದನ್ನು ನೋಡುವುದಕ್ಕೆ ಆಗಲಿ ಅಥವಾ ಕುರಿ ಸಾಯುವುದನ್ನು ನೋಡುವು-ದಕ್ಕೆ ಆಗಲಿ ನನಗೆ ಆಗುತ್ತಿರಲಿಲ್ಲ. ಯಾರಾದರೂ ನಾಗರಹಾವಿನ ನೃತ್ಯ ನೋಡಲು ಬಯಸಿದರೆ ಅದನ್ನು ತೋರಿಸವುದಕ್ಕೂ ನನಗೆ ಸಾಧ್ಯವಿತ್ತು.

ಒಬ್ಬ ಹುಡಗಿ ಮದರಾಸಿನಿಂದ ಮಾಲ್ಗುಡಿಯ ವರೆಗೂ ಬಂದಿದ್ದಳು.

ಬಂದವಳೇ ಇನ್ನೇನೂ ಕೇಳದೆ "ಕೊಳಲಿನ ನಾದಕ್ಕೆ ನರ್ತಿಸುವ ನಾಗರ-ಹಾವನ್ನು ತೋರಿಸುತ್ತೀರಾ?" ಎಂದಳು.

"ಯಾಕೆ?" ಎಂದೆ ನಾನು.

"ಯಾಕೂ ಇಲ್ಲ. ಸುಮ್ಮನೆ ನೋಡೋಕೆ."

ಆದರೆ ಅವಳ ಪತಿ ಅಷ್ಟರಲ್ಲೇ,

"ರೋಜಿ, ಮಾಡಬೇಕಾದ್ದು ನೂರೆಂಟು ಕೆಲಸವಿದೆ. ನಾಗರಹಾವನ್ನು ನಿಧಾನವಾಗಿ ನೋಡಬಹುದು" ಎಂದ.

"ನಾನೇನು ಈ ಕ್ಷಣ ನಾಗರಹಾವನ್ನು ತೋರಿಸಿ ಎಂದು ಹೇಳುತ್ತಾ ಇಲ್ಲ. ಇಲ್ಲಿ ಅಂತಹ ಹಾವು ಇದೆಯೇ, ಇದ್ದರೆ ಯಾವಾಗಾದರೂ ತೋರಿಸಿ ಅಂತ ಕೇಳಿದೆ ಅಷ್ಟೆ."

"ಬೇಕಾದರೆ ನೀನು ಹೋಗಿಬರಬೇಕು ಅಷ್ಟೆ. ಅಲ್ಲಿಗೆಲ್ಲಾ ಬರೋಕೆ ನನಗೆ ಪುರಸೊತ್ತಿಲ್ಲ. ಹಾವು-ಗೀವು ನೋಡೋಕೆ ನನ್ನಿಂದ ಸಾಧ್ಯವಿಲ್ಲ."

ನನಗೆ ಆ ಮನುಷ್ಯನನ್ನು ಕಂಡು ಕೋಪ ಬಂತು. ಸ್ವಲ್ಪವೂ ಇಷ್ಟ-ವಾಗಲಿಲ್ಲ. ಅವಳಂತಹ ಅಪ್ಸರೆಯನ್ನು ಹೇಗೆ ಮಾತನಾಡಿಸಬೇಕೆನ್ನುವ ಪರಿಜ್ಞಾನವೇ ಇಲ್ಲ. ನನ್ನ ಸಹಾನುಭೂತಿಯೆಲ್ಲ ಆ ಹುಡುಗಿಯ ಕಡೆಗೇ. ಮುಟ್ಟಿದರೆ ನಲುಗುವ ಮಲ್ಲಿಗೆಯ ಹಾಗಿದ್ದಳು ಆ ಹುಡುಗಿ. ಅವಳು ಬಂದ-ಮೇಲೆ ನನ್ನ ಖಾಕೀ ಬುಷ್‌ಕೋಟು ಪಂಚೆ ತಗೆದುಬಿಟ್ಟು ಅಂದ-ಚೆಂದದ ಬಟ್ಟೆ ಹಾಕತೊಡಗಿದೆ. ಜರಿ ಪಂಚೆಯುಟ್ಟು ರೇಶ್ಮೆ ಜುಬ್ಬ ತೊಡುತ್ತಿದ್ದೆ. ನನ್ನ ಅಲಂಕಾರವನ್ನು ನೋಡಿ ಅಮ್ಮ 'ಒಹೋ ಮದುವಣಿಗ' ಎನ್ನು-ತ್ತಿದ್ದಳು. ಅವರನ್ನು ಕಾಣಲು ಹೋಟಲಿಗೆ ಹೋದಾಗ ಗಫೂರ್ ಕಣ್ಣು ಮಿಟುಕಿಸದೇ ಇರುತ್ತಿರಲಿಲ್ಲ.

ಹುಡುಗಿ ಬಂದದ್ದು ನನಗಂತೂ ಆಶ್ಚರ್ಯವಾಗಿತ್ತು. ಮೊದಲು ಬಂದಿದ್ದು ಅವನು ಮಾತ್ರ. ಆನಂದಭವನದಲ್ಲಿ ಅವನನ್ನು ಇಳಿಸಿದ್ದೆ. ಒಂದು ದಿನ ಪೂರ್ತಿ ಊರು ನೋಡಿ, ಇದ್ದಕ್ಕಿದ್ದ ಹಾಗೆಯೇ ಮಾರನೆಯ ದಿನ ಮಧ್ಯಾಹ್ನ "ಮದರಾಸ್ ರೈಲಿಗೆ ಹೋಗಬೇಕು. ಇನ್ನೊಬ್ಬರು ಬರುತ್ತಾರೆ" ಎಂದನು.

ರೈಲು ಎಷ್ಟು ಹೊತ್ತಿಗೆ ಬರುತ್ತೆ ಎಂದು ಕೂಡ ಕೇಳಲಿಲ್ಲ. ಎಲ್ಲವೂ ಮೊದಲೇ ತಿಳಿದುಬಿಟ್ಟಿರುವಹಾಗಿರುತ್ತಿತ್ತು. ಅವನೊಬ್ಬ ವಿಚಿತ್ರ ಪ್ರಾಣಿ.

ತಾನು ಏನು ಮಾಡುತ್ತೇನೆಂದು ವಿವರಿಸುತ್ತಿರಲಿಲ್ಲ. ಅಂತಹ ಅಪ್ಸರೆಯನ್ನು ಎದುರುಗೊಳ್ಳಲು ಹೋಗುತ್ತಿರುವೆನೆಂದು ತಿಳಿಸಿದ್ದರೆ ನಾನು ಲಕ್ಷಣವಾಗಿ ಬಟ್ಟೆ-ಬರೆ ಹಾಕಿಕೊಂಡು ಹೋಗುತ್ತಿದ್ದೆ. ಆದರೆ ನನಗೆ ತಿಳಿಯದೆ ಎಂದಿ-ನಂತೆ ಖಾಕಿ ಬುಷ್‌ಕೋಟು, ಪಂಚೆ ಧರಿಸಿ ಹೊರಟಿದ್ದೆ ನೋಡಲು ಅಷ್ಟು ಚೆನ್ನಾಗಿರುತ್ತಿರಲಿಲ್ಲವಾದರೂ ನನ್ನ ಕೆಲಸಕ್ಕೆ ತಕ್ಕ ಉಡುಪು. ಅವಳು ರೈಲಿ-ನಿಂದ ಇಳಿದಕೂಡಲೇ ನನಗೆ ಆದ ನಾಚಿಕೆ ಅಷ್ಟಿಷ್ಟಲ್ಲ. ಅಂತಹ ಸುರ-ಸುಂದರಿಯಲ್ಲದಿದ್ದರೂ ನನ್ನ ಮಟ್ಟಿಗೆ ಸುಂದರಿಯೆ. ಲತೆಯಂತಹ ದೇಹ.... ಎಂತಹವರನ್ನು ಮರುಳುಗೊಳಿಸುವಂತಹ ಮಿಂಚುವ ವಿಶಾಲವಾದ ಕಪ್ಪು ಕಣ್ಣುಗಳು. ಅತಿ ಬಿಳುಪಲ್ಲದೆ ಮುಸ್ಸಂಜೆಯ ನಸುಗೆಂಪಿನಲ್ಲಿ ಮಿಲನವಾಗ-ಬಹುದಾದ ಮೈವರ್ಣ.........ಒಟ್ಟಿನಲ್ಲಿ ಕಣ್ಣಿಗೆ ಕಂಡೂ ಕಾಣದಂತಿದ್ದ ಸಂಧ್ಯಾ ದೇವತೆಯಂತೆ ಚಿಮ್ಮಿಬಂದಳು. ಇಂತವರನ್ನು ನೋಡಿದಾಗ ನನ್ನಂ-ತಹ ಕಪಿಯು ಕವಿಯಾಗಬಹುದು ಅಲ್ಲವೆ? ಅಂತೂ ಏನೊ ನೆವ ಹೇಳಿ ಅವರನ್ನು ಹೋಟೆಲಿಗೆ ಕಳುಹಿಸಿಬಿಟ್ಟು ಬಟ್ಟೆ ಬದಲಾಯಿಸಲು ಮನೆಗೆ ಓಡಿದೆ.

ಈಗ ಹಾವಾಡಿಗನೊಬ್ಬನನ್ನು ಹುಡುಕಬೇಕಾಗಿತ್ತು. ಯಥಾಪ್ರಕಾರ ಗಫೂರನಿಗೆ ಶರಣುಹೋದೆ. ಎಲ್ಲಮ್ಮಾಳ್ ರಸ್ತೆಯಲ್ಲಿದ್ದ ಹಾವಾಡಿಗನೊಬ್ಬನ ಬಳಿಗೆ ನನ್ನನ್ನು ಕರೆದುಕೊಂಡು ಹೋದ. ಅಲ್ಲಿಗೆ ಹೋಗುವುದಕ್ಕೆ ಮೊದಲು ಪ್ರವಾಸಿಯನ್ನು ಈಶ್ವರ ದೇವಸ್ಥಾನದಲ್ಲಿದ್ದ ಶಿಲ್ಪಕಲೆಯ ರಹಸ್ಯವನ್ನು ಭೇಧಿಸಲು ಬಿಟ್ಟಿದ್ದೆ. ಪ್ರತಿಯೊಂದು ವಿಗ್ರಹವನ್ನೂ, ಒಂದೊಂದು ಕೆತ್ತನೆ-ಯನ್ನೂ ಪರೀಕ್ಷಿಸುತ್ತ ನಿಂತ ಅವನಿಗೆ ಕಾಲದ ಪರಿವೇ ಇರಲಿಲ್ಲ. ನನಗಂತೂ ಆ ಎಲ್ಲ ವಿಗ್ರಹಗಳ ಪರಿಚಯವೂ ಇತ್ತು. ಪ್ರವಾಸಿಗಳಿಗೆ ಹೇಳಿ-ಹೇಳಿ ಕತ್ತ-ಲಲ್ಲೂ ತಡವರಿಸದೆ ಹೇಳಿಬಿಡುತ್ತಿದ್ದೆ. ಆದರೆ ಅವನಿಗೆ ಅದರ ವಿಷಯವೆಲ್ಲ ಗೊತ್ತಿದ್ದರಿಂದ ನನಗೆ ಆ ಕಷ್ಟವಿರಲಿಲ್ಲ.

ದೇವಸ್ಥಾನಕ್ಕೆ ಹಿಂತಿರುಗಿದಾಗ ಆ ಹುಡುಗಿ ಒಂದು ಪಕ್ಕದಲ್ಲಿ ನಿಂತಿ-ದ್ದಳು. ಬೇಸರವೇ ಮೂರ್ತಿವೆತ್ತಿ ಬಂದಂತಿತ್ತು ಆಕೆಯ ಭಾವ. ಆಕೆಯ ಬಳಿಗೆ ಹೋಗಿ ಮೆಲ್ಲನೆ ಹೇಳಿದೆ, "ಒಂದು ನಿಮಿಷ ಬಂದರೆ ನಾಗರಹಾವು ತೋರಿಸುತ್ತೇನೆ."

ಅವಳಿಗಾದ ಆನಂದ ಅಷ್ಟಿಷ್ಟಲ್ಲ. ತಲೆಯನ್ನು ನೋಡುತ್ತ ಮೈಮರೆತು ನಿಂತಿದ್ದ ಅವನನ್ನು ಆ ಹುಡುಗಿ ಅಲ್ಲಾಡಿಸಿ ಕೇಳಿದಳು :

" ಇನ್ನೂ ಇಲ್ಲಿ ನಿಮ್ಮದು ಎಷ್ಟು ಹೊತ್ತಾಗುತ್ತೆ ? "

ಹಿಂತಿರುಗಿ ನೋಡದೆಯೇ ಅವನು, " ಇನ್ನೂ ಎರಡು ಘಂಟೆ " ಎಂದನು.

" ಹಾಗಾದರೆ ಒಂದು ನಿಮಿಷ ಹೊರಗೆ ಹೋಗಿ ಬರಲೇ ? "

" ಧಾರಾಳವಾಗಿ........ಸಂತೋಷವಾಗಿ ಹೋಗಿಬಾ........" ಆಮೇಲೆ ನನ್ನ ಕಡೆ ತಿರುಗಿ, " ಅಲ್ಲಿಂದ ನೇರವಾಗಿ ಹೋಟೆಲಿಗೆ ಹೋಗಿ, ನನಗೆ ದಾರಿ ತಿಳಿಯುತ್ತೆ, ಬರುತ್ತೇನೆ. "

ಮುನಿಸಿಪಲ್ ಆಫೀಸಿನ ಬಳಿ ನನಗೆ ಗುರುತು ಹೇಳಿದವನನ್ನು ಕರೆದುಕೊಂಡು ಹೊರಟೆವು.

ಗಫೂರ ಟ್ಯಾಕ್ಸಿ, ಮರಳಿನಲ್ಲಿ ಓಡಿ ನಲ್ಲಪ್ಪನ ತೋಟವನ್ನು ದಾಟಿ ನದಿಯ ಆಚೆಯ ದಡವನ್ನು ಹತ್ತಿತ್ತು. ಎತ್ತಿನ ಬಂಡಿಗಳಿಗಾಗಿ ಮೀಸ-ಲಾಗಿದ್ದ ಅಂತಹ ದಾರಿಯಲ್ಲಿ ತನ್ನ ಕಾರು ಓಡಬೇಕಾಗಿ ಬಂದುದಕ್ಕಾಗಿ ಅವನಿಗೆ ಎಲ್ಲಿಲ್ಲದ ಕೋಪ ಬಂದಿತು. ಪಕ್ಕದಲ್ಲಿದ್ದವನ ಕಡೆ ತಿರುಗಿ ಗಫೂರ್ ಸಿಡುಗುಟ್ಟಿದ :

" ಇದೇನು ಎತ್ತಿನಬಂಡಿ ಅಂತ ತಿಳಕೊಂಡುಬಿಟ್ಟೆಯೇನು ? ಇಲ್ಲೇನು ಸ್ಮಶಾನ ಬಿಟ್ಟರೆ ಬೇರೆ ಏನೂ ಕಾಣೋದಿಲ್ಲ........" ಗಫೂರ್ ಕೈತೋರಿಸಿದ ಕಡೆಗೆ ದೂರದಲ್ಲಿ ಸ್ಮಶಾನದ ಗೋಡೆಯೊಳಗೆ ಯಾವುದೊ ಚಿತೆಯಿಂದ ಹೊಗೆ ಮೇಲೇಳುತ್ತಿರುವುದು ಕಂಡಿತು. ನನ್ನ ಪಕ್ಕದಲ್ಲಿ ಕುಳಿತಿದ್ದ ಲತಾಂ-ಗಿಯ ಎದುರು ಇಂತಹ ಅಪಶಕುನ ನುಡಿಯೇ ? ನಾನು ಅವನ ಮಾತು ಮುಚ್ಚಿಹೋಗುವಂತೆ ದನಿಯೇರಿಸಿ ಬೇರೆ ಯಾವುದೋ ಮಾತೆತ್ತಿದೆ.

ಕೊನೆಗೂ ನಾವು ಹೋಗಬೇಕಾದ ಸ್ಥಳ ಬಂದಿತು. ನದಿಯಾಚೆ ಹಲವಾರು ಗುಡಿಸಲುಗಳು. ಅವುಗಳ ಮುಂದೆ ನಮ್ಮ ಕಾರು ನಿಂತಿತು. ನಿಂತಕೂಡಲೇ ಅನೇಕ ಮಕ್ಕಳು ಕಾರಿನ ಸುತ್ತಲೂ ತುಂಬಿಕೊಂಡರು. ಅವರ ಮೈಮೇಲೆ ಒಂದು ತುಂಡು ಬಟ್ಟೆಯೂ ಇರಲಿಲ್ಲ. ನಮ್ಮ ಜೊತೆಗೆ ಬಂದಿದ್ದವನು ಒಂದೇ ನೆಗೆತದಲ್ಲಿ ಹಾರಿ ಗುಡಿಸಲಿಂದ ಒಬ್ಬನನ್ನು ಕರೆದು

ತಂದನು. ತಲೆಗೊಂದು ಕೆಂಪು ರುಮಾಲು, ಸೊಂಟಕ್ಕೊಂದು ಕೆಂಪು ಚಡ್ಡಿ.

"ನಾಗರಹಾವಿದೆಯೇನು ?........ಎಲ್ಲಿ ನೋಡೋಣ ?"

ನನಗಿನ್ನೂ ಅನುಮಾನ. ನನ್ನ ಮಾತು ಕೇಳಿ ಆ ಹುಡುಗರೆಲ್ಲ,

"ಓಹೋ, ಅಜ್ಜನ ಮನೇಲಿ ಭಾರೀ ನಾಗರಹಾವಿದೆ" ಎಂದರು.

ನಾನು ಅವಳ ಕಡೆ ತಿರುಗಿ,

"ಹೋಗಿ ನೋಡೋಣವೇ ?" ಎಂದೆ.

ಗಫೂರ್ ಮಾತ್ರ, "ನಾನು ಇಲ್ಲೇ ಇರುತ್ತೇನೆ. ಇಲ್ಲದೇ ಹೋದರೆ ಬರೋಹೊತ್ತಿಗೆ ಈ ಕೋತಿನ ಕೈಲಿ ಸಿಕ್ಕ ಕಾರು ಹಾಳು" ಎಂದನು.

ಹುಡುಗಿಯನ್ನೂ ನಮ್ಮ ಜೊತೆ ಬಂದಿದ್ದವನನ್ನೂ ಮುಂದೆ ಹೋಗಲು ಹೇಳಿ ನಾನು ಗಫೂರನ ಕಿವಿಯಲ್ಲಿ ಉಸುರಿದೆ.

"ಏನು ಸಾಹೇಬರೇ........ಮನಸ್ಸು ನೆಮ್ಮದಿಯಾಗಿರೋ ಹಾಗಿಲ್ಲ. ಇದಕ್ಕಿಂತ ಸಾವಿರ ಪಾಲು ಕೇಡಾಗಿರೋ ರಸ್ತೆಗಳಲ್ಲೆಲ್ಲಾ ಕಾರು ಓಡಿಸಿಲ್ಲವೆ ?"

"ಹೊಸ-ಹೊಸ ಸಾಮಾನು ಕಾರಿಗೆ ಹಾಕುತ್ತಲೇ ಇರಬೇಕು. ಇಂತಹ ದಾರಿಗಳಲ್ಲಿ ಓಡಿಸುತ್ತ ಇದ್ದರೆ........ಇವತ್ತು ಹಾಕಿರೊ ಸ್ಪ್ರಿಂಗಿನ ಬೆಲೆ ಗೊತ್ತಾ ?"

"ಓ ಬಿಡು ಪರವಾಗಿಲ್ಲ. ಡಬ್ಬಲ್ ಬೆಲೆ ಹೊಡೆಯುವಂತೆ."

"ಹೂಂ, ಹೊಡೆಯೋದು ಪಲ್ಟಿ, ಇಂತಹ ರಸ್ತೇಲಿ ಬಂದರೆ. ಇವರಿಗೆಲ್ಲಾ ಕಾರು ತರಬಾರದು. ಟ್ರ್ಯಾಕ್ಟರ್ ತರಬೇಕು ಅಬ್ಬ ! ಆದರೂ........" ಗಫೂರನಿಗೆ ಕೋಪವೇ ಕೋಪ.

"ಇಲ್ಲಿಂದ ಊರಿಗೆ ನಡಕೊಂಡು ಹೋಗು ಅನ್ನಬೇಕು ಇವರನ್ನ. ಎಲ್ಲಾ ಬಿಟ್ಟು ಯಾವುದೋ ಹಾವು ನೋಡೋಕೆ ಊರಾಚೆ ಬರುತ್ತಾರಂತೆ........" ಅವನ ಜೊತೆ ಮಾತಾಡಿ ಪ್ರಯೋಜನವಿರಲಿಲ್ಲ. ಮನೆಯಿಂದ ಬರುವುದಕ್ಕೆ ಮೊದಲು ಅವನ ಮುಖಕ್ಕೆ ಹೆಂಡತಿ ಮಂಗಳಾರತಿ ಎತ್ತಿರಬೇಕು.

ಹುಡುಗಿ ಮರದ ಕೆಳಗೆ ನಿಂತಿದ್ದಳು. ಹಾವನ್ನು ಬುಟ್ಟಿಯಿಂದ ಹೊರಗೆ ಬರುವಂತೆ ಮಾಡಲು ಹಾವಾಡಿಗ ಕೋಲಿನಿಂದ ಅದನ್ನು ತಿವಿಯುತ್ತಿದ್ದ.

ಹಾವು ಸುಮಾರಾಗಿ ದೊಡ್ಡದಾಗಿತ್ತು. ಬುಸುಗುಟ್ಟುತ್ತಾ ಹೊರಗೆ ಬಂದು ಹೆಡೆಯಾಡತೊಡಗಿಸಿದ ಕೂಡಲೇ ಹುಡುಗರು ಕಿರುಚಿಕೊಂಡು ಅತ್ತಿತ್ತ ಓಡಿಹೋದರು. ಹಾವಾಡಿಗ ಅವರನ್ನು ಗದರಿಸಿದ :

"ಸುಮ್ಮನಿರುತ್ತೀರೋ ಇಲ್ಲವೊ. ಗದ್ದಲ ಮಾಡಿದರೆ ಹಾವು ಅಟ್ಟಿಸಿಕೊಂಡು ಬರುತ್ತೇನೆ."

ಅವನ ಮಾತು ಕೇಳಿ ನನಗೆ ಭಯವಾಯಿತು. ನಾನು ಮೆಲ್ಲನೆ—

"ಹುಷಾರಪ್ಪ, ಎಲ್ಲಾದರೂ ಬಿಟ್ಟುಗಿಟ್ಟೀಯೆ" ಎಂದೆ.

ಹುಡುಗಿ ಇದಾವುದರ ಅರಿವೂ ಇಲ್ಲದವಳಂತೆ ಆ ಹಾವಾಡಿಗನಿಗೆ ಕೊಳಲು ಬಾರಿಸಲು ಹೇಳಿದಳು, "ನೋಡಪ್ಪಾ, ನಿನ್ನ ಪಿಳ್ಳಂಗೂದಿ ಊದಿ ನಿನ್ನ ಹಾಡಿಗೆ ಸರಿಯಾಗಿ ಆ ಹಾವು ನರ್ತಿಸೋ ಹಾಗೆ ಮಾಡಬೇಕು ತಿಳೀತಾ?"

ತಿಳಿಯಿತೆಂದು ಹಾವಾಡಿಗ ತನ್ನ ಕೊಳಲು ತೆಗೆದು ಊದತೊಡಗಿದ. ಹಾವು ಹೆಡೆ ಬಿಚ್ಚಿ ಆಡತೊಡಗಿತು. ನನಗಂತೂ ಅದನ್ನು ನೋಡಲಾಗಲಿಲ್ಲ. ಆದರೆ ಆ ಹುಡುಗಿ ಹಾವಿನ ನೃತ್ಯಕ್ಕೆ ಮಾರುಹೋಗಿದ್ದಳು. ಹಾವು ಹೆಡೆಯಾಡಿಸುವುದನ್ನು ಎವೆಯಿಕ್ಕದೇ ನೋಡುತ್ತಿದ್ದಳು. ತನ್ನ ಕೈಚಾಚಿ ಹಾವಿನಾಟವನ್ನು ಅನುಕರಿಸಿದಳು. ಹಾಡಿನ ತಾಳಕ್ಕೆ ಹೊಂದುವಂತೆ ತನ್ನ ದೇಹವನ್ನು ಬಾಗಿಸಿ ಬಳುಕಿಸಿದಳು. ಅದು ನಡೆದದ್ದು ಒಂದು ಘಳಿಗೆ ಮಾತ್ರ. ಆದರೆ ನನಗೆ ಮಾತ್ರ ನರ್ತನದಲ್ಲಿ ಅವಳನ್ನು ಮೀರಿಸುವವರಿಲ್ಲವೆಂದೆನಿಸಿತು.

ಅಲ್ಲಿಂದ ನಾವು ಮರಳಿದಾಗ ಸಂಜೆ ಏಳುಘಂಟೆಯ ಸಮಯ. ಕಾರಿನಿಂದ ಕೆಳಗಿಳಿದ ಕೂಡಲೇ ಕೃತಜ್ಞತೆ ಸೂಚಿಸಿ ಮಹಡಿ ಹತ್ತಿ ಹೊರಟು ಹೋದಳು. ಬಾಗಿಲಿನಲ್ಲೇ ನಿಂತಿದ್ದ ಅವಳ ಗಂಡ ನನ್ನ ಕಡೆಗೆ ತಿರುಗಿ—

"ಇವತ್ತಿಗಿಷ್ಟೆ, ಆಮೇಲೆ ಬಿಲ್ ಒಟ್ಟಿಗೆ ಕೊಟ್ಟುಬಿಡಿ. ನಾಳೆ ಬೆಳಿಗ್ಗೆ ಕಾರು ಹತ್ತುಘಂಟೆಗೆ ಬೇಕು" ಎಂದು ಹೇಳಿ ರೂಮಿಗೆ ಹೊರಟುಹೋದ.

ನನಗೆ ನಿಜವಾಗಿಯೂ ಸಿಟ್ಟುಬಂತು. ನನ್ನನ್ನು ಏನು ಅಂತ ತಿಳಿದುಕೊಂಡನೊ? ಕಾರು ಈಗ ಬೇಕು ಅಂತ ಹೇಳೋಕೆ ನಾನೇನು ದಳ್ಳಾಳಿ ಕೆಟ್ಟುಹೊಡೇನೇ? ನನಗೆ ವಿಪರೀತ ಕೋಪ ಬಂತು. ಆದರೆ ಕೋಪಗೊಂಡು

ಪ್ರಯೋಜನವಿರಲಿಲ್ಲ. ಸದ್ಯಕ್ಕಂತೂ ನಾನು ಅಂತಹವನೇ ಆಗಿದ್ದೆ. ಅಲ್ಲದೆ ಹೋದರೆ ಯಾವನೋ ಪ್ರವಾಸಿ. ಈ ಕಡೆ ಗಫೂರ್, ಆ ಕಡೆ ಹಾವಾಡಿಗ. ಇವರ ಮಧ್ಯೆ ಸಿಕ್ಕಿಹಾಕಿಕೊಂಡು ಅವರ ತಾಳಕ್ಕೆ ಕುಣಿಯುತ್ತಿದ್ದೆನೆ? ಕಾರು ಬೇಕು ಅಂತ ಮಾತ್ರ ಹೇಳಿದನಲ್ಲ........ನಾನು ಗೈಡ್ ಅನ್ನೋ ಸಮಾಚಾರ ಅವನಿಗೆ ಜ್ಞಾಪಕವಿತ್ತೆ? ಎಲ್ಲಿ ಹೋಗಬೇಕು ಅನ್ನೋ ವಿಷಯದ ಪ್ರಸ್ತಾಪವೇ ಇಲ್ಲ. ಒಳ್ಳೇ ವಿಚಿತ್ರ ಪ್ರಾಣಿ!

ಅವನ ಮುಖ ನೋಡೋಕೂ ಮನಸ್ಸು ಬರದ ಮನುಷ್ಯ ಅವನು. ಇಲ್ಲಿಯ ವರೆಗೂ ಯಾವ ಗಿರಾಕಿಯನ್ನೂ ನಾನು ಇಷ್ಟು ದ್ವೇಷಿಸಿರಲಿಲ್ಲ. ಗಫೂರನ ಗಾಡಿಯಲ್ಲಿ ಕುಳಿತು ಹಿಂತಿರುಗಿ ಬರುವಾಗ ಹೇಳಿದೆ, "ಬೆಳಿಗ್ಗೆ ಕಾರು ಬೇಕಂತೆ, ಅವರಪ್ಪನ ಗಂಟು ಅಂದುಕೊಂಡವನ ಹಾಗೆ ಆಡುತ್ತಾನೆ. ಎಲ್ಲಿಗೆ ಹೋಗುತ್ತಾನೆಂದು ಏನಾದರೂ ಗೊತ್ತಾಯಿತೊ?"

"ಎಲ್ಲಿಗೆ ಹೋದರೆ ನನಗೇನಂತೆ? ಯಾರು ದುಡ್ಡು ಕೊಟ್ಟರೆ ಅವರಿಗೆ ಕಾರು. ಅವರು ಯಾರಾದರೂ ಏನಂತೆ? ಎಲ್ಲಿಗೆ ಹೋದರೆ ಏನಂತೆ? ನನಗೆ ದುಡ್ಡು ಕೊಟ್ಟುಬಿಟ್ಟರೆ ಸರಿ."

ಅಮ್ಮ ನನಗಾಗಿ ಕಾದುಕೊಂಡಿದ್ದಳು. ಊಟಕ್ಕೆ ಬಡಿಸುತ್ತಾ ಅಮ್ಮನ ಪ್ರಶ್ನೆ ಎಂದಿನಂತೆಯೇ ಇತ್ತು. "ಏನೋ ಮಗು, ಇವತ್ತು ಯಾರನ್ನ ಎಲ್ಲಿಗೆ ಕರೆದುಕೊಂಡು ಹೋಗಿದ್ದೆಯೊ?"

ನಾನು ಆ ಹುಡುಗಿಯನ್ನು ಹಾವಾಡಿಗನ ಮನೆಗೆ ಕರೆದುಕೊಂಡು ಹೋಗಿದ್ದ ವಿಷಯವನ್ನೆಲ್ಲಾ ಹೇಳಿದೆ. ಕೇಳುವಷ್ಟನ್ನೂ ಕೇಳಿ ಕೊನೆಗೆ ಅಮ್ಮ—

"ಅವಳೆಲ್ಲೋ ಬರ್ಮಾದವಳಿರಬೇಕು. ಅಲ್ಲಿ ಜನ ಹಾವನ್ನು ಪೂಜೆ ಮಾಡುತ್ತಾರಂತೆ. ನನ್ನ ಸೋದರತ್ತೆ ಮಗ ಒಬ್ಬ ಬರ್ಮಾದಲ್ಲಿದ್ದ. ಅವನು ಹೇಳುತ್ತಾ ಇದ್ದ, ಅಲ್ಲಿಯ ಹಾವಾಡಗಿತ್ತಿಯರ ವಿಚಾರವನ್ನೆಲ್ಲಾ. ಇವಳೂ ಅಂತಹ ಹಾವಾಡಗಿತ್ತೀನೆ ಇರಬೇಕು........"

"ಅಮ್ಮಾ, ಏನೇನೋ ಮಾತಾಡಬೇಡಮ್ಮ. ಹಾವಾಡಗಿತ್ತೀನೂ ಅಲ್ಲ, ಹೂವಾಡಗಿತ್ತೀನೂ ಅಲ್ಲ. ನರ್ತಕಿ ಅಂತ ಕಾಣುತ್ತೆ."

"ಓಹೋ ಇರಬಹುದು, ಇರಬಹುದು. ಆದರೆ ಆ ಕುಣಿಯೋ ಹೆಂಗ-

ಸರ ಸಹವಾಸ ಒಳ್ಳೆಯದಲ್ಲ."

ನಾನು ಮುಂದೆ ಮಾತಾಡಲಿಲ್ಲ. ಆ ಸುಗಂಧಿಯ ಸಾನ್ನಿಧ್ಯವನ್ನು ಮನಸ್ಸಿನಲ್ಲೇ ಮೆಲುಕು ಹಾಕುತ್ತಿದ್ದೆ.

ಮಾರನೆಯ ದಿನ ಬೆಳಿಗ್ಗೆ ಹೋಟೆಲಿನ ಹತ್ತಿರ ಹಾಜರಾದೆ. ಆದರೆ ಅಷ್ಟು ಹೊತ್ತಿಗಾಗಲೇ ಗಫೂರ್ ಕಾರಿನ ಸಮೇತ ಅಲ್ಲಿ ಸಿದ್ಧನಾಗಿದ್ದ. ನನ್ನನ್ನು ನೋಡಿದ ಕೂಡಲೇ, "ಓಹೋ, ಏನು ಸಾಹುಕಾರ್ರೆ....ಏನೋ ಹೊಸಾ ಮಸಲತ್ತು ನಡೆಸುತ್ತಿರೋ ಹಾಗಿದೆ" ಎಂದು ಕಣ್ಣು ಮಿಟುಕಿಸಿದ.

ನಾನು ಅದನ್ನು ಗಮನಿಸದೆ, "ಒಳಗಿದಾರೇನು?" ಎಂದೆ.

"ಇರಬೇಕು, ಇನ್ನೂ ಹೊರಗೆ ಬಂದಿಲ್ಲ. ನನಗೆ ಗೊತ್ತಿರೋದು ಅಷ್ಟೆ" ಎಂದ.

ಒಂದು ಮಾತು ಹೇಳಿ ಮುಗಿಸೋ ಕಡೆ ನಾಲ್ಕು ಮಾತು. ಅವನಿಗೇನು ಬಂತು? ಶುದ್ಧ ಹರಟೆ ಮಲ್ಲನಾಗಿದ್ದಾನೆ. ಆದರೆ ಅದು ಬರಿಯ ಹರಟೆಯೋ ಅಥವಾ........? ಒಂದೇ ನಿಮಿಷದಲ್ಲಿ ಅಸೂಯೆಯ ಕಿಡಿ ಭುಗಿಲ್ಲೆಂದಿತು.

ಅವನಿಗೂ ಆ ಹುಡುಗಿಯ ಹುಚ್ಚು ಹಿಡಿದಿದೆಯೆ? ನನಗೆ ವಿಪರೀತ ಸಂಕಟವಾಯಿತು. ನನಗೆ ನಾನೇ ಹೇಳಿಕೊಂಡೆ, "ಇನ್ನುಮೇಲೂ ಇವನು ಅವರೆದುರಿನಲ್ಲಿ ಹೀಗೆಲ್ಲ ಹರಟಿದರೆ ಇವನ್ನು ಬಿಟ್ಟು ಬೇರೆಯವರನ್ನು ಹಿಡೀಬೇಕು."

ನಾನು ಮಹಡಿ ಹತ್ತಿಹೋಗಿ ಇಪ್ಪತ್ತೆಂಟನೇ ನಂಬರಿನ ರೂಮಿನ ಮುಂದೆ ನಿಂತು ಬಾಗಿಲನ್ನು ತಟ್ಟಿದೆ. ಒಳಗಿನಿಂದ, "ಸ್ವಲ್ಪ ಇರಿ" ಎಂದು ಬಂದಿತು ಉತ್ತರ. ಆದರೆ ಧ್ವನಿ ನಾನೆಣಿಸಿದ್ದಂತೆ ಹೆಂಗಸಿನದಲ್ಲ. ಗಂಡಸಿನದು. ಸ್ವಲ್ಪ ಹೊತ್ತು ಕಾದು ಕೈಗಡಿಯಾರವನ್ನು ನೋಡಿದೆ. ಹತ್ತು ಹೊಡೆದಾಗಿದೆ. ಇನ್ನೂ ಸಿದ್ಧವಾಗಿಲ್ಲವೆ? ಬಾಗಿಲು ತಳ್ಳಿಕೊಂಡು ಒಳಗೆ ಹೋಗಿಬಿಡೋಣವೆನಿಸಿತು. ಅಷ್ಟರಲ್ಲೇ ಬಾಗಿಲು ತೆರೆಯಿತು. ಅವನು ಹೊರಗೆ ಬಂದ. ಬಂದವನೇ ಬಾಗಿಲು ಮುಚ್ಚಿಬಿಟ್ಟದ್ದನ್ನು ನೋಡಿ ನನಗೆ ಆಶ್ಚರ್ಯವಾಯಿತು.

"ಆಕೆ ಬರೋದಿಲ್ಲವೆ?" ಎಂದು ಕೇಳಬೇಕೆಂದಿದ್ದವನು ಬಾಯಿ-

ಬಿಡದೆ ತೆಪ್ಪಗೆ ಅವನ ಹಿಂದೆ ಹೋದೆ.

ಅವನನ್ನು ಮೆಚ್ಚಿಸುವುದಕ್ಕಾಗಿ ಬಟ್ಟೆ-ಬರೆ ಹಾಕಿಕೊಂಡು ಬಂದಿದ್ದೇ-ನೆಂದುಕೊಂಡನೇನೋ! ನನ್ನ ನೋಡಿ ತೃಪ್ತಿಯ ನಗೆ ನಕ್ಕ. ಕಾರಿಗೆ ಹತ್ತುವ ಮೊದಲು, "ಈಹೊತ್ತು ನಿನ್ನೆ ನೋಡಿದ ವಿಗ್ರಹಗಳನ್ನು ಇನ್ನೊಂದು ಸ್ವಲ್ಪ ನೋಡಬೇಕು" ಎಂದ.

"ಸ್ವಲ್ಪ ಅಲ್ಲದಿದ್ದರೆ ದಿನ ಪೂರ್ತಿ ನೋಡುತ್ತಿರು" ಎಂದುಕೊಂಡೆ ಮನಸ್ಸಿನಲ್ಲೆ. ಆದರೆ ನನ್ನ ಮನಸ್ಸಿನ ಭಾವನೆಗಳನ್ನು ಕಂಡುಕೊಂಡ ಹಾಗೆ ಅವನೇ "ಅದಾದ ಮೇಲೆ" ಎಂದು ಜೇಬಿನಿಂದ ಒಂದು ಕಾಗದದ ಚೂರು ತೆಗೆದ.

ದಿನವಿಡೀ ಗೋಡೆಗಳನ್ನು ನೋಡುತ್ತಿದ್ದ ಅವಳನ್ನು ಆ ಹೋಟೆಲಿನ ರೂಮಿನಲ್ಲೇ ಕೊಳೆಹಾಕಿಬಿಡುವನೇನೊ ಎನ್ನಿಸಿತು. ಆದರೂ ಎಂತಹ ವಿಚಿತ್ರ ಪ್ರಾಣಿ? ಅವಳನ್ನೂ ಯಾಕೆ ಕರಕೊಂಡು ಬರಲಿಲ್ಲ? ಒಂದು ವೇಳೆ ಮರೆತುಹೋಗಿದ್ದರೆ.......ಆದಕ್ಕಾಗಿ ನಾನೇ ಕೇಳಿದೆ, "ಇನ್ನು ಯಾರೂ ಬರೋಲ್ಲವೆ?"

"ಇಲ್ಲ" ಎಂದು ಮೊಟುಕಾಗಿ ಉತ್ತರ ಕೊಟ್ಟ.

ಕೈಯಲ್ಲಿದ್ದ ಕಾಗದ ನೋಡಿ, "ಇಲ್ಲೆಲ್ಲೋ ಗುಹಾಂತರ ದೇವಾ-ಲಯಗಳು ಇವೆಯಂತಲ್ಲ, ತಿಳಿದಿದೆಯೇನು?"

ನನಗೆ ನಗು ಬಂತು. "ತಿಳೀದೇ! ನನಗೆ ತಿಳಿದಿದೆ ಸಾರ್. ಆದರೆ ಅಂತಹವನ್ನೆಲ್ಲಾ ತಿಳುಕೊಳ್ಳುವಂತಹ ಜನ ಇಲ್ಲಿಗೆ ಬರೋದು ಅಪರೂಪ. ಇಂತಹ ಅಭಿರುಚಿ ಜನಕ್ಕಿರೋದಿಲ್ಲ. ಆದರೆ........ಆದರೆ............ಅವನ್ನ ನೋಡೋಕೆ ಒಂದು ದಿನವೆಲ್ಲಾ ಬೇಕು. ಇವತ್ತು ರಾತ್ರಿನೇ ವಾಪಸ್ಸು ಬಂದುಬಿಡೋಕ್ಕಾಗೋದಿಲ್ಲ."

ಅವನು ರೂಮಿಗೆ ಹಿಂತಿರುಗಿ ಹೋಗಿ ಒಂದೆರಡು ನಿಮಿಷ ಬಿಟ್ಟು ಒಬ್ಬನೇ ಹಿಂತಿರುಗಿದನು. ಮುಖ ಸಪ್ಪೆಯಾಗಿತ್ತು. ಅವನು ಬರುವಷ್ಟರಲ್ಲಿ ನಾನೂ ಗಫೂರ್ ಇಬ್ಬರೂ ಅಲ್ಲಿಗೆ ಹೋಗಿಬರಲು ತಗಲುವ ಖರ್ಚು-ವೆಚ್ಚವನ್ನು ಅಂದಾಜು ಹಾಕಿದೆವು. ಗುಡ್ಡದ ಮೇಲಿನ ಬಂಗಲೆಯಿಂದ ಸುಮಾರು ಎರಡು ಮೈಲು ದೂರದಲ್ಲಿತ್ತು. ಗುಹೆಗಳಿದ್ದ ಜಾಗವೇನೋ

ಗೊತ್ತಿತ್ತು. ಆದರೆ ನಾನು ಮಾತ್ರ ಇಲ್ಲಿಗೆ ಇದುವರೆಗೂ ಹೋಗಿರಲಿಲ್ಲ. ಅಂತೂ ಒಬ್ಬೊಬ್ಬ ಪ್ರವಾಸಿ ಬಂದಾಗಲೂ ಒಂದೊಂದು ಹೊಸ ಪ್ರದೇಶವನ್ನು ನೋಡಿದ ಹಾಗಾಗುತ್ತಿತ್ತು.

ಕಾರಿನಲ್ಲಿ ಕುಳಿತು ಅವನು, "ಹೆಂಗಸರ ಜೊತೆ ಹೇಗೆ ನಡೆದುಕೊಳ್ಳಬೇಕು ಎನ್ನುವುದು ನಿಮಗೆ ಗೊತ್ತಿರಲಾರದು ಅಲ್ಲವೆ?" ಎಂದ.

"ಇಲ್ಲ" ಎಂದು ನಾನು ನಕ್ಕೆ. ಆದರೆ ಇದ್ದದ್ದರಲ್ಲೇ ಸ್ವಲ್ಪ ಧೈರ್ಯ ಮಾಡಿಕೊಂಡು ಕೇಳಿದೆ, "ಏನು? ಏನೋ ತೊಂದರೆಗೆ ಸಿಕ್ಕಿದಹಾಗೆ ಕಾಣುತ್ತಲ್ಲ?" ನನ್ನ ಹೊಸ ಉಡುಪು ನನಗೊಂದು ಮೊಂಡು ಧೈರ್ಯವನ್ನು ತಂದುಕೊಟ್ಟಿತ್ತು. ಹಿಂದಿನಂತೆಯೇ ಖಾಕೀ ಬುಷ್‌ಕೋಟ ಧರಿಸಿದ್ದರೆ ಅವನ ಪಕ್ಕದಲ್ಲಿ ಹೋಗಿ ಕೂಡುವ ಧೈರ್ಯವಾಗಲಿ, ಹೀಗೆ ಮಾತಾಡುವುದಕ್ಕೆ ಬಾಯಾಗಲಿ ಇರುತ್ತಿರಲಿಲ್ಲ.

ಅವನು ನನ್ನ ಕಡೆ ನೋಡಿ ನಕ್ಕನು. ಸ್ನೇಹದ ನಗೆಯಂತೆಯೇ ಇತ್ತು ಆ ನಗೆ. ನನ್ನ ಕಿವಿಯ ಹತ್ತಿರ ಬಾಗಿ, "ಗಂಡಸಿಗೆ ಮನಸ್ಸಿನ ನೆಮ್ಮದಿ ಇರಬೇಕಾದರೆ ಅವನು ಈ ಹೆಣ್ಣು ಜನಾಂಗವನ್ನು ಮರೆತುಬಿಡೋದೆ ಒಳ್ಳೇದು" ಎಂದನು. ನಮ್ಮ ಈ ಮೂರು ದಿನದ ಪರಿಚಯದಲ್ಲಿ ಇಷ್ಟು ಮನಬಿಚ್ಚಿ ಅವನು ಎಂದೂ ಮಾತನಾಡಿರಲಿಲ್ಲ. ಯಾವಾಗ ಮಾತಾಡಿಸಿದರೂ ಉತ್ತರ ಮೊಟುಕಾಗಿಯೇ ಇರುತ್ತಿತ್ತು. ಬಾಯಿ ಇಷ್ಟೊಂದು ಸಡಿಲು ಬಿಡಬೇಕಾದರೆ ಅವನ ಪರಿಸ್ಥಿತಿ ಕೈತಪ್ಪಿದೆಯೆಂದು ಧಾರಾಳವಾಗಿ ಹೇಳಬಹುದಾಗಿತ್ತು. ಗಫೂರ್ ಜಾಗದಲ್ಲಿ ಗಲ್ಲದ ಮೇಲೆ ಕೈಯಿಟ್ಟು ಕುಳಿತಿದ್ದ. "ನಿಮ್ಮಹಾಗೆ ಮಾತಿನಲ್ಲಿ ಕಾಲಕಳೆಯೋರ ಜೊತೆ ಸೇರಿ ತಪ್ಪುಮಾಡಿದೆ" ಎಂದು ಹೇಳುವಂತಿತ್ತು ಅವನ ಭಾವಭಂಗಿ. ಆದರೆ ನನ್ನ ತಲೆಯಲ್ಲೊಂದು ಭಾರೀ ಯೋಜನೆ ರೂಪುಗೊಳ್ಳುತ್ತಿತ್ತು. ಅದೇನಾದರೂ ಯಶಸ್ವಿಯಾಗಿ ಆದರೆ ನನ್ನ ಕನಸು ನನಸಾಗುವುದರಲ್ಲಿ ಸಂದೇಹವಿಲ್ಲ. ಆದರೆ ಅದೇನಾದರೂ ಅದರಲ್ಲಿ ಎಡವಿದರೆ ಪೋಲೀಸ್ ಠಾಣೆಯೇ ಗತಿ. ಅಂತೂ ಧೈರ್ಯಮಾಡಿ ಕೇಳಿದೆ, "ನಿಮ್ಮ ಪರವಾಗಿ ಹೋಗಿ ಕೇಳಲೇನು?" ಅವನ ಮುಖದಲ್ಲಿ ಆಸೆಯ ಕಿಡಿ ಮಿನುಗಿತು. "ಕೇಳುತ್ತೀರೇನು?...... ನೋಡಿ ಧೈರ್ಯವಿದ್ದರೆ."

ನಾನು ಮತ್ತೆ ಏನೂ ಕೇಳದೆ ಕಾರಿನಿಂದ ಒಂದೇ ನೆಗೆತಕ್ಕೆ ಹಾರಿ ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ಇಪ್ಪತ್ತೆಂಟನೆಯ ರೂಮಿನ ಮುಂದೆ ನಿಂತಿದ್ದೆ. ಬಾಗಿಲು ಹಾಕಿತ್ತು, ತಟ್ಟಿದೆ.

" ಸುಮ್ಮನೆ ಯಾಕೆ ಪ್ರಾಣ ಹಿಂಡುತ್ತೀರಿ. ನಿಮ್ಮ ಜೊತೆ ಬರೋಕೆ ನನಗಿಷ್ಟವಿಲ್ಲ " ಎಂದಿತು ಹುಡುಗಿಯ ಧ್ವನಿ, ಒಳಗಿನಿಂದ.

ಹೇಗೆ ಮಾತಾಡಬೇಕೆಂದು ತಿಳಿಯದೆ ನಾನು ಒಂದು ನಿಮಿಷ ಹಾಗೆ ನಿಂತೆ. ಇಲ್ಲ ಶತಮೂರ್ಖನಾಗಿ ಹಿಂತಿರುಗಬೇಕು, ಇಲ್ಲವೆ ಸ್ವರ್ಗವನ್ನೇ ಪಡೆಯಬೇಕು. ನಾನು ಯಾರು ಅಂತ ಹೇಳೋದು ನನ್ನ ಸುಪ್ರಸಿದ್ಧ ಹೆಸರು ಹೇಳಿದರೆ ತಿಳಿಯುತ್ತೆಯೆ ? ಕೊನೆಗೆ—

" ಅವರಲ್ಲ ನಾನು " ಎಂದೆ.

" ಆ........ಯಾರು ? " ಎಂದಳು ಅವಳು. ಅವಳಿಗೆ ಆಶ್ಚರ್ಯದ ಜೊತೆಗೆ ಕೋಪವೂ ಬಂದಿರಬೇಕು.

" ' ಅವರಲ್ಲ, ನಾನು ' ಎಂದೆನಲ್ಲ, ನನ್ನ ಧ್ವನಿ ತಿಳೀಲಿಲ್ಲವೆ ? ನಿನ್ನೆ ನಿಮ್ಮ ಜೊತೆ ಆ ಹಾವಾಡಿಗನ ಹತ್ತಿರ ಬಂದಿರಲಿಲ್ಲವೆ ? ನಿನ್ನೆ ರಾತ್ರಿಯೆಲ್ಲ ನಿದ್ದೆ ಬರಲಿಲ್ಲ. ನನಗೆ ಕಣ್ಣು ತುಂಬಾ ನಿಮ್ಮ ನಾಟ್ಯವೇ ತುಂಬಿತ್ತು. "

ನಾನಿನ್ನೂ ನನ್ನ ವಾಕ್ಯ ಮುಗಿಸಿಯೇ ಇರಲಿಲ್ಲ. ಅಷ್ಟರಲ್ಲೇ ಹುಡುಗಿ ಬಾಗಿಲು ತೆರೆದು ಹೊರಗೆ ಬಂದಳು.

" ಓ ! ನೀವೇ ? "

" ನನ್ನ ಹೆಸರು ರಾಜು. "

ನನ್ನನ್ನೊಮ್ಮೆ ಆಪಾದಮಸ್ತಕ ನೋಡಿ ಹುಡುಗಿ, " ನಿಮ್ಮನ್ನ ಗೊತ್ತಿಲ್ಲವೆ.........ಗೊತ್ತು " ಎಂದಳು.

ನಾನು ಬಹಳ ಕಷ್ಟಪಟ್ಟು ಅವಳನ್ನು ಮೆಚ್ಚಿಸುವ ನಗೆ ನಕ್ಕೆ. " ಅವರೆಲ್ಲಿ ? "

" ಕಾರಿನಲ್ಲಿ ಕಾದಿದ್ದಾರೆ. ಬಟ್ಟೆ ಬದಲಾಯಿಸಿ ಬರೋದಿಲ್ಲವೆ ? "

ಅತ್ತು-ಅತ್ತು ಅವಳ ಕಣ್ಣು ಕೆಂಪಾಗಿದ್ದುವು. ಮಾಸಿದ ಸೀರೆ, ಕೆದರಿದ ಕೂದಲು. ಆದರೂ ಅವಳು ನನಗೆ ಹೇಗಿದ್ದರೂ ಸುಂದರಿಯೆ.

" ಹೇಗಿದಿರೋ ಹಾಗೆ ಬಂದರು ಸರಿ........ಯಾರೂ ಏನೂ ಅನ್ನೋ-

ದಿಲ್ಲ. ಕಾಮನಬಿಲ್ಲನ್ನು ಸಿಂಗರಿಸುತ್ತಾರೆಯೆ?"

"ಹೀಗೆಲ್ಲಾ ಹೊಗಳಿದರೆ ನಾನು ಮನಸ್ಸು ಬದಲಾಯಿಸಿಬಿಡುತ್ತೇನೆ ಎಂತಲೊ?"

"ಹೌದು, ಯಾಕಾಗಬಾರದು?"

"ಅವರ ಜೊತೆ ಹೋಗು ಅಂತ ಯಾಕೆ ಹಾಗೆ ಹೇಳುತ್ತೀರಿ? ನನ್ನನ್ನು ನನ್ನ ಪಾಡಿಗೆ ಬಿಟ್ಟುಬಿಡಬಾರದೇ?"

"ಬಿಟ್ಟುಬಿಡಬಹುದು, ಆದರೆ ನೀವಿಲ್ಲದ ಜಗತ್ತು ಶೂನ್ಯ" ಎಂದೆ, ಅವಳ ಮುಖದ ಬಳಿ ತುಟಿಯಿಟ್ಟು.

ನನ್ನನ್ನು ಹಿಂದಕ್ಕೆ ತಳ್ಳಿಬಿಡಬಹುದಾಗಿತ್ತು. ಕಪಾಳಕ್ಕೆ ಹೊಡೆಯ-ಬಹುದಾಗಿತ್ತು. ಆದರೆ ಹಾಗೇನೂ ಮಾಡದೆ, "ನೀವು ಇಷ್ಟು ಪೊಂಡರು ಎಂದು ಗೊತ್ತಿರಲಿಲ್ಲ" ಎಂದು ರೂಮಿನೊಳಗೆ ಹೋಗಿ ಬಾಗಿಲು ಹಾಕಿ-ಕೊಂಡಳು. ಬಾಗಿಲನ್ನು ತಳ್ಳಿ ಒಳಗೆ ಹೋಗಬೇಕೆಂದು ಮನಸ್ಸು ಹುಚ್ಚು ಯೋಚನೆ ಮಾಡಿತು. ಆದರೆ ಸಧ್ಯ ನಾನು ಹಾಗೇನೂ ಮಾಡಲಿಲ್ಲ. ಕಾಲಸಪ್ಪುಳ ಕೇಳಿತು. ಏನಾಗಿದೆಯೆಂದು ನೋಡಲು ಅವಳ ಗಂಡ ಬರು-ತ್ತಿದ್ದಂತೆ ಕಂಡೆ. ಹಾಗೆ ಅವನು ಬಂದು ನನ್ನ ಹಿಂದೆ ನಿಂತ.

"ಏನು, ಬರುತ್ತಾಳಂತೊ ಇಲ್ಲವೊ? ಇಲ್ಲಿ ನಿಂತು ಕಾಲ ಕಳೆ-ಯೋಕೆ........"

"ಹಷ್........ಇನ್ನೊಂದು ನಿಮಿಷದಲ್ಲಿ ಬಂದುಬಿಡುತ್ತಾರೆ. ನೀವು ದಯವಿಟ್ಟು ಕಾರಿಗೆ ಹೋಗಿ ಕುಳಿತುಕೊಳ್ಳಿ."

"ನಿಜವಾಗಿ! ಭಲೆ! ಒಳ್ಳೆ ಮಂತ್ರಗಾರನಪ್ಪ" ಅವನು ಸದ್ದು ಮಾಡದೆ ಕಾರಿಗೆ ಹಿಂತಿರುಗಿದನು. ಅಷ್ಟರಲ್ಲೇ ಅವಳು ಹೊರಗೆ ಬಂದಳು, ಅಪ್ಸರೆ ಬಂದಹಾಗೆ.

"ಸರಿ, ಹೊರಡೋಣ. ಆದರೆ ನೀವು ಬರದೇಹೋಗಿದ್ದರೆ ಒಂದು ತಮಾಷೆ ತೋರಿಸಬೇಕೂಂತ ಇದ್ದೆ."

"ಏನು ತಮಾಷೆ?"

"ಮಧ್ಯಾಹ್ನ ರೈಲು ಹತ್ತಿಸಿ ಊರಿಗೆ ಹೊರಟುಹೋಗುತ್ತಾ ಇದ್ದೆ."

"ಸರಿ, ಸರಿ ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ ಅಂದಹಾಗೆ"

ಎಂದವನೆ ಅವಳಿಗೆ ನಮ್ಮ ಕಾರ್ಯಕ್ರಮ ತಿಳಿಸಿದೆ.

"ಬಹಳ ಚೆನ್ನಾಗಿರೊ ಸ್ಥಳಕ್ಕೆ ಹೋಗುತ್ತಾ ಇದ್ದೀವಿ. ದಯವಿಟ್ಟು ಈಗಿರೋ ಹಾಗೆ ನಗುನಗುತ್ತಾ ಇರ್ರಿ. ಅವರಿಗಾಗಿ ಅಲ್ಲದೇಹೋದರೂ ನನಗೋಸ್ಕರವಾಗಿಯಾದರೂ........"

ಮೆಟ್ಟಲಿಳಿದು ಹೋದೆವು........ಅವಳು ಮುಂದೆ, ನಾನು ಹಿಂದೆ. ಕಾರಿನ ಬಳಿ ಬಾಗಿಲು ತೆರೆದಾಗ ಅವನು ಪಕ್ಕಕ್ಕೆ ಸರಿದು ಅವಳಿಗೆ ಜಾಗ ಮಾಡಿಕೊಟ್ಟನು. ನಾನು ಆ ಕಡೆಯಿಂದ ಬಂದು ಅವನ ಪಕ್ಕದಲ್ಲಿ ಕುಳಿತೆ. ಗಫೂರನ ಪಕ್ಕದಲ್ಲಿ ಕೂಡುವಂತಹ ಸನ್ನಿವೇಶವಾಗಿರಲಿಲ್ಲ ಅದು.

"ಇನ್ನು ಹೊರಡಬಹುದೇ?" ಎಂದು ಕೇಳಲು ಗಫೂರ್ ಹಿಂತಿರುಗಿ ನೋಡಿದ.

"ಗುಡ್ಡದ ಬಂಗಲೆಗೆ ಹೋದರೆ ಇವತ್ತು ರಾತ್ರಿ ಬರೋಕಾಗೋದಿಲ್ಲ."

"ಕೆಲಸ ಬೇಗ ಮುಗಿದುಹೋದರೆ ಬಿಡೋಕೆ ಆಗೋಲ್ಲವೆ?"

"ಬಂದುಬಿಡಬಹುದು. ಆದರೆ ಅಲ್ಲಿ ಇದ್ದರೂ ಚಿಂತಿಲ್ಲ. ಬೇಕಾದರೆ ರಾತ್ರಿ ಇರೋದಕ್ಕೆ ಒಂದಿಷ್ಟು ಬಟ್ಟೆ-ಬರೆ ತಗೊಳ್ಳಿ. ನಮ್ಮ ಮನೆಹತ್ತಿರ ನಿಲ್ಲಿಸೋಹಾಗೆ ನಾನೂ ಗಫೂರ್‌ನಿಗೆ ಹೇಳಿದೀನಿ."

"ಒಂದು ನಿಮಿಷ" ಎಂದವಳೇ ಮೇಲೆ ಓಡಿಹೋಗಿ ಒಂದು ಸಣ್ಣ ಸೂಟ್‌ಕೇಸಿನಲ್ಲಿ ಒಂದಿಷ್ಟು ಬಟ್ಟೆ ಹಾಕಿಕೊಂಡು ಬಂದಳು.

"ನಿಮ್ಮ ಬಟ್ಟೇನೂ ಇಲ್ಲಿದೆ."

"ಬಹಳ ಸಂತೋಷ" ಎಂದು ಅವನು ನಕ್ಕ. ಅವಳೂ ನಕ್ಕಳು. ಆ ನಗೆಯಲ್ಲಿ ಬೆಳಗಿನ ದುಗುಡ ಮಾಯವಾಯಿತು. ಆದರೂ ಸಂಪೂರ್ಣವಾಗಿ ಮರೆಯುದ ಹಾಗಾಗಿರಲಿಲ್ಲ.

ರೈಲುನಿಲ್ದಾಣದ ಕಡೆ ಕಾರನ್ನು ತಿರುಗಿಸಿ ನಿಲ್ಲಿಸುವ ಹಾಗೆ ಗಫೂರ್‌ನಿಗೆ ಹೇಳಿದೆ. ಅವರು ನನ್ನ ಮನೆಯನ್ನು ನೋಡುವುದು ನನಗೆ ಇಷ್ಟವಿರಲಿಲ್ಲ. "ಒಂದೇ ಒಂದು ನಿಮಿಷ" ಎಂದು ಹೇಳಿ ಮನೆಯೊಳಗೋಡಿದೆ. ನನ್ನನ್ನು ನೋಡಿದ ಕೂಡಲೇ ಅಂಗಡಿಯ ಹುಡುಗ ಏನನ್ನೋ ಹೇಳಲು ಬಾಯಿತೆರೆದ. ಅದನ್ನು ಕೇಳುತ್ತ ಅಲ್ಲಿ ನಿಲ್ಲದೆ ಮನೆಗೆ ಹೋಗಿ ಸಣ್ಣ ಚೀಲದಲ್ಲಿ ಬಟ್ಟೆಯನ್ನು ತುರುಕಿಕೊಂಡು ರಾತ್ರಿ ನನಗಾಗಿ ಕಾಯಬೇಡವೆಂದು

ಅಮ್ಮನಿಗೆ ಕೂಗಿ ಹೇಳಿ ಕಾರಿಗೆ ಹಿಂತಿರುಗಿದೆ.

ಗುಡ್ಡದ ಬಂಗಲೆಯನ್ನು ತಲುಪಿದಾಗ ಮಧ್ಯಾಹ್ನವಾಗಿತ್ತು. ನಮ್ಮನ್ನು ನೋಡಿದ ಕೂಡಲೇ ಕಾವಲುಗಾರನಿಗಾದ ಆನಂದ ಅಷ್ಟಿಷ್ಟಲ್ಲ. ಪ್ರವಾಸಿಗಳಿಗೆ ಮೊದಲೇ ನಾನು ಅವನ ಕೈ ಬೆಚ್ಚಗೆ ಮಾಡಿಬಿಟ್ಟಿರುವಂತೆ ಹೇಳುತ್ತಿದ್ದುದರಿಂದ ಅವರಿಗೆ ಆ ನಿರ್ಜನ ಪ್ರದೇಶದಲ್ಲಿ ಊಟಕ್ಕಾಗಲೀ, ತಿಂಡಿಗಾಗಲೀ, ಇನ್ನು ಯಾವುದೇ ವಿಚಾರಕ್ಕಾಗಲೀ ಕಷ್ಟವಾಗುತ್ತಿರಲಿಲ್ಲ. ಈ ಸಲವೂ ಎಂದಿನಂತೆಯೆ ಕಾವಲುಗಾರನ ವಿಷಯ ನಮ್ಮ ಪ್ರವಾಸಿಯ ಹತ್ತಿರ ಪ್ರಸ್ತಾಪಿಸಿದೆ. ಆದರೆ ಅವನು—ಇಲ್ಲಿಂದ ಮುಂದೆ ಅವನನ್ನು '**ಮಾರ್ಕೊ**' ಎಂದು ಕರೆಯುತ್ತೇನೆ—ನಿನಗೆ ಏನು ಬೇಕೋ ಮಾಡು. ನಮಗೆ ತೊಂದರೆಯಾಗದಿದ್ದರೆ ಸರಿ. ನಾನು ಹೇಳೋದು ಇಷ್ಟೆ. ಈ ಸಣ್ಣ-ಸಣ್ಣ ವಿಚಾರಗಳಿಗೆಲ್ಲ ನನ್ನ ಕೇಳಬೇಡ. ನಿನಗೆ ತಿಳಿದಹಾಗೆ ಮಾಡು. ದುಡ್ಡಿನ ವಿಚಾರ ನನಗಿರಲಿ" ಎಂದ.

ನಾನು ಕಾವಲುಗಾರ ಜೋಸೆಫನನ್ನು ಕರೆದು ಹಳ್ಳಿಯಿಂದ ಊಟ ತರಲು ಹೇಳಿದೆ.

"ಈಗ ಸ್ವಲ್ಪ ದುಡ್ಡು ಕೊಡುತ್ತೀರಾ? ಆಮೇಲೆ ಬಿಲ್ ಸೆಟಲ್ ಮಾಡೋಣ."

ಇಂತಹ ಕೋರಿಕೆಗೆ ಮಾರ್ಕೊನ ಪ್ರತಿಕ್ರಿಯೆ ಯಾವ ರೀತಿ ಇತ್ತೆಂದು ಹೇಳುವುದಕ್ಕೆ ಸಾಧ್ಯವಿರಲಿಲ್ಲ. ಒಂದೊಂದು ಸಲ ದುಡ್ಡಿನ ಆಸೆಯೇ ಇಲ್ಲದವನಂತೆ ಮಾತಾಡಿದರೆ, ಮರುಕ್ಷಣದಲ್ಲಿಯೇ ಪ್ರತಿಯೊಂದು ಆಣೆಗೂ ಲೆಕ್ಕ ಕೇಳುವಂತಹ ಮನುಷ್ಯ ಅವನು. ಆದರೆ ಕೊಟ್ಟ ದುಡ್ಡಿಗೆ ರಸೀತಿ ಕೊಟ್ಟುಬಿಟ್ಟರೆ ಅವನಿಂದ ಎಷ್ಟು ಹಣವನ್ನು ಬೇಕಾದರೂ ಕೇಳಬಹುದಾಗಿತ್ತು. ರಸೀತಿ ಕೊಡದೇ ಇದ್ದರೆ ಒಂದು ಬಿಡಿಗಾಸು ಬಿಚ್ಚಲು ಅವನು ಸಿದ್ಧನಿರಲಿಲ್ಲ. ಆದರೆ ಒಂದು ತುಂಡು ಚೀಟಿಯನ್ನು ರಸೀತಿಯಾಗಿ ಕೊಟ್ಟರೂ ಸಾಕು. ಅವನ ಆಸ್ತಿ-ಪಾಸ್ತಿಯನ್ನೇ ಕೊಂಡುಕೊಳ್ಳಬಹುದಾಗಿತ್ತು. ಅದನ್ನು ತಿಳಿದುಕೊಂಡೇ ನಾನು, "ದುಡ್ಡು ಕೊಟ್ಟರೆ, ನೀವು ಖರ್ಚು ಮಾಡೋ ಪ್ರತಿಯೊಂದು ಕಾಸಿಗೂ ರಸೀತಿ ಕೊಡುತ್ತೇನೆ" ಎಂದೆ. ಇದರಿಂದ ಅವನಿಗೆ ಸಂತೋಷವಾಯಿತು. ನನಗೆ ಹಣವೂ ಸಿಕ್ಕಿತು.

ಟ್ಯಾಕ್ಸಿಯನ್ನು ಕಳುಹಿಸಿಬಿಡಬೇಕಾಗಿತ್ತು. ಗಫೂರ್ ಬರಬೇಕಾದದ್ದು ಮಾರನೆಯ ದಿನ ಮಧ್ಯಾಹ್ನ. ಏರ್ಪಾಡನ್ನೆಲ್ಲಾ ನಾನೇ ಮಾಡಬೇಕಾಗಿದ್ದ-ರಿಂದ ನನ್ನ ಪ್ರಿಯತಮೆಯ ಮುಖವನ್ನು ನೋಡುತ್ತ ಕೂಡುವುದು ಸಾಧ್ಯ-ವಿರಲಿಲ್ಲ. ಆದರೂ ಆಗಾಗ ಅವಳ ಕಡೆ ನೋಡುವುದು ಮಾತ್ರ ಬಿಡಲಿಲ್ಲ.

"ಈ ಕಡೆ ಗುಡ್ಡ ಇಳಿದುಹೋದರೆ ಸುಮಾರು ಒಂದು ಮೈಲಿ ದೂರ-ದಲ್ಲಿ ಗುಹೆಗಳಿವೆ. ಈಗ ಹೋಗೋಕೆ ಆಗೊಲ್ಲ. ನಾಳೆ ಬೆಳಗ್ಗೆ ತಿಂಡಿ ತಿಂದುಕೊಂಡು ಹೊರಟರೆ ಊಟದ ಹೊತ್ತಿಗೆ ಬಂದುಬಿಡಬಹುದು" ಎಂದ ಜೋಸೆಫ್. ಊಟ ತರಲು ಅವನಿಗೆ ಸ್ವಲ್ಪ ದುಡ್ಡು ಕೊಟ್ಟು ಕಳುಹಿಸಿದೆ.

ಮೆಂಪಿ ಬೆಟ್ಟಗಳಲ್ಲೆಲ್ಲಾ ಅತ್ಯಂತ ಎತ್ತರವಾದ ಬೆಟ್ಟ ಮೇಲಿತ್ತು ನಾವಿಳಿದಿದ್ದ ಮನೆ. ಬಂಗಲೆಯ ವರೆಗೂ ರಸ್ತೆ ಅಷ್ಟೆ. ಗಾಜಿನ ವರಾಂಡ. ಅಲ್ಲಿ ಕುಳಿತರೆ ದೂರದ ದಿಗಂತ ನೋಡಬಹುದಾಗಿತ್ತು. ಗುಡ್ಡದ ಇಳಿ-ಜಾರನ್ನು ಕಾಡು ಮುಚ್ಚಿತ್ತು. ಕೆಳಗೆ ಬೆಟ್ಟದ ತಪ್ಪಲು. ಮೋಡ ಮುಚ್ಚದೇ ಹೋದರೆ ಸರಯೂ ಸೂರ್ಯರಶ್ಮಿಯಲ್ಲಿ ಹೊಳೆಯುವುದನ್ನೂ ನೋಡ-ಬಹುದಾಗಿತ್ತು. ಪ್ರಕೃತಿಯ ರುದ್ರ ರಮಣೀಯತೆಯನ್ನು ನೋಡಲು ಬಯಸುವವರಿಗೆ ಇಂತಹ ಸ್ಥಳವನ್ನು ಬಿಟ್ಟರಿಲ್ಲ. ರೋಜಿಯ ಸಂತೋಷ-ಕ್ಕಂತೂ ಪಾರವೇ ಇರಲಿಲ್ಲ. ಗಿಡದಿಂದ ಗಿಡಕ್ಕೆ ವನದೇವತೆಯಂತೆ ಓಡಾ-ಡಿದಳು. ಆದರೆ ಅವನಿಗೆ ಮಾತ್ರ ಅದರಲ್ಲಿ ಆಸಕ್ತಿ ಇರಲಿಲ್ಲ. ಒಟ್ಟಿನಲ್ಲಿ ಅವಳಿಗೇನು ಇಷ್ಟವೊ ಅದನ್ನು ಕಂಡರೆ ಅವನಿಗಾಗುತ್ತಿರಲಿಲ್ಲ.

ಅವಳು ಇದ್ದಕ್ಕಿದ್ದ ಹಾಗೆ ನಿಂತು ನೋಡಿದಳು. ಕೆಳಗೆ, ಸಾವಿರಾರು ಅಡಿಗಳ ಕೆಳಗೆ ಹೊಂಬಣ್ಣದ ಹೊಲಗಳು....ಅಬ್ಬಾ....ಏನು ಚೆಲುವು.

ರಾತ್ರೆ ಅವಳಿಗೆ ಎಚ್ಚರಿಕೆಯಾಗಬಹುದೆಂದುಕೊಂಡೆ. ರಾತ್ರೆಯೆಲ್ಲಾ ನರಿಗಳ ಕೂಗು—ಇತರ ಕಾಡುಪ್ರಾಣಿಗಳ ವಿವಿಧ ರೀತಿಯ ಘರ್ಜನೆ ಕೇಳಿಸುತ್ತಿತ್ತು. ಅಷ್ಟುಹೊತ್ತಿಗೆ ಜೋಸೆಫ್ ಊಟ ತಂದ. ಹಾಲು, ಸಕ್ಕರೆ, ಕಾಫಿಪುಡಿಯನ್ನೂ ತಂದಿದ್ದ. ಒಲೆ ಇರುವ ಜಾಗ ನೋಡಿಕೊಂಡಾಯಿತು.

ಅವಳು ಹೇಳಿದಳು :

"ನಾನೇ ಬೆಳಗ್ಗೆ ಕಾಫಿ ಮಾಡುತ್ತೇನೆ. ಕರೆಯೋತನಕ ಯಾರೂ ಏಳಬಾರದು."

ಹೋಗುವ ಮೊದಲು ಜೋಸೆಫ್ ಬಾಗಿಲನ್ನು ಭದ್ರಪಡಿಸಿ ಮಲಗಿರೆಂದು ಎಚ್ಚರಿಸಿ ಹೋದ.

“ ರಾತ್ರಿ ಬೇಕಾದರೆ ಆ ಗಾಜಿನ ಹತ್ತಿರ ನಿಂತು ನೋಡಿ, ಹುಲಿಗಿಲೀ ತಿರುಗಾಡೋದು ಕಾಣಬಹುದು. ಆದರೆ ಸದ್ದು ಮಾತ್ರ ಮಾಡಬಾರದು ” ಲಾಂದ್ರವನ್ನು ಹಿಡಿದುಕೊಂಡು ಜೋಸೆಫ್ ಬೆಟ್ಟವನ್ನು ಇಳಿಯುವುದನ್ನು ನೋಡುತ್ತಿದ್ದೆವು. ಅಕ್ಕ-ಪಕ್ಕದಲ್ಲಿದ್ದ ಚಿಗುರೆಲೆಗಳನ್ನು ಕ್ಷಣಕಾಲ ಬೆಳಗಿಸಿ ಅವನ ಬೆಳಕು ಮಾಯವಾಯಿತು.

“ ಪಾಪ, ಜೋಸೆಫ್........ಅಂತೂ ಈ ರಾತ್ರೀಲಿ ಬೆಟ್ಟ ಇಳಿದು ಹೋಗೋಕೆ ಎಷ್ಟು ಧೈರ್ಯವಿರಬೇಕು ? ” ಎಂದಳು ಹುಡುಗಿ. ಅದಕ್ಕೆ ಅವಳ ಗಂಡ-—

“ ಅದೇನು ಹೆಚ್ಚಲ್ಲ. ಇಲ್ಲೇ ಹುಟ್ಟಿ ಇಲ್ಲೇ ಬೆಳೆದವನಿರಬೇಕು ” ಎಂದು ನನ್ನ ಕಡೆ ತಿರುಗಿ ಕೇಳಿದ, “ ನಿನಗೆ ಅವನು ಗೊತ್ತೇನು ? ”

“ ಗೊತ್ತು ಗೊತ್ತು, ಬೆಟ್ಟದ ತಪ್ಪಲಿನಲ್ಲಿರೋ ಹಳ್ಳೀಲಿ ಹುಟ್ಟಿದೋನು. ಇನ್ನೂ ಚಿಕ್ಕವನಿರುವಾಗಲೇ ಈ ಬಂಗಲೆಯ ಕಾವಲುಗಾರನಾಗಿ ಬಂದ. ಈಗ ಸುಮಾರು ಅರವತ್ತು ವರ್ಷ ವಯಸ್ಸಾಗಿರಬೇಕು. ”

“ ಕ್ರಿಶ್ಚಿಯನ್ ಹೇಗಾದ ? ”

“ ಮಿಷಿನರಿಗಳು ಇಲ್ಲೆಲ್ಲಾ ಬಂದು ನೆಲಸಿಬಿಟ್ಟಿದ್ದರು ನೋಡಿ. ಆವಾಗ ಯಾವಾಗಲಾದರೂ ಆಗಿರಬೇಕು. ”

ಜೋಸೆಫ್ ನಮಗೆರಡು ಲಾಟೀನುಗಳನ್ನು ಕೊಟ್ಟುಹೋಗಿದ್ದ. ಒಂದನ್ನು ಅಡಿಗೆ ಮನೆಯಲ್ಲಿಟ್ಟು ಇನ್ನೊಂದು ಅವರ ರೂಮಿನಲ್ಲಿಟ್ಟೆ. ಅಲಮಾರಿನಲ್ಲಿದ್ದ ಊಟದ ತಟ್ಟೆಗಳನ್ನು ತೆಗೆದು ಮೇಜಿನ ಮೇಲೆ ಊಟಕ್ಕೆ ಸಿದ್ಧಪಡಿಸಿದೆ. ಸಂಜೆಯ ಸಮಯ. ಅಸ್ತಮಿಸುತ್ತಿದ್ದ ಸೂರ್ಯನ ಹೊಂಬಣ್ಣದ ಕಾಂತಿಯನ್ನು ನೋಡಿ ನಾವು ಹುಚ್ಚರಾಗಿದ್ದೆವು. ಆ ಕಾಂತಿಯಲ್ಲಿ ಗಿರಿ-ಶಿಖರಗಳೆಲ್ಲ ರಾಜಿಸುತ್ತಿದ್ದವು. ಅದನ್ನು ನೋಡಿ ಮಾರುಹೋಗಿ ಮೆಚ್ಚಿ ನುಡಿದಾಗ, “ ಓಹೋ, ಏನು ರಾಜ ? ನೀನೂ ಕವಿಯೇ ? ” ಎಂದ ಮಾರ್ಕೊ.

ಊಟ ಮಾಡುವಾಗ ನಾನೂ ಬಡಿಸಲು ಹೋದೆ. ಆದರೆ ಅವಳು

ಬೇಡವೆಂದು ತಡೆದಳು. "ನಿಮಗಿಬ್ಬರಿಗೂ ಬಡಿಸಿ ನಾನು ಆಮೇಲೆ ಊಟ ಮಾಡುತ್ತೇನೆ. ಒಳ್ಳೆಯ ಗೃಹಿಣಿಯ ಹಾಗೆ" ಎಂದಳು.

"ಆ.........ಅದೀಗ ಸರಿ" ಎಂದು ಅವನು ನಕ್ಕ.

ಬಟ್ಟಲನ್ನು ತನ್ನ ಕೈಗೆ ಕೊಡಬೇಕಾಗಿ ಬೇಡಿ ಅವಳು ಕೈಚಾಚಿದಳು. ನಾನೂ ವೊಂಡುಹಿಡಿದು ನಾನೇ ಬಡಿಸುತ್ತೇನೆಂದೆ. ಆದರೆ ಅವಳು ಮುಂದೆ ನುಗ್ಗಿ ನನ್ನ ಕೈಯಿಂದ ಪಾತ್ರೆಯನ್ನು ಕಸಿದುಕೊಂಡಳು.

ಓ! ಅದೆಂತಹ ದಿವ್ಯ ಸ್ಪರ್ಶ, ನನಗೆ ಎಲ್ಲಿದ್ದೇನೆಂಬುದೇ ಒಂದು ಕ್ಷಣ ಮರೆತುಹೋಯಿತು. ಎಲ್ಲವೂ ಮಧುರ–ಯಾವುದೋ ಕನಸಿನ ರಾಜ್ಯದಲ್ಲಿ ವಿಹರಿಸುವ ಹಾಗೆ ಕಂಡಿತು. ಊಟ ಮಾಡುವಷ್ಟು ಹೊತ್ತೂ ನನಗೆ ಆ ಅನುಭವದ ಧ್ಯಾನವೇ ಆಯಿತು. ಏನು ಊಟಮಾಡುತ್ತಿರುವೆ-ನೆಂದಾಗಲೀ ತಿಳಿಯಲಿಲ್ಲ. ತಲೆ ತಗ್ಗಿಸೇ ಊಟ ಮಾಡಿದೆ. ಅವಳ ಕಡೆ ನೋಡುವುದೂ ನನ್ನಿಂದ ಸಾಧ್ಯವಾಗಲಿಲ್ಲ. ಊಟ ಮುಗಿಸಿದ ನೆನಪಾಗಲೀ, ಅವಳು ತಟ್ಟೆ ತೆಗೆದ ನೆನಪಾಗಲೀ ಇಲ್ಲ. ಎಲ್ಲೆಲ್ಲಿ ನೋಡಿದರೂ ಅವಳೇ ಕಾಣಿಸುತ್ತಿದ್ದಳು. ನನ್ನ ಮನಸ್ಸು ಒಂದು ಸಲ ಹೇಳಿತು :

"ಅವಳ ಗಂಡ ಮಾರ್ಕೊ. ಹೀಗೆಲ್ಲ ನೀನು ಅವಳ ಬಗ್ಗೆ ಯೋಚಿ-ಸುವುದು ಸರಿಯಲ್ಲ" ಎಂದು

ಆದರೆ ನನ್ನ ಹುಚ್ಚು ಕಲ್ಪನೆಗಳಿಗೆ ಕಡಿವಾಣವನ್ನು ಹಾಕುವುದು ಸಾಧ್ಯವೇ ಇರಲಿಲ್ಲ.

"ನಿನ್ನನ್ನು ಅವನು ಗುಂಡಿಕ್ಕಿ ಸುಟ್ಟುಹಾಕಿಬಿಡಬಹುದು" ಎಂದಿತು ವಿವೇಕ.

"ಬಂದೂಕಿದ್ದರೆ ತಾನೆ?" ಎಂದಿತು ಅವಿವೇಕ.

ಊಟವಾಯಿತು. "ವರಾಂಡಕ್ಕೆ ಹೋಗೋಣವೇ?" ಎಂದಳು ಅವಳು.

"ಇವತ್ತು ರಾತ್ರಿ ಕಾಡುಮೃಗಗಳು ಬರುತ್ತವೆಯೇ?"

"ಬರಬಹುದು, ನಿಮ್ಮ ಅದೃಷ್ಟ ಚೆನ್ನಾಗಿದ್ದರೆ" ಎಂದೆ ನಾನು.

"ಆದರೆ ನಿಮಗೆ ಹೆದರಿಕೆಯಾಗೋದಿಲ್ಲವೆ?"

ನನ್ನ ಪ್ರಶ್ನೆಗೆ ಸುಮ್ಮನೆ ನಕ್ಕುಬಿಟ್ಟಳು. ನಮ್ಮ ಜೊತೆಗೆ ಬರಲು

ಕನ್ನಡ ವಿಶ್ವವಿದ್ಯಾಲಯ. ಹಂಪಿ
ಗ್ರಂಥ ಭಂಡ



ಮಾರ್ಕೋವಿಗೂ ಆಮಂತ್ರಣ ಕೊಟ್ಟಾಯಿತು. ಆದರೆ ಅವನು ತನ್ನನ್ನು ಕರೆಯಬೇಡ ಎಂದುಬಿಟ್ಟನು. ದೀಪದ ಹತ್ತಿರ ಒಂದು ಖುರ್ಚಿಯನ್ನು ಎಳೆದು ಕುಳಿತುಕೊಂಡು ನಿಮಿಷದಲ್ಲಿ ತನ್ನ ಕಾಗದ–ಪತ್ರಗಳಲ್ಲಿ ಮಗ್ನ-ನಾದನು. ಅವಳನ್ನು ಹಿಂಬಾಲಿಸುವ ಮೊದಲು ನಾನು ಅವನನ್ನು,

"ಏನಾದರೂ ಬೇಕೆ ?" ಎಂದು ಕೇಳಿದೆ.

"ಇಲ್ಲ."

"ಹಾಗಾದರೆ ವರಾಂಡದಲ್ಲಿರಲೇ ?"

"ಓಹೋ..........ಧಾರಾಳವಾಗಿ" ಎಂದವನೆ ಮತ್ತೆ ತನ್ನ ಓದನ್ನು ಮುಂದುವರಿಸಿದನು

ಗಾಜಿಗೆ ಮುಖವಿಟ್ಟು ಕುಳಿತು ಅವಳು ಹೊರಗೆ ನೋಡತೊಡಗಿದಳು. ನಾನು ಮೆಲ್ಲಗೆ ಒಂದು ಖುರ್ಚಿಯನ್ನು ಅವಳ ಪಕ್ಕದಲ್ಲಿ ಹಾಕಿಕೊಂಡು ಕುಳಿತೆ. ಸ್ವಲ್ಪ ಹೊತ್ತಾಯಿತು.

"ಏನು ? ಇಷ್ಟು ಹೊತ್ತಾದರೂ ಒಂದು ಪ್ರಾಣಿಯ ಸುಳಿವೂ ಇಲ್ಲ. ನಿಜವಾಗಿ ಪ್ರಾಣಿಗಳು ಬರುತ್ತವೊ ಅಥವಾ ಬರೀ ಕಥೆಗಳೊ ?"

"ಬರುತ್ತವಂತೆ, ಬೇಕಾದಷ್ಟು ಜನ ನೋಡಿದ್ದಾರೆ."

"ಯಾವ ಪ್ರಾಣಿಗಳು ?"

"ಸಿಂಹ........"

"ಇಲ್ಲಿ ಸಿಂಹ ಬರುತ್ತದೆಯೇ ?" ಎಂದು ಅವಳು ನಗಲಾರಂಭಿಸಿದಳು.

"ಆಫ್ರಿಕಾದಲ್ಲಿ ಸಿಂಹಗಳಿವೆ ಅಂತ ಕೇಳಿದ್ದೆ....ಆದರೆ ನಿಜವಾಗಿ...."

"ಓ ಇಲ್ಲ ಇಲ್ಲ...." ಎಂದೆ. ನಾನು ಬಾಯಿತಪ್ಪಿ ಒಂದು ಹೇಳುವು-ದಕ್ಕೆ ಬದಲು ಇನ್ನೊಂದು ಹೇಳಿದ್ದೆ.

"ಸಿಂಹವಲ್ಲ. ಹುಲಿ ಅಂತ ಹೇಳೋಕೆ ಹೋಗಿ ಸಿಂಹ ಅಂದುಬಿಟ್ಟೆ. ಹುಲಿ, ಚಿರತೆ, ಕಿರುಬ ಎಲ್ಲ ಬರುತ್ತೆ. ಆಗಾಗ ನೀರು ಕುಡಿಯೋಕೆ ಆನೆ-ಗಳು ಬರೋದು ಉಂಟು."

"ರಾತ್ರೆಯೆಲ್ಲಾ ಬೇಕಾದರೂ ಇಲ್ಲಿ ಕೂತಿರ್ತೇನೆ. ಅವರಿಗಂತೂ ಅವರ ಕಾಗದ–ಪತ್ರಗಳಿದ್ದರೆ ಮುಗೀತು. ಸಧ್ಯ ಇಲ್ಲಂತೂ ನನಗಿಷ್ಟವಾದ ಕತ್ತಲೆ, ಪ್ರಶಾಂತತೆ ಇದೆ."

ನನಗೆ ಏನು ಹೇಳಬೇಕೋ ತಿಳಿಯಲಿಲ್ಲ. ಅವಳು ಲೇಪಿಸಿಕೊಂಡಿದ್ದ ಸುಗಂಧದಿಂದ ನಾನು ಉನ್ಮತ್ತನಾಗಿದ್ದೆ. ಗಾಜಿನಾಚೆ ದಿಗಂತದಲ್ಲಿ ಚುಕ್ಕಿ-ಗಳು ಮಿನುಗುತ್ತಿದ್ದವು.

"ಆನೆ ಈ ಗಾಜನ್ನು ಒಡೆದು ಒಳಗೆ ಬಂದುಬಿಡೊಲ್ಲವೆ?" ಎಂದಳು ಆಕಳಿಸುತ್ತ.

"ಇಲ್ಲ, ಆ ಕಡೆ ಕಂದಕವಿದೆ. ಬರೋಕಾಗೋದಿಲ್ಲ."

ಹೊರಗೆ ಎಲೆಗಳ ಮಧ್ಯೆ ಕಣ್ಣುಗಳು ಮಿನುಗಿದವು ಅವಳು ನನ್ನ ಷರಟು ಅಲುಗಿಸಿ ಅದು ಪ್ರಾಣಿಯೇ? ಎಂದು ಕೇಳಿದಳು. ಅವಳ ದನಿ.... ಸುತ್ತಲೂ ಕತ್ತಲೆ, ಹೊರಗೆ ಆಕಾಶದಲ್ಲಿ ನಕ್ಷತ್ರಗಳ ಕಾಂತಿ ನನ್ನನ್ನು ಹುಚ್ಚಿಗೆಬ್ಬಿಸಿದ್ದವು.........ಉದ್ವೇಗವನ್ನು ತಾಳಲಾರದೆ ನಾನು ಗಟ್ಟಿಯಾಗಿ ಉಸಿರಾಡಿದಾಗ,

"ನೆಗಡಿಯೆ?" ಎಂದಳು.

"ಇಲ್ಲ" ಎಂದೆ.

"ಹಾಗಾದರೆ ಅದೇನು ಅಷ್ಟು ಜೋರಾಗಿ ಉಸಿರಾಡುತ್ತಿದ್ದೀರಿ?" ಎಂದಾಗ ಅವಳ ಮುಖದ ಬಳಿ ಮುಖವಿರಿಸಿ—

"ನಿನ್ನ ನಾಟ್ಯ ಸೊಗಸಾಗಿತ್ತು. ನಿನಗೆ ದೈವದತ್ತವಾಗಿಯೇ ಬಂದಿದೆ ಆ ಕಲೆ. ಬೇರೆ ಯಾವಾಗಲಾದರೂ ಮಾಡುತ್ತೀಯಾ? ದೇವರು ನಿನಗೆ ಒಳ್ಳೇದು ಮಾಡಲಿ.........ನನ್ನ ಪ್ರಿಯತಮೆಯಾಗುತ್ತೀಯಾ?" ಎಂದೆಲ್ಲ ಹೇಳಬೇಕೆನಿಸಿತು, ಆದರೆ ಹೇಳಲಿಲ್ಲ. ಹಿಂತಿರುಗಿ ನೋಡಿದಾಗ ಮಾರ್ಕೊ ಸಪ್ಪುಳಮಾಡದೆ ಬಂದು ನಿಂತಿದ್ದ.

"ಏನು, ಏನಾದರೂ ಕಾಣಿಸಿತೊ?"

"ಏನೋ ಬಂದಹಾಗಾಯಿತು. ಆದರೆ ಹೊರಟು ಹೋದಹಾಗೆ ಕಾಣುತ್ತೆ. ಕೂತುಕೊಳ್ಳಿ" ಎಂದು ಅವನಿಗೆ ಕುರ್ಚಿ ಕೊಟ್ಟೆ. ಅವನು ಅಲ್ಲಿ ಕುಳಿತು ಗಾಜಿನಿಂದ ನೋಡತೊಡಗಿದ.

ಮಾರನೆಯ ದಿನ ಬೆಳಗಾದಾಗ ಪರಿಸ್ಥಿತಿ ಹಿಂದಿನಂತೆಯೆ ಹದ-ಗೆಟ್ಟಿತ್ತು. ರಾತ್ರಿ ಚದುರಿಹೋಗಿದ್ದ ಕಪ್ಪುಮೋಡ ಮತ್ತೆ ಅವರ ಮನಸ್ಸನ್ನು ಆಕ್ರಮಿಸಿತ್ತು. ಬಾಗಿಲನ್ನು ತೆಗೆದುಕೊಂಡು ಮಾರ್ಕೊ ಮಾತ್ರ ಹೊರಗೆ

ಬಂದ. ಗುಹೆಗೆ ಹೋಗಲು ಸಿದ್ಧನಾಗಿ ಬಂದಹಾಗಿತ್ತು. ನಾನು ಒಲೆ ಹೊತ್ತಿಸಿ ಕಾಫಿ ಮಾಡಿದ್ದೆ. ಬಂದವನೇ ಕಾಫಿಗಾಗಿ ಕೈಚಾಚಿದ. ಲೋಟಕ್ಕೆ ಕಾಫಿ ಬಗ್ಗಿಸಿ ಅವನ ಕೈಗಿತ್ತೆ.

" ಜೋಸೆಫ್ ತಿಂಡಿ ತಂದಿದ್ದಾನೆ, ಸ್ವಲ್ಪ ರುಚಿ ನೋಡೋಲ್ಲವೆ? "

" ಇಲ್ಲ, ಬೇಡ ಆದಷ್ಟು ಬೇಗ ಗುಹೆಗೆ ಹೋಗಬೇಕು. "

" ಆಕೆ ಎಲ್ಲಿ? ಬರಲಿಲ್ಲವಲ್ಲ? "

" ಬರದಿದ್ದರೆ ಹಾಳಾಗಲಿ. ಅವಳಿಗೋಸ್ಕರ ನನ್ನ ಕಾಲ ವ್ಯರ್ಥ ಮಾಡೋಕೆ ನಾನು ಸಿದ್ಧವಾಗಿಲ್ಲ. "

ನಿನ್ನೆ ಬೆಳಿಗ್ಗೆ ಇದ್ದ ಹಾಗೇ ಇವತ್ತೂ. ಬೆಳಗಾಗುವ ಹೊತ್ತಿಗೆ ಇದೊಂದು ರಾಗಾಲಾಪನೆ ಇರಬೇಕೂಂತ ಕಾಣುತ್ತೆ ನಿನ್ನೆ ರಾತ್ರಿ ಅದೆಷ್ಟು ಸಂತೋಷವಾಗಿ ಅವಳ ಪಕ್ಕದಲ್ಲಿ ಬಂದು ಕುಳಿತಿದ್ದೆ. ಬೆಳಿಗ್ಗೆ ಎದ್ದ ತಕ್ಷಣ ಹೀಗೆ ಕಚ್ಚಾಡಬೇಕಾದರೆ ರಾತ್ರಿ ಆಗೋದಾದರೂ ಏನು? ರಾತ್ರಿಯೆಲ್ಲ ಕುಳಿತು ಕಾದಾಡುತ್ತಾರೊ ಅಥವಾ ನಾಟ್ಯದ ವಿಚಾರ ಹೇಳಿ ಹೇಳಿ ಅವಳು ಅವನಿಗೆ ಬೇಸರಪಡಿಸುತ್ತಾಳೊ?

" ಬೆಳಿಗ್ಗೆ ಎದ್ದು ತಕ್ಷಣ ಅವಳು ಹೀಗೆ ಮೂದೇವಿಯ ಹಾಗೆ ಮುದುಡಿ-ಕೊಂಡಿರೋ ಹಾಗೆ ಮಾಡುತ್ತೀಯಲ್ಲ, ನೀನೇನು ಮನುಷ್ಯನೊ? ರಾಕ್ಷ-ಸನೊ? ಮಂಗನ ಕೈಲಿ ಮಾಣಿಕ್ಯ ಕೊಟ್ಟ ಹಾಗಿದೆ, ನಿನ್ನ ಹತ್ತಿರ ಅವ-ಳಿರೋದು " ಎಂದು ಕೂಗಿಬಿಡೋಣವೇ ಎಂದುಕೊಂಡೆ. ಆದರೆ ನನ್ನ ಮನಸ್ಸಿಗೆ ಹುಚ್ಚು ಕಲ್ಪನೆಯೊಂದು ಹೊಳೆಯಿತು. ಒಂದು ವೇಳೆ ನಾನು ಹೋಗಿ ಕರೆಯಲೆಂದು ಅವಳು ಬೇಕು-ಬೇಕೂಂತ ಹೀಗೆ ಮಾಡಿರಬಹುದೆ?

ಕಾಫಿ ಲೋಟವನ್ನು ಕೆಳಗಿಟ್ಟು, " ಇನ್ನು ಹೊರಡೋಣ " ಎಂದನು. ಮತ್ತೆ ಅವಳ ವಿಚಾರ ಕೇಳುವ ಧೈರ್ಯ ನನ್ನಲ್ಲಿರಲಿಲ್ಲ. ಅವನ ಕೈಯ-ಲ್ಲೊಂದು ಬೆತ್ತವಿತ್ತು. ರಾತ್ರಿಯೇನಾದರೂ ಅವಳ ಮೇಲೆ ಅದರ ಪ್ರಯೋಗ ಮಾಡಿದ್ದನೊ! ಆದರೆ ಅವಳನ್ನು ಕರೆಯಲು ಹೋಗಲೆ ಎಂದು ಮಾತ್ರ ಕೇಳಲಿಲ್ಲ.

" ಆಕೆಗೆ ಕಾಫಿ ಇಲ್ಲಿರೊ ವಿಷಯ ಗೊತ್ತಿದೆಯೆ? " ಎಂದೆ.

" ಓಹೋ, ಗೊತ್ತಿಲ್ಲದೆ ಏನು? ಅಲ್ಲಿಟ್ಟು ಬಿಡು. ತನ್ನನ್ನು ತಾನು

ನೋಡಿಕೊಳ್ಳುವಷ್ಟು ವಯಸ್ಸಾಗಿದೆ ಅವಳಿಗೆ."

ನಾವು ಹೊರಗೆ ಹೊರಟೆವು. ಆದರೂ ಒಂದು ಸಲ ಹಿಂತಿರುಗಿ ನೋಡಿದೆ. ಒಂದು ವೇಳೆ ಕಿಟಕಿಯಲ್ಲೇನಾದರೂ ನಿಂತು ನನ್ನನ್ನು ಕರೆದರೆ?

ಎಲ್ಲಾ ಬಿಟ್ಟು ಈ ರಾಕ್ಷಸನ ಸಂಗಡ ತಿರುಗಲು ಇಷ್ಟು ದೂರ ಬರಬೇಕಾಯಿತೆ? ಅವನೊಡನೆ ಬೆಟ್ಟವಿಳಿಯತೊಡಗಿದೆ. ಒಂದು ವೇಳೆ ಕಲ್ಲುಗಿಲ್ಲು ಎಡವಿ ಬೆಟ್ಟದಿಂದ ಅವನು ಉರುಳಿಹೋದರೆ? ಎಂತಹ ಕೆಟ್ಟ ಯೋಚನೆ? ನನಗಿಂತ ಅವನೇ ಮುಂದೆ ನಡೆಯುತ್ತಿದ್ದನು. ಅವನ ಉಡುಪನ್ನು ನೋಡಿದರಂತೂ ಆಫ್ರಿಕಾದ ಬೇಟೆಗಾರನಂತೆಯೇ ಇತ್ತು.

ದಾರಿಯಿದ್ದ ಕಡೆ, ಇಲ್ಲದ ಕಡೆ ನಡೆದು ನಾವು ಕಣಿವೆಯನ್ನು ತಲುಪಿದೆವು. ಗುಹೆ ಸಿಗಲು ಇನ್ನೂ ಅರ್ಧ ದಾರಿ ನಡೆಯಬೇಕಾಗಿತ್ತು. ಅವನು ಜೋರಾಗಿ ನಡೆಯುತ್ತಿದ್ದುದನ್ನು ನೋಡಿ ನನಗೆ ನಿಜವಾಗಿಯೂ ಸಿಟ್ಟು ಬಂತು. ದಾರಿ ತನಗೇ ಗೊತ್ತಿದ್ದವನ ಹಾಗೆ ಮುಂದೆ ಮುಂದೆ ಹೋಗುತ್ತಿದ್ದ. ಅವನು ಆ ಕಾಗದದ ಕಡತವನ್ನು ಎದೆಗಪ್ಪಿಕೊಂಡಂತೆ ಅವಳನ್ನೂ....

ನಾನು ಬೇಕೆಂತಲೇ ಕೇಳಿದೆ :

"ನಿಮಗೆ ದಾರಿ ಗೊತ್ತಿದೆಯೆ?"

"ಇಲ್ಲವಲ್ಲ."

"ನೀವೇ ನನ್ನ ಮಾರ್ಗದರ್ಶಿಯಾಗಿರೋ ಹಾಗಿದೆ." ನನ್ನ ಮಾತಿನ ಅರ್ಥವನ್ನರಿತು ಒಂದು ಪಕ್ಕಕ್ಕೆ ಸರಿದ.

"ಓಹೊ, ಹಾಗೊ ಸರಿ. ಹಾಗಾದರೆ ನೀವೇ ದಾರಿ ತೋರಿಸಿ" ಎಂದು ಸಂಬಂಧವಿಲ್ಲದಂತೆ ಹೇಳಿದ

"ಕರುಣಾಳು ಬಾ ಬೆಳಕೆ."

ಲಾಂಟಾನ ಪೊದೆಗಳ ಹಿಂದಿದ್ದವು ಗುಹೆಗಳು. ದೊಡ್ಡ ಬಾಗಿಲು ತೆಗೆದೇ ಇತ್ತು. ಒಂದೇ ಬಂಡೆಯನ್ನು ಕೊರೆದು ಮಾಡಿದ ಗುಹೆ. ಅಲ್ಲಲ್ಲಿ ಬಣ್ಣ ಬಿದ್ದುಹೋಗಿತ್ತು. ಎಲ್ಲಾ ಬಿಟ್ಟು ಇಂತಹ ನಿರ್ಜನ ಪ್ರದೇಶದಲ್ಲಿ ಆ ಗುಹೆಯನ್ನು ಯಾಕಾವರೂ ಕಟ್ಟಿದರೊ ಪರಮೇಶ್ವರನೇ ಬಲ್ಲ.

ಹೊರಗೇ ನಿಂತು ಗುಹೆಯನ್ನು ವೀಕ್ಷಿಸಿದ. "ಇಲ್ಲಿ ನೋಡು, ಈ ಬಾಗಿಲು–ಗೀಗಿಲು ಎಲ್ಲಾ ಈಚೀಚೆಗೆ ಮಾಡಿರಬೇಕು. ಗುಹೆ ಮಾತ್ರ

ಸುಮಾರು ಕ್ರಿ. ಶ. ಪೂ. ಒಂದನೇ ಶತಮಾನದ್ದು. ಅಲ್ಲಿ ನೋಡು, ಅಂತಹ ಎತ್ತರವಾದ ದ್ವಾರ ಆ ಶತಮಾನದಲ್ಲಿರಲಿಲ್ಲ. ಅದು ಬಂದಿದ್ದು ಸುಮಾರು ಏಳು–ಎಂಟನೇ ಶತಮಾನದಲ್ಲಿ. ಆಗ ದಕ್ಷಿಣ ಭಾರತದ ರಾಜರುಗಳು........" ಅವನು ಮಾತಾಡುತ್ತಲೇ ಇದ್ದ. ಜೀವವಿಲ್ಲದ ನಿರ್ಜೀವ ವಸ್ತುಗಳನ್ನು ಕಂಡರೆ ಅವನ ಕಲ್ಪನೆಗೆ ರೆಕ್ಕೆ ಬರುತ್ತಿತ್ತು. ಹೊಸ ಚೈತನ್ಯ ಅವನನ್ನು ಹುರಿದುಂಬಿಸುತ್ತಿತ್ತು. ಆದರೆ ಜೀವಂತ ಪ್ರಾಣಿಗಳ ಎದುರಿನಲ್ಲಿ ಅವನೊಬ್ಬ ಮೂಕವಸ್ತು. ನಾನಂತೂ ಅವನಿಗೆ ಮಾರ್ಗದರ್ಶನ ಮಾಡುವ ಹಾಗೇ ಇರಲಿಲ್ಲ. ಪ್ರತಿಯೊಂದರ ವಿಷಯವನ್ನೂ ಅವನು ತಿಳಿದುಕೊಂಡಿದ್ದ.

ಒಳಗೆ ಹೋದ ಮೇಲಂತೂ ಅವನಿಗೆ ಹೊರಗಿನ ಪ್ರಪಂಚ ಮರೆತೇ ಹೋಯಿತು. ಗುಹೆ ಒಳಗಡೆ ಎತ್ತರವಾಗಿರಲಿಲ್ಲ. ಆದರೆ ಗೋಡೆಯಲ್ಲಿ ಒಂದಿಂಚೂ ಜಾಗವಿಲ್ಲದ ಹಾಗೆ ಚಿತ್ರಕಲೆ. ಜೇಬಿನಿಂದ ಟಾರ್ಚ ತೆಗೆದು ಗೋಡೆಯ ಮೇಲೆ ಬೆಳಕು ಬಿಟ್ಟ. ಕನ್ನಡಿಯನ್ನು ಹೊರತೆಗೆದು ಆಚೆಯಿಟ್ಟು ಅದರಲ್ಲಿ ಪ್ರತಿಬಿಂಬವಾಗುವ ಬೆಳಕು ಆ ಚಿತ್ರಗಳ ಮೇಲೆ ಬೀಳುವ ಹಾಗೆ ಮಾಡಿದ. ಬಾವಲಿಗಳು ಒಳಗೆ ಬಹಳ ಸದ್ದು ಮಾಡುತ್ತಿದ್ದವು. ನೆಲವೆಲ್ಲ ಬಿರುಕು ಬಿಟ್ಟಿತ್ತು. ಕೆಲವು ಚಿತ್ರಗಳ ಅಳತೆ ತೆಗೆದುಕೊಂಡ. ಇನ್ನು ಕೆಲವು ಚಿತ್ರಗಳನ್ನು ಕುರಿತು ಏನನ್ನೋ ಬರೆದುಕೊಂಡ. ಕೆಲವು ಚಿತ್ರಗಳ ಫೋಟೋ ತೆಗೆದುಕೊಂಡ ಒಂದೊಂದು ಚಿತ್ರವನ್ನೂ ಕುರಿತು ದೊಡ್ಡ ಉಪನ್ಯಾಸ-ವನ್ನೇ ಕೊಡತೊಡಗಿದ. ಆದರೆ ನಾನು ಮಾತ್ರ ಗಮನವಿಟ್ಟು ಕೇಳು-ತ್ತಿರಲಿಲ್ಲ.

ನನಗಂತೂ ಆ ಪಾಳು ದೇಗುಲಗಳ ಹವ್ಯಾಸ, ಹುಚ್ಚು ಹಿಡಿಸತೊಡ-ಗಿತು. ಗೋಡೆಗಳ ಮೇಲಿದ್ದುದು ರಾಮಾಯಣ, ಮಹಾಭಾರತದ ಕಥೆ-ಗಳು. ಗತಕಾಲದ ವೈಭವವೇ ಆಗಿತ್ತು ಅವುಗಳ ಸ್ಥಿತಿ ನನಗಂತೂ ಅವು-ಗಳಲ್ಲಿ ಆಸಕ್ತಿ ಉಂಟಾಗುವುದೂ ಸಾಧ್ಯವಿರಲಿಲ್ಲ. ಹಾಗೆಯೇ ಅವನಿಗೆ ಅವುಗಳನ್ನು ಬಿಟ್ಟು ಬೇರೆಯದರಲ್ಲಿ ಆಸಕ್ತಿ ಬರುವುದು ಸಾಧ್ಯವಿರಲಿಲ್ಲ

"ಹುಷಾರು, ಹುಳು–ಹುಪ್ಪಡಿ ಇದ್ದೀತು........" ಎಂದೆ ನಾನು

"ಓ ಹುಳು–ಹುಪ್ಪಡಿ ಇಲ್ಲೆಲ್ಲಾ ಬರೋಲ್ಲ. ಒಂದು ವೇಳೆ ಬಂದರೂ ಈ ಕೋಲಿದೆಯಲ್ಲ ಪರವಾಗಿಲ್ಲ" ಎಂದ ಅವನು.

"ಯಾವುದೋ ಕಾರು ಬರೋಹಾಗಿದೆ. ಗಫೂರ್ ಏನಾದರೂ ಕಾರು ತಂದಿದ್ದರೆ ಒಂದು ನಿಮಿಷ ಬಂಗಲೆಗೆ ಹೋಗಿ ಬಂದುಬಿಡುತ್ತೇನೆ" ಎಂದೆ.

"ಪರವಾಗಿಲ್ಲ ಹೋಗು.........ಆದರೆ ಅವನನ್ನು ಕಳಿಸಿಬಿಡಬೇಡ."

"ಇಲ್ಲ, ಆದರೆ ಹುಷಾರು. ಬರೋವಾಗ ಹೀಗೇ ಬನ್ನಿ. ಇಲ್ಲದೇ ಹೋದರೆ ನಾನೊಂದು ಕಡೆ, ನೀವೊಂದು ಕಡೆ ಆದೀತು."

ಅವನು ಬದಲು ಹೇಳಲಿಲ್ಲ. ಚಿತ್ರಗಳಲ್ಲಿ ಮಗ್ನನಾದ. ನಾನು ಓಡಿ-ಹೋಗಿ ಬಂಗಲೆ ಸೇರಿದೆ. ಓಡಿ ಬಂದ ರಭಸಕ್ಕೆ ಮೇಲುಸಿರು ಬರುತ್ತಿತ್ತು. ಕೈಯಿಂದ ತಲೆಗೂದಲನ್ನು ಹಿಂದಕ್ಕೆ ಮಾಡಿಕೊಂಡು ಒಳಗೆ ಹೋಗುವವ-ನಿದ್ದೆ. ಅಷ್ಟರಲ್ಲೆ ಅವಳ ಧ್ವನಿ ಕೇಳಿಸಿತು "ನನ್ನ ಹುಡುಕುತ್ತ ಇದ್ದೀರಾ?" ರೋಜಿ ಮರದ ನೆರಳಿನಲ್ಲಿ ಕುಳಿತಿದ್ದಳು. ನಾನು ಬೆಟ್ಟ ಹತ್ತಿ ಬಂದದ್ದನ್ನು ಅವಳು ನೋಡಿರಬೇಕು.

"ನೀವು ಅರ್ಧ ಮೈಲಿ ದೂರದಲ್ಲಿ ಬರೋವಾಗಲೇ ನೋಡಿದೆ."

"ಹೌದು, ನೀನು ಬೆಟ್ಟದ ಮೇಲಿದ್ದೆ. ನಾನು ಕೆಳಗಿನಿಂದ ಬರ-ಬೇಕಾಗಿತ್ತು" ನಾನು ಅವಳ ಹತ್ತಿರವಿದ್ದ ಕಲ್ಲಿನ ಮೇಲೆ ಕುಳಿತೆ.

"ನೀವು ಒಬ್ಬರೇ ಬಂದಿರಲ್ಲ? ಅವರೇನು ಗೋಡೆ ವೀಕ್ಷಣೇಲಿ ತೊಡಗಿದ್ದಾರೊ?"

"ಹೌದು."

"ಅಂತೂ ಹೋದ ಕಡೇಲೆಲ್ಲಾ ಅವರಿಗೆ ಇದೇ ಕೆಲಸ."

"ಅವರಿಗೆ ಅದರಲ್ಲಿ ಆಸಕ್ತಿ. ಏನು ಮಾಡೋದು?"

"ನನಗೆ ಅದರಲ್ಲಿ ಆಸಕ್ತಿ ಇಲ್ಲವಲ್ಲ. ಏನು ಮಾಡೋದು?"

"ಹಾಗಾದರೆ ನಿಮಗೆ ಯಾವುದರಲ್ಲಿ ಆಸಕ್ತಿ ಇದೆ?"

"ಆ ನಿರ್ಜೀವ ಕಲ್ಲುಗಳನ್ನು ಬಿಟ್ಟರೆ ಬೇರೆ ಎಲ್ಲಾದರಲ್ಲೂ ಆಸಕ್ತಿ ಇದೆ."

ನಾನು ಗಡಿಯಾರವನ್ನು ನೋಡಿದೆ ಗುಹೆಯಿಂದ ಹೊರಟು ಬಂದು ಆಗಲೇ ಒಂದು ಘಂಟೆಯಾಗಿತ್ತು. ಇನ್ನು ಸುಮ್ಮನೆ ಹೊತ್ತು ಕಳೆಯುವ ಹಾಗಿರಲಿಲ್ಲ ಸ್ವರ್ಗದ ಆಸೆ ಇದ್ದರೆ ಇಂತಹ ಸಂದರ್ಭವನ್ನು ಬಿಡಬಾರದು. ಇದ್ದ ಧೈರ್ಯವನ್ನೆಲ್ಲಾ ಒಟ್ಟುಗೂಡಿಸಿ ಕೇಳಿದೆ:

" ರಾತ್ರಿಯೆಲ್ಲಾ ಕೂತು ಜಗಳವಾಡುತ್ತೀರಾ ? "

" ಸಾಮಾನ್ಯವಾಗಿ ನಾವು ನಾವೇ ಇದ್ದಾಗ ಮಾತಾಡಿದರೆ ಜಗಳ-ವಾಗಿಬಿಡುತ್ತೆ. ನಾನು ಏತಿ ಅಂದರೆ ಅವರು ಪ್ರೇತಿ."

" ನಿಮ್ಮೊಡನೆ ನಿಜವಾಗಿ ಅದು ಹೇಗಾದರೂ ಜಗಳವಾಡುತ್ತಾರೊ ಏನೊ ? ಜವಹಿರಿಯ ಜೊತೆ ಜಗಳವೆ ? "

" ಅಂದರೆ ? "

ಹಾಗೆಂದರೇನೆಂದು ಯಾವ ಮುಚ್ಚುಮರೆಯೂ ಇಲ್ಲದೆ ಅವಳಿಗೆ ತಿಳಿ-ಸಿದೆ. ನನ್ನ ನಾಶವಾದರೂ ಚಿಂತಿಲ್ಲ, ಅವಳಿಗೆ ಹೇಳಲೇಬೇಕೆಂದು ಹಟ-ತೊಟ್ಟು ಹೇಳಿದೆ. ಹೇಳುವುದನ್ನೆಲ್ಲಾ ಕೇಳಿದ ಮೇಲೆ ಬೇಕಾದರೆ ನನ್ನನ್ನು ಹೊರಗೆ ದಬ್ಬಿಬಿಡಲಿ. ನನ್ನ ಮನಸ್ಸಿನಲ್ಲಿದ್ದುದನ್ನೆಲ್ಲ ಹೇಳಿದೆ. ಅವಳ ನಾಟ್ಯವನ್ನು ಹೊಗಳಿದೆ. ಅವಳ ಬಗ್ಗೆ ನನ್ನ ಪ್ರೇಮವನ್ನು ಅರುಹಿದೆ. ಆದರೆ ಆ ಪ್ರೇಮ ಅವಳ ಬಗ್ಗೆಯೊ ಅಥವಾ ಅವಳ ನಾಟ್ಯದ ಬಗ್ಗೆಯೊ ಎನ್ನುವುದನ್ನು ಮಾತ್ರ ಸ್ಪಷ್ಟಪಡಿಸದೆ ಎಚ್ಚರದಿಂದಿದ್ದೆ.

ಎಂತಹ ಕಲಾವಿದೆ ಎಂದು ಆರಂಭ ಮಾಡಿ ಎಲ್ಲ ಪ್ರಿಯತಮೆಯರಿಗೂ ಇದು ಸಾಧ್ಯವೇ ಎಂದು ಮುಗಿಸಿದೆ.

" ರಾತ್ರಿಯೆಲ್ಲ ನಿನ್ನ ನಾಟ್ಯವೇ ಕಣ್ಣಮುಂದೆ ಬಂದು ಕುಣಿಯುತ್ತಿತ್ತು. ಹಗಲೂ–ರಾತ್ರಿ ನಿಮ್ಮದೇ ಚಿಂತೆ........"

ನನ್ನ ಎಣಿಕೆ ತಪ್ಪಾಗಲಿಲ್ಲ, ನನ್ನ ಮಾತು ಅವಳಿಗೆ ಹಿಡಿಸಿತು

" ನೀವು ನನ್ನ ಅಣ್ಣನ ಹಾಗೆ........" (ಛೆ, ಅಣ್ಣನಂತೆ ಅಣ್ಣ........ ಅಲ್ಲ ನಾನು ನಿನ್ನ ಅಣ್ಣನಲ್ಲ ಎಂದು ಕೂಗಬೇಕೆನಿಸಿತು).

" ಏನಾಗುತ್ತೆ ಅಂತ ಹೇಳುತ್ತೇನೆ " ಎಂದು ಅವರ ದಿನನಿತ್ಯದ ಜಗಳ-ವನ್ನೆಲ್ಲಾ ನನಗೆ ಹೇಳಿದಳು.

" ಹಾಗಾದರೆ ನೀವು ಅವರನ್ನು ಯಾಕೆ ಮದುವೆ ಮಾಡಿಕೊಂಡಿರಿ ? " ಒಂದು ನಿಮಿಷ ಸುಮ್ಮನಿದ್ದು ಅನಂತರ—

" ಯಾಕೆ ಅಂತ ಹೇಳಲಾರೆ. ಅಂತೂ ಮದುವೆಯಾಯಿತು."

" ಅವರ ದುಡ್ಡಿಗಾಗಿ ಮದುವೆಯಾಯಿತು. ನಿಮ್ಮ ಸೋದರ ಮಾವಂ-ದಿರು ಉಪದೇಶ ಮಾಡಿದರು ಅಲ್ಲವೆ ? "

"ಇಲ್ಲಿ ನೋಡಿ........ನಾನು ಯಾವ ಜಾತಿಯವಳು ಅನ್ನೋದು ಗೊತ್ತೆ ?"

ಅವಳನ್ನು ಆಪಾದಮಸ್ತಕ ನೋಡಿದೆ.

"ಯಾವ ಜಾತಿಯೇ ಆಗಲಿ, ಅಂತೂ ಅಪ್ಸರ ಜಾತಿ. ನನಗೆ ಜಾತಿ–ಗೀತಿ ಮುಖ್ಯವಲ್ಲ. ಮನುಷ್ಯನ ಗುಣ ಮುಖ್ಯ. ನೀವು ಯಾವ ಜಾತಿ-ಯವರೇ ಆಗಿರಿ, ಅಂತೂ ಆ ಜಾತಿಗೆ ನೀವೊಂದು ಭೂಷಣ."

"ನಾನೊಬ್ಬ........ದೇವದಾಸಿ. ನನ್ನ ತಾಯಿ, ಅಜ್ಜಿ, ಮುತ್ತಜ್ಜಿ ಎಲ್ಲಾ ಅವರೆ. ಸಣ್ಣ ಹುಡುಗಿಯಿದ್ದಾಗ ಸಹ ನಾನು ನಮ್ಮ ಹಳ್ಳಿಯ ದೇವಸ್ಥಾನದಲ್ಲಿ ನಾಟ್ಯವಾಡುತ್ತಿದ್ದೆ. ನಮ್ಮ ಜಾತಿಯ ಬಗ್ಗೆ ಜನ ಏನನ್ನು-ತ್ತಾರೆ ಗೊತ್ತೆ ?"

"ಏನಾದರೂ ಅನ್ನಲಿ, ಅಂತೂ ನೀವಿರೋ ಜಾತಿ–ಜಾತಿಗಳಲ್ಲೆಲ್ಲಾ ಉತ್ಕೃಷ್ಟ ಜಾತಿ."

"ನಾವು ವೇಶ್ಯೆಯರು. ನಮಗೆ ಸಮಾಜದಲ್ಲಿ ಗೌರವವಿಲ್ಲ. ಮರ್ಯಾದೆ ಇಲ್ಲ."

"ಅದೆಲ್ಲ ಕಂತೆಪುರಾಣ. ನೂರು ವರುಷಗಳ ಹಿಂದಿನ ಮಾತಾ-ಯಿತು. ಆವಾಗ ಹಾಗಿದ್ದಿರಬಹುದು. ಆದರೆ ಈಗಿಲ್ಲ. ಈಗ ಕಾಲ ಬದ-ಲಾಗಿದೆ. ಈಗ ಜಾತಿ-ಗೀತಿ ಜನಕ್ಕೆಲ್ಲ ಬೇಡವಾಗಿದೆ."

"ಆದರೆ ನಮ್ಮಮ್ಮ ನನಗೆ ಜೀವನದಲ್ಲಿ ಬೇರೆ ದಾರಿಯನ್ನು ತೋರಿ-ಸಿದಳು. ಚಿಕ್ಕವಳಾಗಿದ್ದಾಗಲೇ ಶಾಲೆಗೆ ಹಾಕಿದಳು. ಚೆನ್ನಾಗಿ ಓದಿ ಅರ್ಥ-ಶಾಸ್ತ್ರದಲ್ಲಿ ಎಂ. ಎ. ಪಾಸುಮಾಡಿದೆ. ಆದರೆ ಕಾಲೇಜು ಓದು ಮುಗಿದ ಮೇಲೆ ನಾನು ನಾಟ್ಯವಿಶಾರದೆಯಾಗಿ ರಂಗಭೂಮಿಯ ಮೇಲೆ ಶೋಭಿಸ-ಬೇಕೋ ಬೇಡವೋ ಅನ್ನುವ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದಿತ್ತು. ಒಂದು ದಿನ ಪೇಪರಿನಲ್ಲಿ ಒಂದು ಪ್ರಕಟಣೆಯನ್ನು ನೋಡಿದೆ. ಅದರಲ್ಲೇನೂ ಅಂತಹ ವಿಷಯವಿರಲಿಲ್ಲ. ನೀವೂ ನೋಡಿರಬಹುದು."

"ಬೇಕಾಗಿದೆ."

"ಚಾರಿತ್ರಕ ಶೋಧನೆಯಲ್ಲಿ ಅಭಿರುಚಿಯುಳ್ಳ ವಿದ್ಯಾವಂತ, ಹಣ-ವಂತ ಯುವಕನಿಗೆ, ವಿದ್ಯಾವಂತ ಸುಂದರ ಕನ್ಯೆ ಬೇಕಾಗಿದೆ. ಜಾತಿ–ಭೇದ-

ವಿಲ್ಲ. ರೂಪ, ವಿದ್ಯೆ ಅತ್ಯವಶ್ಯ" ನಾನು ನನ್ನನ್ನೇ ಪ್ರಶ್ನಿಸಿಕೊಂಡೆ—

"ನನಗೆ ರೂಪವಿದೆಯೆ?"

"ಇಲ್ಲ ಎಂದವನ ಬಾಯಲ್ಲಿ ಹುಳು ಬಿದ್ದೀತು" ಎಂದೆ ನಾನು.

"ಸರಿ, ಕಾಲೇಜು ವ್ಯಾಸಂಗ ಮುಗಿಸಿದ್ದರ ಸರ್ಟಿಫಿಕೇಟ್ ಕೈಯಲ್ಲಿ ಹಿಡಿದುಕೊಂಡು ಫೋಟೋ ತೆಗೆಸಿಕೊಂಡು ಆ ಪೇಪರಿನವನಿಗೆ ಕಳಿಸಿದೆ. ನಮ್ಮಿಬ್ಬರ ಭೇಟಿಯಾಯಿತು. ನನ್ನ ಪರೀಕ್ಷೆಯೂ ಆಯಿತು. ರಿಜಿಸ್ಟ್ರಾರರ ಆಫೀಸಿಗೆ ಹೋಗಿ ಮದುವೆ ಮಾಡಿಕೊಂಡೆವು."

"ಅವರನ್ನು ನೋಡಿದಾಗ ನಿಮಗೆ ಇಷ್ಟವಾಯಿತೆ?"

"ಅದನ್ನೆಲ್ಲಾ ಈಗ ಕೇಳಬೇಡಿ. ಅಂತೂ ಒಂದು ನಿರ್ಧಾರಕ್ಕೆ ಬರಲು ಬೇಕಾದಷ್ಟು ಚರ್ಚೆಯಾಯಿತು. ನನ್ನ ಜಾತಿಯೇನು? ಕುಲವೇನು? ಆರ್ಥಿಕ ಸ್ಥಿತಿಯೇನು? ಅವರ ರೀತಿ-ನೀತಿಯೇನು? ಅಂತೂ ಒಂದನ್ನೂ ಬಿಡದೆ ಚರ್ಚೆ ಮಾಡಿದೆವು. ಆದರೆ ನಮ್ಮ ಮನೆಯವರು ಮಾತ್ರ ಅಂತಹ ಮನುಷ್ಯ ನನ್ನ ಕೈಹಿಡಿಯಬೇಕಾದರೆ ನನ್ನ ಅದೃಷ್ಟಕ್ಕೆ ಎಣೆಯೇ ಇಲ್ಲ ಎಂದರು. ಜೊತೇಲೇ ನಮ್ಮ ಕುಲ-ಧರ್ಮಾನೂ ಬಿಟ್ಟುಬಿಡಬೇಕು ಅಂದರು. ಅಂತಹವನ ಕೈಹಿಡಿದ ಮೇಲೂ ಗೆಜ್ಜೆ ಕಟ್ಟಿಕೊಂಡು ಕುಣಿಯೋದೆ? ಅಂದರು. ಅವರಿಗಂತೂ ಭಾರೀ ಬಂಗಲೆ, ಭಾರೀ ಮೋಟಾರುಕಾರು........ ಮದರಾಸಿನ ಹೊರಗೊಂದು ಅರಮನೆಯಂತಹ ಮನೆ.... ...ಆಸ್ತಿ-ಪಾಸ್ತಿ ಸ್ಥಾನ-ಮಾನ ಎಲ್ಲಾ ಇತ್ತು. ಅಷ್ಟೆಲ್ಲಾ ಇದ್ದರೂ ಅವರಿದ್ದುದು ಒಬ್ಬರೆ. ಅವರ ಜೊತೆಗೆ ಇದ್ದುದು ಅಂದರೆ ಅವರ ಕಾಗದ-ಪತ್ರ ಪುಸ್ತಕ."

"ಓಹೋ ಹಾಗಾದರೆ ಅತ್ತೆಯಿಲ್ಲ."

"ಈ ಜೀವವಿಲ್ಲದ ಕಲ್ಲುಗೋಡೆಗಳಿಗಿಂತ, ಜೀವವಿರುವ ಅತ್ತೆಯಿದ್ದಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು."

ಅವಳ ಕಥೆ ಕೇಳಿ ನಾನು ನಿಟ್ಟುಸಿರುಬಿಟ್ಟೆ. ಅವಳ ಹೆಗಲ ಮೇಲೆ ಕೈಯಿಟ್ಟು ಮೆದುವಾಗಿ ನೀವಿದೆ.

"ಗಿಣೀನ ಸಾಕಿ ಬೆಕ್ಕಿಗೆ ಕೊಟ್ಟಹಾಗಾಯಿತು. ನಾನೇನಾದರೂ ಅವನ ಸ್ಥಾನದಲ್ಲಿದ್ದಿದ್ದರೆ ನಿನ್ನನ್ನು ಈ ಪ್ರಪಂಚಕ್ಕೆಲ್ಲಾ ರಾಣಿಯಾಗಿ ಮಾಡುತ್ತಿದ್ದೆ" ಎಂದೆ........ನನ್ನ ಏಕವಚನದ ಪ್ರಯೋಗದಿಂದ ಅವಳು

ಸಿಟ್ಟುಗೊಳ್ಳಲಿಲ್ಲ. ಅವಳ ಹೆಗಲ ಮೇಲಿದ್ದ ನನ್ನ ಕೈಯನ್ನು ತಳ್ಳಲೂ ಇಲ್ಲ. ನಾನು ಹಾಗೇ ಅವಳ ಕೂದಲ ಮೇಲೆ ಕೈಯಾಡಿಸತೊಡಗಿದೆ. ಆ ಮಾದಕ ಸುಗಂಧದಲ್ಲಿ ಮೈಮರೆತೆ.

ಗಫೂರನ ಕಾರು ಬರಲೇ ಇಲ್ಲ. ದಾರಿಹೋಕನೊಬ್ಬ ದಾರಿಯಲ್ಲಿ ಗಫೂರನ ಕಾರು ಕೆಟ್ಟುಹೋದ ಸುದ್ದಿಯನ್ನು ತಂದು ಅದು ಮಾರನೆಯ ದಿನ ಬರುವುದಾಗಿ ಹೇಳಿದ. ಅದು ಬರದಿದ್ದುದರಿಂದ ಯಾರಿಗೂ ನಷ್ಟ-ವಾಗಲಿಲ್ಲ. ಜೋಸೆಫ್‌ನ ಆತಿಥ್ಯದಲ್ಲಿ ನಾವು ಸುಖವಾಗಿ ಇದ್ದೆವು. ಮಾರ್ಕೊಗೆ ಗೋಡೆಯ ಮೇಲಿನ ನಿರ್ಜೀವ ವಸ್ತುಗಳನ್ನು ವೀಕ್ಷಿಸಲು ಇನ್ನಷ್ಟು ಕಾಲ ಸಿಕ್ಕಿತು. ನನಗಂತೂ ಯಾವುದರ ಯೋಚನೆಯೂ ಇರ-ಲಿಲ್ಲ. ರಾತ್ರಿಯಾಗುವುದನ್ನು ಎದುರು ನೋಡುತ್ತಿದ್ದು ಬಂಗಲೆಯ ವರಾಂಡ-ದಲ್ಲಿ ಕುಳಿತು ರೋಜಿಯ ಕೈಹಿಡಿದುಕೊಂಡು ಹೊರಗಿನ ರಮಣೀಯತೆ-ಯನ್ನು ನೋಡುತ್ತಿದ್ದೆ. ಮಾರ್ಕೊ ರೂಮಿನೊಳಗೆ ಕುಳಿತು ಪುಸ್ತಕಗಳಲ್ಲಿ ಮಗ್ನನಾಗಿರುತ್ತಿದ್ದ.

ಗಫೂರನ ಕಾರು ಬಂದಿತು. ಆದರೆ ಹೊರಡಲು ಮಾರ್ಕೊ ಸಿದ್ಧ-ನಾಗಿರಲಿಲ್ಲ.

"ನಾನು ಅಂದುಕೊಂಡದ್ದಕ್ಕಿಂತ ಸ್ವಲ್ಪ ಹೆಚ್ಚು ದಿನಾನೇ ಇಲ್ಲಿ ಇರ-ಬೇಕಾಗಿ ಬರಬಹುದು. ಆ ಹೋಟಲಿನಿಂದ ನನ್ನ ಟ್ರಂಕು ತಂದುಬಿಡು-ತ್ತೀರಾ? ಅದರಲ್ಲಿ ಏನೋ ಸ್ವಲ್ಪ ಕಾಗದಗಳಿವೆ. ನೀವು ಇದ್ದರೆ ಒಳ್ಳೇದು. ಆದರೆ ನಿಮ್ಮ ವ್ಯಾಪಾರಕ್ಕೆ ತೊಂದರೆಯಾಗೋ ಹಾಗಿದ್ದರೆ ಬೇಡ."

ನಾನು ಒಡನೆಯೇ ಉತ್ತರ ಕೊಡಲಿಲ್ಲ. ಅವಳ ಕಡೆ ನೋಡಿದೆ. 'ಇರು' ಎನ್ನುತ್ತಿತ್ತು ಅವಳ ಕಣ್ಣಿನ ನೋಟ. ನಾನು ಇರಲೊಪ್ಪಿದೆ.

ಇನ್ನೇನು ನಾನು ಕಾರಿಗೆ ಹತ್ತಬೇಕೆನ್ನುತ್ತಿರುವಾಗ "ನಾನೂ ಊರೊಳಗೆ ಹೋಗಿ ಬರಲೆ? ನನಗೂ ಸ್ವಲ್ಪ ಸಾಮಾನು ಬೇಕಾಗಿವೆ" ಎಂದಳು.

"ಇವತ್ತು ರಾತ್ರೇನೇ ಬಂದುಬಿಡೋಕೆ ಆಗುತ್ತೋ ಇಲ್ಲವೊ" ಎಂದು ನಾನು ಸೇರಿಸಿದೆ.

ಅದಕ್ಕೆ ಮಾರ್ಕೊ ಹೆಂಡತಿಯ ಕಡೆ ತಿರುಗಿ—

" ರಾತ್ರಿ ಅಲ್ಲೇ ಇರೋಕೆ ಆಗುತ್ತಿಯೆ ? " ಎಂದ.

" ಪರವಾಗಿಲ್ಲ, ಹೇಗೋ ಮಾಡಿಕೊಂಡರಾಯಿತು " ಎಂದಳು ರೋಜಿ.

ಬೆಟ್ಟವನ್ನು ಇಳಿಯುತ್ತಿರುವಾಗ ಕಾರಿನ ಕನ್ನಡಿಯಲ್ಲಿ ಗಫೂರ್ ನಮ್ಮನ್ನೇ ನೋಡುತ್ತಿರುವುದು ಕಂಡಿತು.

ಅವನಿಗೆ ಕಾಣದ ಹಾಗೆ ಕುಳಿತುಕೊಂಡೆವು. ಹೋಟಲಿಗೆ ಹೋಗಿ ಸೇರುವ ಹೊತ್ತಿಗೆ ಸಂಜೆಯಾಗಿತ್ತು. ರೋಜಿ ತನ್ನ ರೂಮಿಗೆ ಹೊರಟಳು. ನಾನು ಹಿಂಬಾಲಿಸಿದೆ.

" ಇವತ್ತು ರಾತ್ರೇನೇ ಹೊರಟುಬಿಡಬೇಕೆ ? "

" ಯಾಕೆ ? "

" ಯಾಕೂ ಇಲ್ಲ. ದಾರೀಲಿ ಕಾರು ಕೆಟ್ಟು-ಗಿಟ್ಟು ಹೋದೀತು ಅಂತ ಅಷ್ಟೆ. ನಾನೂ ಬೇಕಾದರೆ ಇಲ್ಲೇ ಇರುತ್ತೇನೆ" ಬಟ್ಟೆ ಬದಲಾಯಿಸಿ ಬರಲು ಮನೆಗೆ ಹೋದೆ.

ಅಮ್ಮ ನನಗೆ ಬೇಕಾದಷ್ಟು ಸಮಾಚಾರವನ್ನು ಹೇಳಬೇಕೆಂದಿದ್ದಳು. ಸಾಲದ್ದಕ್ಕೆ ನಾನು ಎರಡು ದಿನಗಳಿಂದ ಎಲ್ಲಿಗೆ ಹೋಗಿದ್ದೆನೆಂಬ ಪ್ರಶ್ನೆ ಬೇರೆ. ನಾನು ಅದಾವುದಕ್ಕೂ ಕಿವಿಗೊಡಲಿಲ್ಲ. ಮುಖ ತೊಳೆದು ತಲೆ ಬಾಚಿ-ಕೊಂಡು ಅಗಸನಿಂದ ಬಂದ ಉಡುಪು ತೆಗೆದೆ. ಮಾಸಿದ್ದ ಉಡುಪನ್ನೆಲ್ಲಾ ಒಂದು ಗಂಟು ಕಟ್ಟಿ ಅಮ್ಮನ ಕೈಗೆ ಕೊಟ್ಟು ಅಗಸನಿಗೆ ಕೊಡಹೇಳಿದೆ.

" ಓಹೋ........ಏನು ಬರುಬರುತ್ತಾ ಸೊಗಸುಗಾರ ಪುಟ್ಟಸ್ವಾಮಿ-ಯಾಗುತ್ತಾ ಇದ್ದೀಯೆ ? " ಎಂದಳು ಅಮ್ಮ. ಏನೋ ಒಂದು ಕುಂಟ ನೆಪ ಹೇಳಿ ಅವಳಿಂದ ತಪ್ಪಿಸಿಕೊಂಡು ಹೊರಗೋಡಿದೆ.

ಊರಿನಲ್ಲಿ ಸುತ್ತು ಹೊಡೆಯುವುದಕ್ಕೆ ಗಫೂರನನ್ನೇ ಶರಣು ಹೋಗ-ಬೇಕಾಯಿತು. ಅಂದು ನಿಜವಾಗಿ ನಾನು ಮಾರ್ಗದರ್ಶಿಯಾಗಿದ್ದೆ. ಯಾರಿಗೂ ಎಂದೂ ಅಷ್ಟು ಹುಮ್ಮಸ್ಸಿನಿಂದ ಊರು ತೋರಿಸಿರಲಿಲ್ಲ. ರೋಜಿಯನ್ನು ಪ್ರತಿಯೊಂದು ಕಡೆಗೂ ಕರೆದುಕೊಂಡು ಹೋದೆ. ಪುರಭವನ, ಸರಯೂ ನದಿ........ಅಂಗಡೀ ಬೀದಿ. ಅವಳಿಗೆ ಏನು ಬೇಕೋ ಎಲ್ಲವನ್ನೂ ಕೊಂಡು-ಕೊಳ್ಳ ಹೇಳಿದೆ. ರೋಜಿಗಾದ ಆನಂದ ಅಷ್ಟಿಷ್ಟಲ್ಲ. ಸ್ವರ್ಗವೇ ಭೂಮಿ-ಗಿಳಿದು ಬಂದಹಾಗಿತ್ತು ಅವಳಿಗೆ. ಒಂದು ನಿಮಿಷ ಅಂಗಡಿಯ ಹೊರಗೆ

ನಾನೊಬ್ಬನೆ ಬಂದಾಗ ಗಫೂರ್ ನನ್ನನ್ನು ಎಚ್ಚರಿಸಿದ.

"ಹುಷಾರು ಯಜಮಾನರೆ, ಆಕೆ ಮದುವೆಯಾದ ಹೆಂಗಸು."

"ಆದರೇನಂತೆ ಅದಕ್ಕೂ ಇದಕ್ಕೂ ಏನು ಸಂಬಂಧ?"

"ಏನು ಸಂಬಂಧಾನೋ ಸ್ವಾಮಿ? ಅಂತೂ ಹುಷಾರು."

"ನಿಂದು ಶುದ್ಧ ಹೊಲಸು ಮನಸ್ಸು ಗಫೂರ್. ಆಕೆ ನನ್ನ ತಂಗಿಯಿದ್ದ ಹಾಗೆ" ಎಂದು ಗಫೂರನ ಬಾಯಿ ಮುಚ್ಚಿಸಿದೆ.

"ನಿಜ ಸ್ವಾಮಿ ನಿಜ. ಅಷ್ಟಕ್ಕೂ ನನಗೂ ಇದಕ್ಕೂ ಏನು ಸಂಬಂಧ? ಆಕೇನ ಮದುವೆ ಮಾಡಿಕೊಂಡ ಮನುಷ್ಯ ಅಲ್ಲಿದ್ದಾನೆ. ನನಗಂತೂ ನನ್ನ ಹೆಂಡತೀನ ನೋಡಿಕೊಳ್ಳೋದೇ ಸಾಕಾಗಿದೆ."

ಗಫೂರನನ್ನು ಅಲ್ಲೇ ಬಿಟ್ಟು ನಾನು ಅಂಗಡಿಯೊಳಕ್ಕೆ ಹೋದೆ. ನವಿಲಿನ ಹಾಗಿದ್ದ ಒಂದು ಬೆಳ್ಳಿಯ ಬ್ರೋಚನ್ನು ಕೊಂಡುಕೊಂಡಿದ್ದಳು. ನಾನೇ ಅದಕ್ಕೆ ದುಡ್ಡು ಕೊಟ್ಟು, ಅವಳ ಸೀರೆಗೆ ತಗುಲಿಸಿದೆ. ತಾಜ್ ಹೋಟೆಲಿನ ಮೇಲೆ ಕುಳಿತು ಊಟ ಮಾಡಿದೆವು. ಕಾರಣವಿದ್ದೂ ಇಲ್ಲದೆಯೆ ನಕ್ಕೆವು.

ಮಾರುಕಟ್ಟೆಯ ಗದ್ದಲದ ಮಧ್ಯೆ ಓಡಾಡುತ್ತ, ಜನ ತುಂಬಿದ ಹೋಟೆಲುಗಳಲ್ಲಿ ಊಟ ಮಾಡುತ್ತ, ಸಿನೀಮಾ, ನಾಟಕ ನೋಡುತ್ತ ಕಾಲ ಕಳೆಯೋದು ಅವಳ ಧ್ಯೇಯವಾದಂತೆ ಕಂಡಿತು. ಸಿನಿಮಾ ಮಂದಿರಕ್ಕೆ ಹೋಗಿ ಕಾರನ್ನು ವಾಪಸ್ಸು ಕಳುಹಿಸಿಬಿಟ್ಟಿದ್ದೆ. ನನ್ನ ಚಲನವಲನಗಳನ್ನೆಲ್ಲಾ ಗಫೂರ್ ನೋಡಬೇಕಾಗಿದ್ದಿರಲಿಲ್ಲ. ಸಿನಿಮಾ ಮುಗಿದ ಮೇಲೆ ಹೋಟೆಲಿಗೆ ಹಿಂತಿರುಗಿದೆವು. ನಾವಂತೂ ಸಿನಿಮಾ ನೋಡಿರಲಿಲ್ಲ. ರೋಜಿ ಹಳದಿ ಬಣ್ಣದ ಕ್ರೇಪ್ ಸೀರೆ ಉಟ್ಟಿದ್ದಳು. ನಾವು ಬಾಕ್ಸ್‌ನಲ್ಲಿ ಹೋಗಿ ಕುಳಿತಾಗ ಜನ ಅವಳನ್ನೇ ನೋಡಿದ್ದರು. ರೋಜಿ ಎಲ್ಲರ ಕಣ್ಣಿಗೂ ಹಬ್ಬವಾಗಿದ್ದಳು. ಅವಳ ಕಣ್ಣಿನಲ್ಲಿ ಕೃತಜ್ಞತೆಯ ಹೊಳಪು ಹೊಳೆಯುತ್ತಿತ್ತು.

ಹೋಟೆಲು ತಲುಪಿದಾಗ ಮಧ್ಯರಾತ್ರಿಯ ಸಮಯ. ಬಾಗಿಲಿನಲ್ಲಿ ಇದ್ದ ಕಾವಲುಗಾರ ಯಾವ ಆಸಕ್ತಿಯನ್ನೂ ತೋರಿಸದೆ ಒಳಗೆ ಹೋದುದನ್ನು ನೋಡಿದನು. ಹೋಟೆಲಿನ ಕೆಲಸಗಾರರೆ ಹಾಗೆಂದು ಕಾಣುತ್ತೆ. ಇಪ್ಪತ್ತೆಂಟನೆ ರೂಮಿನ ಬಾಗಿಲ ಮುಂದೆ ನಾನು ಒಂದು ನಿಮಿಷ ನಿಂತೆ.

ಅವಳು ಬಾಗಿಲು ತೆರೆದು ಒಳಗೆ ಹೋಗಿ ನಿಂತಳು. ಬಾಗಿಲು ಅರ್ಧ ತೆರೆದಿತ್ತು. ಮೊದಲ ದಿನದಂತೆಯೇ ನನ್ನನ್ನು ನೋಡುತ್ತಾ ಒಂದು ನಿಮಿಷ ನಿಂತಳು.

"ನಾನು ಹೋಗಲೆ?" ಎಂದೆ.

"ಹ್ಞಾಂ.........ಒಳ್ಳೇದು.........ಗುಡ್‌ನೈಟ್........"

"ಒಳಗೆ ಬರಬಾರದೆ?"

"ಇಲ್ಲ, ಇಲ್ಲ ಬೇಡ, ಹೊರಟುಹೋಗಿ."

ಆದರೆ ಯಾವುದೋ ಉನ್ಮಾದದಲ್ಲಿ ಅವಳನ್ನು ಮೆಲ್ಲನೆ ಪಕ್ಕಕ್ಕೆ ತಳ್ಳಿ ಒಳಗೆ ಹೋಗಿ ಬಾಗಿಲು ಹಾಕಿದೆ.

# 6

ಬಿಡುವಿಲ್ಲದ ಕಾರ್ಯಕ್ರಮಗಳ ನಡುವೆ ರಾಜುವಿಗೆ ದಿನಗಳ ಪರಿವೆಯೇ ಇರಲಿಲ್ಲ. ಒಂದು ದಿನದಂತೆಯೇ ಇನ್ನೊಂದು, ಒಂದು ನಿಮಿಷವೂ ಪುರಸೊತ್ತಿಲ್ಲ. ಹಲವಾರು ತಿಂಗಳು ಕಳೆದಿರಬಹುದು. ಅಥವಾ ಹಲವಾರು ವರುಷಗಳೇ ಕಳೆದಿರಬೇಕು. ಶಿಷ್ಯರು ತರುತ್ತಿದ್ದ ವಿಶೇಷ ಪದಾರ್ಥಗಳಿಂದ ರಾಜು ಯಾವ ಯಾವ ತಿಂಗಳಿರಬಹುದೆಂದು ಊಹಿಸುತ್ತಿದ್ದನು. ಕಬ್ಬಿನ ಜಲ್ಲೆಯನ್ನೂ, ಪೊಂಗಲನ್ನೂ ತಂದರೆ ಸಂಕ್ರಾಂತಿ. ಹಣ್ಣು-ಹೂವು ಹೆಚ್ಚು ಹೆಚ್ಚಾಗಿ ತಂದಿಟ್ಟರೆ ಯುಗಾದಿ. ದಸರಾ ಬಂದಾಗ ಪಾಳು ಗುಡಿಯ ತುಂಬ ದೀಪಗಳು. ಒಂಭತ್ತು ದಿನಗಳೂ ಹೆಂಗಸರು ಬಂದು, ಗುಡಿಸಿ, ಸಾರಿಸಿ ಬಣ್ಣ-ಬಣ್ಣದ ರಂಗೋಲಿಯಿಂದ, ಸಿಂಗರಿಸಿ ಹೋಗುತ್ತಿದ್ದರು. ದೀಪಾವಳಿ ಬಂದಾಗ ಅವನಿಗಾಗಿ ಹೊಸ ಬಟ್ಟೆ. ತನ್ನೆದುರಿಗೆ ಪಟಾಕಿ, ಮತಾಪುಗಳ ರಾಶಿ-ರಾಶಿಯೇ ಬಿದ್ದಾಗ ಊರಿನ ಮಕ್ಕಳನ್ನೆಲ್ಲ ಕರೆದು ಅವರೆದುರಿನಲ್ಲಿ ಸುಡುತ್ತಿದ್ದನು. ಮೂರು ವರುಷ ಹೀಗೇ ಉರುಳಿತು. ಆದರೆ ಅದರ ಮುಂದಿನ ವರುಷದಿಂದ ಹೀಗೆ ದಿನ, ವಾರಗಳ ಲೆಕ್ಕವಿಟ್ಟು ಪ್ರಯೋಜನವಿಲ್ಲವೆಂದು ಬಿಟ್ಟುಬಿಟ್ಟನು.

ಎದೆಯನ್ನು ಬಂದು ತಾಗುತ್ತಿದ್ದ ನೀಳವಾದ ಗಡ್ಡ, ಬೆನ್ನಮೇಲೆ ಜೋತುಬಿದ್ದ ತಲೆಗೂದಲು, ಕತ್ತಿನಲ್ಲಿ ರುದ್ರಾಕ್ಷಿ ಮಾಲೆ, ದಯೆ, ಅನುಕಂಪ ತುಂಬಿ ತುಳುಕುತ್ತಿದ್ದ ಕಣ್ಣುಗಳು ಅವನಿಗೆ ಒಂದು ವಿಶೇಷ ತೇಜಸ್ಸನ್ನು ತಂದುಕೊಟ್ಟಿದ್ದವು. ಹಳ್ಳಿಗರು ರಾಶಿ-ರಾಶಿಯಾಗಿ ಸಾಮಾನುಗಳನ್ನು ತರುತ್ತಿದ್ದುದರಿಂದ ಅವನ್ನು ಎತ್ತಿಟ್ಟುಕೊಳ್ಳಬೇಕೆಂದು ಆಸೆಯೂ ಈಚೀಚೆಗೆ ಇರಲಿಲ್ಲ. ದಿನದ ಕಡೆಯಲ್ಲಿ ಬಂದಿದ್ದ ಹೂವು-ಹಣ್ಣುಗಳೆಲ್ಲ ಹೆಂಗಸರು, ಮಕ್ಕಳಿಗೆ ಹಂಚಿಬಿಡುತ್ತಿದ್ದನು.

'ನಾನೂ ಬಡವ, ನೀವೂ ಬಡವರು. ಇದನ್ನೆಲ್ಲಾ ಯಾತಕ್ಕೆ ತರುತ್ತೀರಿ?' ಎಂದು ರಾಜು ವೇಲನ್‌ನಿಗೆ ಎಷ್ಟೋ ಸಲ ಹೇಳಿದರೂ ಅವರು

ಮಾತ್ರ ಕೇಳುತ್ತಿರಲಿಲ್ಲ. ಅವರಿಗೆಲ್ಲ ಅವನು ಸ್ವಾಮೀಜಿ. ಮುರುಕು ಮಂಟ-ಪವೇ ದೇವಸ್ಥಾನ. 'ಸ್ವಾಮಿಗಳು ಹೇಳಿದರು' 'ದೇವಸ್ಥಾನಕ್ಕೆ ಹೋಗು-ತ್ತೇವೆ' ಅಂದರೆ ಯಾವ ಸ್ವಾಮಿ? ಯಾವ ದೇವಸ್ಥಾನ? ಎಂದು ತಿಳಿದು-ಹೋಗುತ್ತಿತ್ತು. ಜನ ದೇವಸ್ಥಾನಕ್ಕೆ ಸುಣ್ಣ ಹಚ್ಚಿ, ಕೆಂಪು ಪಟ್ಟಿಗಳನ್ನು ಬಳಿದರು.

ವರುಷದ ಮೊದಲಲ್ಲಿ ಸಾಮಾನ್ಯವಾಗಿ ಸಂಜೆ ಮಳೆ ಬರುತ್ತಿತ್ತು. ಒಂದೆರಡು ಘಂಟೆಯ ಹೊತ್ತು ಮಳೆ-ಗುಡುಗಿನ ಆರ್ಭಟವೇ ಆರ್ಭಟ. ದಿನ ಕಳೆದ ಹಾಗೆಲ್ಲ ಈ ಗುಡುಗು ನಿಂತು ಸೋನೆ ಆರಂಭವಾಯಿತು. ಆದರೆ ದೇವಸ್ಥಾನಕ್ಕೆ ಬರುವ ಜನರ ಗುಂಪು ಮಾತ್ರ ಕಡಿಮೆಯಾಗಲಿಲ್ಲ. ಮಳೆ-ಗಾಳಿಗಳ ಅರಿವೂ ಅವರಿಗಿರುತ್ತಿರಲಿಲ್ಲ. ಗೋಣಿಗಳನ್ನು ಹೊದ್ದುಕೊಂಡು ಕೊಡೆಗಳನ್ನು ಹಿಡಿದುಕೊಂಡು ಬಂದುಬಿಡುತ್ತಿದ್ದರು. ಮಳೆಗಾಲದಲ್ಲಿ ಹೊರಗೆ ನಿಲ್ಲಲು ಸಾಧ್ಯವಾಗುತ್ತಿರಲಿಲ್ಲವಾದ್ದರಿಂದ ಒಳಗಿನ ಅಂಗಳ ಭರ್ತಿಯಾಗಿ-ಬಿಡುತ್ತಿತ್ತು. ಹೊರಗೆ ಗಾಳಿ-ಮಳೆ-ಚಳಿ. ಆದರೆ ಒಳಗೆ ಬೆಚ್ಚಗಿರುತ್ತಿತ್ತು. ರಾಜುವಿಗಂತೂ ಈ ಮಳೆಗಾಲವೆಂದರೆ ತುಂಬಾ ಇಷ್ಟ ಎತ್ತ ನೋಡಿದರೂ ಹಚ್ಚ ಹಸುರಿನ ಹಾಸುಗೆ. ಬಾನಿನಲ್ಲಿ ಮುಗಿಲ ನೃತ್ಯ.

ಆದರೆ ವರುಷದ ಕೊನೆಯಲ್ಲಿ ಆಕಾಶದಲ್ಲಿ ಮೋಡಗಳ ಸುಳಿವೇ ಇರು-ತ್ತಿರಲಿಲ್ಲ. ಬೆಳಗಿನಿಂದ ಸಂಜೆಯ ತನಕ ನಿಗಿ-ನಿಗಿಸುವ ಬಿಸಿಲು. ಒಂದು ದಿನ ವೇಲನ್, ರಾಜು ಇಬ್ಬರೇ ಮಾತಿಗೆ ಉಳಿದರು.

"ಎಲ್ಲಿ ಮಳೆ ಕಾಣಲಿಲ್ಲವಲ್ಲ?" ಎಂದ ರಾಜು.

ವೇಲನ್‌ನ ಮುಖ ಸಪ್ಪಗಾಯಿತು.

"ಏನೋ ಸ್ವಾಮೀಜಿ, ದೇವರು ಮುನಿಸಿಕೊಂಡಿದ್ದಾನೆ. ಜೋಳ ಈಗಾಗಲೇ ಕೊಯ್ಲಿಗೆ ಬರಬೇಕಾಗಿತ್ತು. ಮಳೆಯ ಮುಖಾನೇ ಕಾಣದೆ ಪೈರೆಲ್ಲ ಒಣಗಿ ನಿಂತಿದೆ."

ಮಾರನೆಯ ದಿನ ಬಂದವರಲ್ಲಿ ಒಬ್ಬೊಬ್ಬರು—

"ನೂರಾರು ಬಾಳೆ ಸಸಿ ಒಣಗಿಹೋದವು"

"ಮೇಯೋಕೆ ಹೋದ ಹಸುಗಳು ಮಣ್ಣು ತಿಂದುಕೊಂಡು ಬರು-ತ್ತವೆ. ಹುಲ್ಲು ಸಿಗದೆ......." ಎಂದು ಹೇಳತೊಡಗಿದರು.

ರಾಜು ಪ್ರತಿಯೊಬ್ಬರಿಗೂ ಸಮಾಧಾನ ಹೇಳಿದ.

"ನಮಗೇನು ತಿಳಿಯುತ್ತೆ ಸ್ವಾಮಿ? ಏನೋ ದೇವರು ಕಣ್ಣುಬಿಟ್ಟು ನೋಡಬೇಕು" ಎಂದುಕೊಂಡು ಹೊರಟುಹೋಗುತ್ತಿದ್ದರು. ನದಿಯಲ್ಲೂ ನೀರು ಕಡಿಮೆಯಾಗಿತ್ತು. ಸ್ನಾನ ಮಾಡಬೇಕಾದರೆ ಮೊದಲಿಗಿಂತ ಇನ್ನೂ ಮೂರು ಮೆಟ್ಟಿಲು ಕೆಳಗಿಳಿಯಬೇಕಾಗಿದ್ದುದನ್ನು ಕಂಡು ರಾಜು ಜ್ಞಾಪಿಸಿಕೊಂಡ. ಮೆಟ್ಟಲಿಳಿದು ಹೋಗಿ ನದಿಯನ್ನೇ ನೋಡುತ್ತ ನಿಂತ. ತಾನು ಹಿಂದೆ ಪ್ರವಾಸಿಗಳನ್ನು ಕರೆದೊಯ್ಯುತ್ತಿದ್ದ ಆ ಸ್ಥಳ........ಮೆಂಪಿ ಬೆಟ್ಟದ ಮೇಲಿದ್ದ ನದಿಯ ಮೂಲ! ಅದಕ್ಕೇನಾಗಿದೆ? ನದಿ ಹೀಗೆ ಹಿಂದಕ್ಕೆ ಹೋಗಿದೆಯಲ್ಲ? ಎದುರಿಗಿದ್ದ ದಡ ಎತ್ತರವಾಗಿದ್ದ ಹಾಗಿತ್ತು. ನದಿಯು ತುಂಬ ಕಲ್ಲುಗಳು ಕಾಣತೊಡಗಿದ್ದವು.

ಸುಗ್ಗಿಯ ಕಾಲವೇನೊ ಬಂತು. ಆದರೆ ಹಿಗ್ಗನ್ನು ತರಲಿಲ್ಲ. ಕಬ್ಬಿನ ಪೈರು ಬತ್ತಿಹೋಗಿ ಸಂಕ್ರಾಂತಿಗೆ ಕಬ್ಬೇ ಇರಲಿಲ್ಲ. ಹಳ್ಳಿಗರು ತರುತ್ತಿದ್ದ ಹೂವು-ಹಣ್ಣುಗಳು ದಿನದಿನಕ್ಕೆ ಕಡಿಮೆಯಾಗತೊಡಗಿದವು.

ಮಳೆಯನ್ನು ಬಿಟ್ಟು ಬೇರೆ ಮಾತೇ ಇಲ್ಲ.

"ಮುಂದಿನ ವರುಷ ತುಂಬಾ ಮಳೆಯಾಗುತ್ತೆ" ಎಂದರು ಜೋಯಿಸರು.

ರಾಜುವೇನೋ ದೇವರ ಮೇಲೆ ಉಪನ್ಯಾಸ ಮಾಡುತ್ತಿದ್ದ. ಆದರೆ ಅವರಿಗೆ ಸದ್ಯಕ್ಕೆ ಮಳೆರಾಯನನ್ನು ಬಿಟ್ಟರೆ ಬೇರೆ ದೇವರಿರಲಿಲ್ಲ. ಆಸೆ-ನಿರಾಸೆಗಳ ಮಧ್ಯೆ ಓಲಾಡುತ್ತಿತ್ತು ಅವರ ಮನಸ್ಸು.

"ಏನು ಸ್ವಾಮಿಜಿ, ಏರೋಪ್ಲೇನು ಓಡಾಡಿ ಓಡಾಡಿ ಮೋಡಗಳನ್ನೆಲ್ಲಾ ಚದುರಿಸಿಬಿಟ್ಟಿವೆಯಂತೆ, ನಿಜವೇ?"

"ಏನು ಸ್ವಾಮಿಜಿ, ಆಟಂಬಾಂಬ್ ತಯಾರಿಸುತ್ತ ಇದ್ದಾರಲ್ಲ, ಅದರಿಂದ ಮೋಡಗಳಲ್ಲಿರೊ ನೀರೆಲ್ಲಾ ಇಂಗಿಹೋಗುತ್ತದಂತೆ ನಿಜಾನೇ?"

ಮಳೆ ಬರದೇ ಇದ್ದುದಕ್ಕೆ ನೂರಾರು ಕಾರಣಗಳು. ರಾಜುವೇನೋ ಅವರಿಗೆ ಸಮಾಧಾನ ಹೇಳುತ್ತಿದ್ದ. ಆದರೆ ಅದರಿಂದ ಸಮಾಧಾನಗೊಳ್ಳುವ ಸ್ಥಿತಿ ಅವರಲ್ಲಿರಲಿಲ್ಲ.

"ಮೂರು ಹೊತ್ತೂ ಮಳೇ ವಿಚಾರ ಮಾತಾಡುತ್ತಿದ್ದರೆ ಮಳೆರಾಯ-

ನಿಗೆ ಕೋಪ ಬರುತ್ತೆ. ಬೆಳಗಿನಿಂದ ಸಂಜೆಯ ತನಕ ನಿಮ್ಮ ಹೆಸರನ್ನು ಯಾರಾದರೂ ಹೇಳುತ್ತಿದ್ದರೆ ನಿಮಗೆ ಹ್ಯಾಗಿರುತ್ತೆ, ಹಾಗೇನೇ ದೇವರಿಗೂ...." ಜನ ಒಂದು ನಿಮಿಷ ತಮ್ಮ ಯೋಚನೆಯನ್ನು ಮರೆತು ನಕ್ಕರು. ಆದರೆ ಪರಿಸ್ಥಿತಿ ಸುಧಾರಿಸುವ ಹಾಗೆ ಕಾಣಲಿಲ್ಲ. ದಿನದಿನಕ್ಕೆ ಹದಗೆಡುತ್ತಾ ಹೋಯಿತು. ಯಾವುದೋ ಕಾಣದ ದೈವಕೃಪೆ ಮಾಡಬೇಕಾಗಿತ್ತು. ಅದಕ್ಕೆ ವಿಜ್ಞಾನದಿಂದ ಎಷ್ಟೋ ವೇದಾಂತದಿಂದಲೂ ಅಷ್ಟೇ ಸಂತೋಷವಾದ ಹಾಗಿತ್ತು. ಹಸುಗಳು ಹಾಲು ಕೊಡಲಾರದೇ ಹೋದವು. ಎತ್ತುಗಳು ಹೊಲ ಊಳಲಾರದೆ ಹೋದವು. ಕುರಿಗಳು ಸವೆದು ನಾರಾದವು.

ಕೆರೆ, ಭಾವಿ ಬತ್ತಿದವು. ದೊಡ್ಡ ದೊಡ್ಡ ಕೊಡಗಳನ್ನು ಹೊತ್ತು ಬರುತ್ತಿದ್ದ ಹೆಣ್ಣುಮಕ್ಕಳಿಗೆ ಹೆದರಿ ನದಿಯೂ ಹಿಂದೆ ಸರಿಯುತ್ತಿತ್ತು. ಆದರೂ ನದಿಗೆ ಬರುವವರ ಸಂಖ್ಯೆ ಕಡಿಮೆಯಾಗಿರಲಿಲ್ಲ. ರಾಜು ದಡದಲ್ಲಿ ನಿಂತು ಈ ಮೆರವಣಿಗೆಯನ್ನು ನೋಡುತ್ತಿದ್ದನು. ಆದರೆ ಮೆರವಣಿಗೆಯಲ್ಲಿರ-ಬೇಕಾದ ಗಾಂಭೀರ್ಯವಿರುತ್ತಿರಲಿಲ್ಲ. ಒಂದು ಬಿಂದಿಗೆ ನೀರಿಗಾಗಿ ಹೊಡೆ-ದಾಟವೋ ಹೊಡೆದಾಟ. ನದಿಯೂ ಬತ್ತಿಹೋದರೆ ಹೇಗೆ ಎಂಬ ಭಯ, ಆತಂಕ, ಸಂಕಟ.

ಭೂಮಿತಾಯಿ ಬೇಗೆ ತಾಳಲಾರದೆ ಬಿರಿಯುತ್ತಿದ್ದಳು. ಒಂದು ದಿನ ದಾರಿಯಲ್ಲಿ ಎಮ್ಮೆಯೊಂದು ಸತ್ತುಬಿದ್ದಿದ್ದ ಸುದ್ದಿ ದೇವಸ್ಥಾನವನ್ನು ಮುಟ್ಟಿತು. ವೇಲನ್ ಈ ಸುದ್ದಿ ಹೊತ್ತು ಗುಡಿಗೆ ಬಂದಾಗ ರಾಜು ಇನ್ನೂ ಮಲಗೇ ಇದ್ದನು.

"ಸ್ವಾಮೀಜಿ, ಸ್ವಲ್ಪ ಏಳಿ, ನಮ್ಮ ಜೊತೇಲಿ ಬರಬೇಕು."

"ಯಾಕೆ ? ಏನಾಗಿದೆ ?"

"ದನಕರು ಸಾಯುತ್ತ ಇವೆ."

"ಅದಕ್ಕೆ ನಾನೇನು ಮಾಡಲಿ ?" ಎನ್ನಬೇಕೆನ್ನಿಸಿತು.

ಆದರೆ ಮಾತ್ರ ಅನ್ನುವ ಹಾಗಿರಲಿಲ್ಲ.

"ಇಲ್ಲ, ಇದರಿಂದ ಇರಲಾರದು........"

"ಇನ್ನೇನು ಹೇಳೋಣ ಸ್ವಾಮೀಜಿ, ನಮ್ಮ ಹಳ್ಳಿಯಾಚೆ ಒಂದು ಎಮ್ಮೆ ಸತ್ತುಬಿದ್ದಿದೆ."

" ಸತ್ತುಹೋಗಿರೋದನ್ನ ನೀನೇ ನೋಡಿದೆಯಾ ? "

" ನಾನೇ ನೋಡಿದೆ. ನೋಡಿಕೊಂಡೇ ಇಲ್ಲಿಗೆ ಬರುತ್ತಾ ಇದೀನಿ "

" ಇಲ್ಲ ವೇಲನ್, ಇಲ್ಲ. ಇದು ಕ್ಷಾಮದಿಂದ ಇರಲಾರದು. ಎಮ್ಮೆ ಏನೋ ಕಾಯಿಲೆಯಿಂದ ಸತ್ತುಹೋಗಿರಬೇಕು. "

" ನೀವು ಸ್ವಲ್ಪ ಬಂದು ನೋಡಿ, ಸ್ವಾಮೀಜಿ. ಎಮ್ಮೆ ಯಾತಕ್ಕೆ ಸತ್ತುಹೋಗಿದೆ ಅಂತ ಹೇಳಿದರೆ ನಮ್ಮ ಮನಸ್ಸಿಗೆ ಎಷ್ಟೋ ಸಮಾಧಾನ-ವಾಗುತ್ತೆ. "

ಈ ಜನರಿಗೆ ಏನಾಗಿದೆ? ತನಗೆ ಜಾನುವಾರಿನ ವಿಷಯ ಏನಾದರೂ ತಿಳಿದಿದೆಯೆ? ತನ್ನಂತವನು ಹೋಗಿ ನೋಡಿ ಏನು ಪ್ರಯೋಜನ ? ಆದರೂ ಹೋಗಲೇಬೇಕು. ವೇಲನ್‌ನನ್ನು ಒಂದು ನಿಮಿಷ ಕೂಡಲು ಹೇಳಿ ರಾಜು ಹೊರಡಲು ಸಿದ್ಧನಾದ. ಇಬ್ಬರೂ ಹೊರಟರು. ಹುಡುಗರು ಹೊರಗೆ ಮಣ್ಣಿ-ನಲ್ಲಿ ಆಡುತ್ತಿದ್ದರು.

ತಲೆಯ ಮೇಲೆ ಮಡಕೆಗಳನ್ನು ಹೊತ್ತು ಹೆಂಗಸರು ನೀರಿಗಾಗಿ ಓಡಾಡುತ್ತಿದ್ದರು. ದಾರಿಯಲ್ಲಿ ಹೋಗುವಾಗ ಒಬ್ಬಾಕೆ, " ಏನು ಸ್ವಾಮೀಜಿ, ಅರ್ಧ ಬಿಂದಿಗೆ ನೀರೂ ಸಿಗೋಲ್ಲ " ಎಂದಳು.

" ನೀವು ಏನಾದರೂ ಒಂದು ದಾರಿ ತೋರಿಸಬೇಕು ಸ್ವಾಮೀಜಿ" ಎಂದ ವೇಲನ್.

ರಾಜುವಿನ ಹಿಂದೆ ಒಂದು ಸಣ್ಣ ಗುಂಪೇ ಹೊರಟಿತು. ಹಾಡಿದ್ದನ್ನೇ ಹಾಡೋ ಕಿಸುಬಾಯಿದಾಸ ಎಂದ ಹಾಗಿತ್ತು ಅವರುಗಳ ಮಾತು. ಪಕ್ಕದ ಹಳ್ಳಿಯಲ್ಲಿ ಕಾಲರ ಮಾರಿ ಬಂದಿದ್ದಾಳೆ ಎಂದ ಒಬ್ಬ. ಆದರೆ ಅವನ ಮಾತನ್ನು ಯಾರೂ ನಂಬಲಿಲ್ಲ. ರಾಜು ಇದಕ್ಕೆಲ್ಲಾ ಕಿವಿಗೊಡದೆ ನಡೆದು-ಹೋಗುತ್ತಿದ್ದ. ಕಾಡಿಗೆ ಹೋಗುವ ಮಾರ್ಗದಲ್ಲಿ ಬಿದ್ದಿತ್ತು ಸತ್ತ ಎಮ್ಮೆ. ಮೈಯಲ್ಲಿ ಮೂಳೆ ನೂಳೆ. ಜನರ ಗುಂಪನ್ನು ನೋಡಿ ಎಮ್ಮೆಯ ಮೈಯನ್ನು ಮುತ್ತಿದ್ದ ಕಾಗೆಗಳು ಹಾರಿಹೋದವು. ಮೂಗಿಗೆ ಬಡಿಯುತ್ತಿತ್ತು ಆ ಕೆಟ್ಟ ನಾತ. ರಾಜು ಉತ್ತರೀಯದ ಅಂಚಿನಿಂದ ಮೂಗು ಮುಚ್ಚಿಕೊಂಡು, " ಎಮ್ಮೆ ಯಾರದು ? "

" ನಮ್ಮದಲ್ಲ, ನಮ್ಮದಲ್ಲ. "

ಗುಂಪಿನಲ್ಲಿದ್ದವರು ಒಬ್ಬರ ಮುಖ ಒಬ್ಬರು ನೋಡಿದರು. ಎಮ್ಮೆ ಅವರದಾಗಿರಲಿಲ್ಲ. ಪಕ್ಕದ ಹಳ್ಳಿಯದು ಎಂದ ಒಬ್ಬ. ಸದ್ಯ ಈ ಹಳ್ಳಿಯದಲ್ಲ-ವಲ್ಲ ಎಂದೂ ಜನ ಸಮಾಧಾನಗೊಂಡರು. "ಸಾಕಿದ ಎಮ್ಮೆ ಹಾಗಿಲ್ಲ. ಯಾವುದೋ ಪುಂಡುಯಿರಬೇಕು." ಇದನ್ನು ಕೇಳಿ ಜನರಿಗೆ ಇನ್ನೂ ಸಮಾ-ಧಾನವಾಯಿತು. ಸದ್ಯ ಕ್ಷಾಮದಿಂದ ಸತ್ತಿತು ಎನ್ನದಿದ್ದರೆ ಸಾಕು. ಎಮ್ಮೆ-ಯನ್ನು ಇನ್ನೊಂದು ಸಲ ಪರೀಕ್ಷಿಸಿ ರಾಜು, "ಯಾವುದೋ ವಿಷಜಂತು ಕಚ್ಚಿಬಿಟ್ಟಿರಬೇಕು" ಎಂದು ಒಂದು ಎಲೆಯೂ ಇಲ್ಲದೆ ಒಣಗಿ ನಿಂತಿದ್ದ ಮರಗಳನ್ನೂ, ನೀರನ್ನೂ ಕಾಣದೆ ಧೂಳಿಮಯವಾಗಿದ್ದ ದಾರಿಗಳನ್ನೂ ಗಮನಿಸದೆ ಹಿಂತಿರುಗಿದನು.

ಸ್ವಾಮೀಜಿ ಕೊಟ್ಟ ವಿವರಣೆಯಿಂದ ಅವರಿಗೆ ಸ್ವಲ್ಪ ನೆಮ್ಮದಿ-ಯಾಯಿತು. ಪರವಾಗಿಲ್ಲ, ದನ-ಕರುವಿಗೆ ಇನ್ನೂ ಮೇವಿದೆ ಎಂದುಕೊಂಡರು. ವಿಷದ ಹಾವು, ವಿಷದ ಇರುವೆ ಇವು ಕಡಿದ ಪ್ರಾಣಿಗಳು ಸತ್ತುಹೋದ ವಿಷಯದಲ್ಲಿ ನೂರಾರು ಕಥೆಗಳು ಅಂದು ಹುಟ್ಟಿಕೊಂಡವು. ರಾತ್ರಿಯೆಲ್ಲ ಅದೇ ಮಾತು.

ಆದರೆ ಎಮ್ಮೆ, ಎತ್ತು, ದನ-ಕರು ಸತ್ತ ಸುದ್ದಿ ಅಲ್ಲಿಂದ ಇಲ್ಲಿಂದ ಬರತೊಡಗಿದವು. ಕಣಜಗಳು ಬರಿದಾಗತೊಡಗಿದವು. ವ್ಯಾಪಾರಿಗಳಿಗೆ ಅದೃಷ್ಟ ಖುಲಾಯಿಸಿತು. ರೂಪಾಯಿಗೆ ಒಂದು ಸೇರು ಅಕ್ಕಿಯಾಯಿತು. ಕೋಪಗೊಂಡ ರೈತ ಅಂಗಡಿಯವನನ್ನು ಹೊಡೆದ ಪ್ರಸಂಗ ಒಂದು ಕಡೆ ನಡೆಯಿತು ಉದ್ರೇಕಗೊಂಡ ವ್ಯಾಪಾರಿ ಕತ್ತಿ ಹಿಡಿದು ಹೊರಗೆ ಬಂದು ರೈತನನ್ನು ಎದುರಿಸಿದ. ರೈತನ ಜನ ರಾತ್ರೆ ಅಂಗಡಿಗೆ ಮುತ್ತಿಗೆ ಹಾಕಿದರು. ವ್ಯಾಪಾರಿ ಸಂಗಡಿಗರು ಕತ್ತಿ-ದೊಣ್ಣೆಗಳನ್ನು ಹಿಡಿದು ಬಂದು ರೈತರನ್ನು ತಡೆದರು.

ವೇಲನ್ ತನ್ನ ಜೊತೆಯವರನ್ನು ಕರೆದುಕೊಂಡು ಮಚ್ಚು-ಕೊಡಲಿ-ಗಳನ್ನು ಹಿಡಿದು ಹೋರಾಟಕ್ಕೆ ನಡೆದ. ಜನರ ಕೂಗಾಟ, ಕಿರುಚಾಟ ಗಾಳಿಯನ್ನು ತುಂಬಿದವು. ರಾಜುವಿಗೂ ಈ ಕೂಗು ಕೇಳಿಸಿತು. ಸ್ವಲ್ಪ ಹೊತ್ತಿನಲ್ಲೇ ದೂರದಲ್ಲಿ ಬೆಂಕಿಯುರಿ ಮುಗಿಲನ್ನು ಮುಟ್ಟಿದುದೂ ಕಾಣಿ-ಸಿತು. ಒಂದು ಘಂಟೆಯ ಕೆಳಗೆ ಎಲ್ಲವೂ ಪ್ರಶಾಂತವಾಗಿದ್ದ ಹಾಗಿತ್ತು.

ಆದರೆ ಇಷ್ಟರಲ್ಲಿ ಏನಾಯಿತು ?

"ಈ ಹಳ್ಳಿ ಜನಕ್ಕೆ ಸುಮ್ಮನಿರೋಕಾಗೋದಿಲ್ಲ. ದಿನದಿನಕ್ಕೆ ಕೋಪ, ರೋಷ ಜಾಸ್ತಿಯಾಗುತ್ತಾ ಇದೆ. ಹೀಗೆ ಇದ್ದರೆ ನಾನು ಬೇರೇ ಊರು ನೋಡಬೇಕಾದ್ದೆ" ಎಂದು ಮಲಗಿ ನಿದ್ರಿಸಿದನು.

ಆದರೆ ಬೆಳಗಿನ ಝಾವಕ್ಕೇ ವೇಲನ್‌ನ ತಮ್ಮ ಬಂದು ಅವನು ಗಾಯ-ಗೊಂಡು ಮಲಗಿದ್ದಾನೆಂದೂ, ಅನೇಕ ಹೆಣ್ಣುಮಕ್ಕಳಿಗೆ ಪೆಟ್ಟು ಬಿದ್ದಿದೆ-ಯೆಂದೂ, ಈ ದಿನ ರಾತ್ರಿ ವೇಲನ್ ತನ್ನ ಜೊತೆಯವರನ್ನು ಕರೆದುಕೊಂಡು ಆ ವ್ಯಾಪಾರಿಯ ಗುಂಪನ್ನು ಮಟ್ಟ ಹಾಕುತ್ತಾನೆಂದೂ ತಿಳಿಸಿದ.

ರಾಜುವಿಗೆ ಸ್ಥಿತಿಗತಿ ತಿಳಿದು ನಿಜವಾಗಿಯೂ ಆಶ್ಚರ್ಯವಾಯಿತು. ಈಗೇನು ಮಾಡುವುದು ? ರೈತರನ್ನು ಹರಸುವುದೇ ಅಥವಾ ಹೋಗಬೇಡಿ-ರೆಂದು ತಡೆಯುವುದೆ ? ಒಬ್ಬರಿಗೊಬ್ಬರು ಹೀಗೆ ಕಚ್ಚಾಡಿ ಸತ್ತರೆ ಕ್ಷಾಮದ ಚಿಂತೆ ಕಡಿಮೆಯಾಗುತ್ತದೆ ಎಂದು ಎನಿಸಿತು. ಆದರೂ ಪಾಪ ವೇಲನ್—

"ತುಂಬಾ ಏಟು ಬಿತ್ತೆ ?" ಎಂದು ವಿಚಾರಿಸಿದ.

"ಏನೂ ಇಲ್ಲ, ಅಲ್ಲೊಂದಿಷ್ಟು ಇಲ್ಲೊಂದಿಷ್ಟು ಗಾಯವಾಗಿದೆ ಅಷ್ಟೆ." ಆಗಿರೋ ಗಾಯ ಸಾಲದು ಎನ್ನುವ ಹಾಗಿತ್ತು.

ಊರೊಳಗೆ ಹೋಗಿ ವೇಲನ್‌ನನ್ನು ನೋಡಿಬರುವುದೆ ? ಆದರೆ ಏಳಲು ಮನಸ್ಸಾಗಲಿಲ್ಲ. ಗಾಯಗೊಂಡಿದ್ದರೆ ವಾಸಿಯಾಗುತ್ತೆ ಅಷ್ಟೆ. ಅದೂ ಅಲ್ಲದೆ ಈಗ ಹೋಗಿಬಂದರೆ ಒಂದೊಂದು ಸಲವೂ ಹೋಗಿ ನೋಡಬೇಕಾದರೆ?.... ಆಮೇಲೆ ತನಗೆ ನೆಮ್ಮದಿಯಿರುವುದಿಲ್ಲ ಅಷ್ಟೆ.

"ನೀನು ಹೇಗೆ ಉಳಿಮಕೊಂಡೆ ?" ರಾಜು ವೇಲನ್‌ನ ತಮ್ಮನನ್ನು ಕೇಳಿದ.

"ನಾನೂ ಅಲ್ಲೇ ಇದ್ದೆ. ಆದರೆ ನನಗೆ ಹೊಡೆತ ಬೀಳಲಿಲ್ಲ. ಹೊಡೆ-ಯೋಕೆ ಬಂದಿದ್ದರೆ ಹತ್ತು ಜನಾನ ಉರುಳಿಸಿಬಿಡುತ್ತಾ ಇದ್ದೆ. ಆದರೆ ನಮ್ಮಣ್ಣ ಎಚ್ಚರದಪ್ಪಿಬಿಟ್ಟ."

"ನೋಡೋಕೆ ನರಪೇತುನಾರಾಯಣನ ಹಾಗಿದ್ದರೂ ಕೊಚ್ಕೋದು ಭಾರೀ ಬಡಾಯಿ" ಎಂದುಕೊಂಡ ರಾಜು.

"ಗಾಯಕ್ಕೆಲ್ಲ ಅರಿಸಿಣ ಹಚ್ಚಿ ಅಂತ ಹೇಳು ನಿನ್ನ ಅಣ್ಣನಿಗೆ."

ಆ ತಮ್ಮ ಮಾತಾಡುತ್ತಿದ್ದ ಧಾಟಿ ನೋಡಿದರೆ ಅವನೇ ತನ್ನ ಅಣ್ಣ-ನನ್ನು ಹೊಡೆದುಬಿಟ್ಟಿರುವ ಹಾಗೆ ಕಾಣುತ್ತಿತ್ತು. ಹಳ್ಳಿಯಲ್ಲಿ ಅಣ್ಣ-ತಮ್ಮಂದಿರಿಗೆ ವ್ಯಾಜ್ಯ ತಪ್ಪಿದ್ದೇ ಅಲ್ಲ. ಈಗಂತೂ ಯಾರಿಗೂ ಏನು ಮಾಡ-ಬಹುದು ಏನು ಮಾಡಬಾರದು ಎನ್ನುವುದರ ಪರಿಜ್ಞಾನವಿದ್ದ ಹಾಗೆ ಇರಲಿಲ್ಲ. ವೇಲನ್‌ನ ತಮ್ಮ ಹೋಗಲು ಎದ್ದ.

"ಇವತ್ತು ರಾತ್ರಿ ವಿಶ್ರಾಂತಿ ಪಡೆಯೋಹಾಗೆ ವೇಲನ್‌ನಿಗೆ ಹೇಳು."

"ಅಯ್ಯೋ ಸ್ವಾಮೀಜಿ, ಅದು ಹೇಗಾಗುತ್ತೆ? ಇವತ್ತು ರಾತ್ರಿ ಆ ಅಂಗಡಿಯವನ ಮನೆ–ಮಠ ಸುಟ್ಟುಹಾಕೋ ತನಕ ಅವನ ಮನಸ್ಸಿಗೆ ನೆಮ್ಮದಿಯಿರೋಲ್ಲ."

"ಹಾಗೆ ಮಾಡೋದು ತಪ್ಪು." ರಾಜುವಿಗೆ ನಿಜವಾಗಿ ಕೋಪ ಬಂದಿತ್ತು. ವೇಲನ್‌ನ ತಮ್ಮ ಅಷ್ಟೊಂದು ಬುದ್ಧಿಶಾಲಿಯಲ್ಲ. ಇಪ್ಪತ್ತು-ಇಪ್ಪತ್ತೊಂದು ವಯಸ್ಸಿರಬಹುದು. ವೇಲನ್‌ನ ಮನೆಯಲ್ಲಿ ಅವನೂ ಒಬ್ಬ ಆಶ್ರಿತ. ಬೆಳಗಾಗಿ ಎದ್ದು ಹಳ್ಳಿಯಲ್ಲಿ ಮನೆ-ಮನೆಗೂ ಹೋಗಿ ದನಗಳನ್ನು ಅಟ್ಟಿಕೊಂಡು ಬೆಟ್ಟದ ಹತ್ತಿರ ಹೋಗಿ ಮೇಯಿಸಿಕೊಂಡು ಸಾಯಂಕಾಲದ ಹೊತ್ತಿಗೆ ವಾಪಸ್ಸು ಬರುತ್ತಿದ್ದ. ಮರದ ನೆರಳಿನಲ್ಲಿ ಕುಳಿತು ಜೊತೆಗೆ ತಂದಿದ್ದ ರಾಗಿಮುದ್ದೆಯನ್ನು ಮಧ್ಯಾಹ್ನ ತಿಂದು, ಸೂರ್ಯ ಮುಳುಗುವು-ದನ್ನೇ ಕಾಯುತ್ತಿದ್ದು, ಸಂಜೆಯಾದೊಡನೆ ಹಸುಗಳನ್ನು ಮನೆಯಕಡೆ ಹೊಡೆ-ಯುವುದೇ ಅವನ ಕೆಲಸ. ಅವನಿಗೆ ಮಾತನಾಡುವುದಕ್ಕೆ ಬೇರೆ ಯಾರೂ ಸಿಗುತ್ತಿರಲಿಲ್ಲ. ಹಸುಗಳೇ ಅವನ ಒಡನಾಡಿಗಳು. ಅವನ್ನು ಮನಸ್ಸು ಬಂದ ಹಾಗೆ ಬೈಯ್ಯುತ್ತಿದ್ದ. ದನಗಳನ್ನು ಅಟ್ಟಿಕೊಂಡು ಹೋಗುತ್ತ ಅವನು ಸುರಿಸುತ್ತಿದ್ದ ಬೈಗಳ ಸುರಿಮಳೆಯನ್ನು ಬೆಟ್ಟಕ್ಕೆ ಬೆಟ್ಟವೇ ಪ್ರತಿಧ್ವನಿಸು-ತ್ತಿತ್ತು. ಅವನನ್ನು ಬಿಟ್ಟರೆ ಈ ಕೆಲಸಕ್ಕೆ ಬೇರೆಯವರು ಇಲ್ಲ. ಇದಕ್ಕಾಗಿ ಅವನಿಗೆ ಪ್ರತಿ ಮನೆಯವರೂ ನಾಲ್ಕಾಣೆ ಕೊಡುತ್ತಿದ್ದರು. ಇದಕ್ಕಿಂತ ಹೆಚ್ಚಿನ ಕೆಲಸ ಯಾವುದನ್ನೂ ಅವನಿಗೆ ವಹಿಸುತ್ತಿರಲಿಲ್ಲ ದಿನದ ಕೆಲಸ ಮುಗಿದಾಗ ಸ್ವಾಮೀಜಿಯನ್ನು ನೋಡಲು ಓಡಿಬರದೆ ಇದ್ದ ಕೆಲವೇ ಜನರಲ್ಲಿ ಅವನೂ ಒಬ್ಬ. ಆದರೆ ಇಂದು ಸ್ವಾಮೀಜಿಯ ಬಳಿ ಬಂದಿದ್ದ. ಬಾಕಿಯವರಿಗೆ ರಾತ್ರಿಯ ಹೊಡೆದಾಟದ ಚಿಂತೆಯೇ ಚಿಂತೆ. ಅದೂ ಅಲ್ಲದೆ ಈ ಕ್ಷಾಮದಿಂದ ಅವನಿಗೆ ಹಸುಗಳನ್ನು ಹೊಡೆದುಕೊಂಡು ಹೋಗುವ ಕೆಲಸ ತಪ್ಪಿಹೋಗಿತ್ತು.

ಮಣ್ಣಿನಲ್ಲಿ ಒದ್ದಾಡಿ ಬರಲು ಹಸುಗಳನ್ನು ಕಳುಹಿಸುವುದಾಗಲೀ, ಈ ಮೂರ್ಖನಿಗೆ ನಾಲ್ಕಾಣೆ ಕೊಡುವುದಾಗಲೀ ಯಾರಿಗೂ ಬೇಕಾಗಿರಲಿಲ್ಲ.

ಈ ದಿನ ಬೆಳಗ್ಗೆ ಪಾಳುಗುಡಿಗೆ ಬಂದಾಗ ಅವನನ್ನು ಯಾರೂ ಕಳುಹಿಸಿರಲಿಲ್ಲ. ಈಗಲಾದರೂ ಸ್ವಾಮೀಜಿಯವರ ಹರಕೆ ಪಡೆದು ಬರೋಣವೆಂದು ಅವನಾಗಿಯೇ ಬಂದಿದ್ದ.

ಹೊಡೆದಾಟದ ವಿಷಯವನ್ನು ಸ್ವಾಮೀಜಿಗೆ ತಿಳಿಸುವುದು ರೈತರಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಅಂತಹ ಶಾಂತಿಮೂರ್ತಿಯ ಬಳಿಗೆ ಹೋಗಿ ಈ ಹಿಂಸೆಯ ವೃತ್ತಾಂತವನ್ನು ತಿಳಿಸುವುದೇ? ಆದರೆ ಈ ಹುಡುಗ ವೃತ್ತಾಂತವನ್ನು ತಂದಿದ್ದಷ್ಟೇ ಅಲ್ಲ, ಅವರು ಮಾಡುತ್ತಿರುವುದು ಸರಿಯೆಂದೂ ಹೇಳಿದ್ದ.

"ಆದರೆ ಸ್ವಾಮೀಜಿ, ಅವರು ನಮ್ಮ ಅಣ್ಣನಿಗೆ ಮುಖ ಮೋತಿ ನೋಡದೆ ಹೊಡೆದಿದಾರಲ್ಲ, ಹೊಡೀಬಹುದೋ?"

"ಆದರೆ ಆ ಅಂಗಡಿಯವನನ್ನು ಹೊಡೆದೋನು ನೀನು ತಾನೆ?"

"ನಾನು ಹೊಡೀಲಿಲ್ಲ. ಅವನನ್ನು ಹೊಡೆದೋನು........" ಹುಡುಗ ಒಂದಿಷ್ಟು ಜನರ ಹೆಸರನ್ನು ಹೇಳಿದ.

ಅವನ ಜೊತೆ ಮಾತಾಡಿ ಪ್ರಯೋಜನವಿಲ್ಲವೆಂದೆಸಿತು. ಬೇರೇನೂ ಮಾತಾಡಲು ಸಾಧ್ಯವಾಗದೆ ರಾಜು—

"ಹಾಗೆಲ್ಲ ಹೊಡೆದಾಡಬಾರದು, ಇದರಿಂದ ಒಳ್ಳೇದಾಗೋಲ್ಲ" ಎಂದು ಮಾತ್ರ ಹೇಳಿದ. ಇನ್ನು ಹೆಚ್ಚಾಗಿ ಅವನಿಗೆ ಶಾಂತಿಮಂತ್ರವನ್ನು ಬೋಧಿಸಿ ಪ್ರಯೋಜನವಿರಲಿಲ್ಲ.

"ನಾವು ಹೊಡೀವೆ ಹೋದರೆ ಅವರು ಹೊಡಿಯೋದಕ್ಕೆ ಬರುತ್ತಾರೆ.... ಹೊಡೆದು-ಬಡೆದು ಸಾಯಿಸಿಬಿಡುತ್ತಾರೆ."

ಹಳ್ಳಿಯಲ್ಲಿ ಇಷ್ಟೊಂದು ಗಲಭೆಯಾಗುವುದು ರಾಜುವಿಗೆ ಬೇಕಾಗಿರಲಿಲ್ಲ. ಈ ಗಪ್ಪಲದಲ್ಲಿ ಪೋಲೀಸಿನೋರು ಹಳ್ಳಿಗೆ ಬಂದರೂ ಬಂದರು. ರಾಜು ಉಪದೇಶ ಮಾಡುವ ಗೊಡವೆಗೆ ಹೋಗದೆ ಆ ಹುಡುಗನ ರಟ್ಟೆ ಹಿಡಿದು ಹೇಳಿದ

"ಊರಿಗೆ ಹೋಗಿ ಈ ಹೊಡೆದಾಟ ನಿಲ್ಲಿಸಬೇಕು ಅಂತ ವೇಲನ್‌ನಿಗೆ ಹೇಳು. ಮುಂದೆ ಏನು ಮಾಡಬೇಕೂಂತ ನಾನು ಹೇಳುತ್ತೀನಿ." ಹುಡುಗ

ತನ್ನ ಹಿಂದಿನ ಧಾಟಿಯಲ್ಲೇ ಮಾತನಾಡಲು ಆರಂಭಿಸಿದ್ದನ್ನು ನೋಡಿ—

"ಸುಮ್ಮನೆ ಹರಟಬೇಡ. ನಾನು ಏನು ಹೇಳಿದೆನೋ ಅದನ್ನು ನಿಮ್ಮ ಅಣ್ಣನಿಗೆ ಹೋಗಿ ಹೇಳು" ಎಂದ.

ಅವನ ಮಾತಿನಲ್ಲಿದ್ದ ಕಾವನ್ನು ಗಮನಿಸಿ ಹುಡುಗ ಮುಂದೆ ಮಾತನಾಡಲಿಲ್ಲ.

"ಆಗಲಿ ಸ್ವಾಮೀಜಿ."

"ನಿಮ್ಮಣ್ಣ ಎಲ್ಲೇ ಇರಲಿ. ಅವನಿಗೆ ಹೋಗಿ ಹೇಳು. ಅವರು ಹೀಗೆಲ್ಲಾ ಹೊಡೆದಾಟವಾಡುತ್ತಾ ಇದ್ದರೆ ನಿಲ್ಲಿಸೋತನಕ ನಾನು ಊಟ ಮಾಡೋಲ್ಲ ಅಂತ."

"ಏನೂ ತಿನ್ನೋಲ್ಲ ಅಂತಲೆ?"

"ತಿನ್ನೋಲ್ಲವಂತೆ ಅಂತ ಹೇಳು. ಏನು ಎತ್ತ ಎಂದು ಕೇಳಬೇಡ. ಅವರು ಒಳ್ಳೆಯವರು ಆಗೋತನಕ ತಿನ್ನೋಲ್ಲ."

ಅವರ ಜಗಳಕ್ಕೂ ಈ ಮನುಷ್ಯನ ಊಟ-ತಿಂಡಿಗೂ ಏನು ಸಂಬಂಧ ಎನ್ನುವುದು ಅವನ ಮಂದ ಬುದ್ಧಿಗೆ ಹೊಳೆಯಲಿಲ್ಲ. "ಏನೂ ತಿನ್ನೋಲ್ಲವೆ?" ಎಂದು ಮತ್ತೆ ಕೇಳಬೇಕೆಂದಿದ್ದವನು ಕೇಳದೆ ಹಾಗೇ ಸುಮ್ಮನಾದ. ಸ್ವಾಮೀಜಿ ಮತ್ತೆ ತನ್ನ ರಟ್ಟೆ ಹಿಡಿಯಬಹುದೆಂದು ಭಯವಾಯಿತು. ಇಲ್ಲಿಗೆ ಯಾಕಾದರೂ ಬಂದೆನೋ ಎನ್ನಿಸಿತು. ಒಬ್ಬನೇ ಬರಬಾರದಾಗಿತ್ತು. ಈ ಗಡ್ಡದ ಜೋಗಿ ತನ್ನನ್ನು ತಿನ್ನಲೂ ತಿಂದುಬಿಡಬಹುದು.

"ಆಗಲಿ ಸ್ವಾಮೀಜಿ, ನೀವು ಹೇಳಿದ ಹಾಗೇ ಹೇಳುತ್ತೇನೆ" ಎಂದವನೇ ಮಿಂಚಿನ ವೇಗದಲ್ಲಿ ಆ ಸ್ಥಳದಿಂದ ಮಾಯವಾದ.

ಊರಿನ ಹಿರಿಯರ ಸಭೆ ನಡೆಯುತ್ತಿದ್ದ ಜಾಗಕ್ಕೆ ಹೋಗುವ ಹೊತ್ತಿಗೆ ಅವನಿಗೆ ಮೇಲುಸಿರು ಬರುತ್ತಿತ್ತು. ಹಳ್ಳಿಯ ಹಿರಿಯರೆಲ್ಲ ಊರಿನ ಒಂದು ಕಡೆಯಲ್ಲಿ ವೇದಿಕೆಯ ಸುತ್ತಲೂ ಕುಳಿತಿದ್ದರು. ಹಳ್ಳಿಗೆ ಆ ವೇದಿಕೆ ಪುರಭವನ ಇದ್ದ ಹಾಗೆ. ಅದರ ಸುತ್ತಲೂ ಬೇಕಾದಷ್ಟು ಜಾಗವಿತ್ತು. ಬಿಸಿಲಿನ ಬೇಗೆ ಇಲ್ಲದ ಹಾಗೆ ದೊಡ್ಡ ಮರಗಳ ನೆರಳಿನಲ್ಲಿ ಒಂದು ಕಡೆ ಹಳ್ಳಿಯ ಹಿರಿಯರು ಕೂತಿದ್ದರು. ಇನ್ನೊಂದು ಕಡೆ ಮಕ್ಕಳೊಡನೆ ಹೊತ್ತ ಹೆಂಗಸರು ಆಯಾಸ ಪರಿಹರಿಸಿಕೊಳ್ಳುತ್ತಿದ್ದರೆ, ಮಕ್ಕಳು ಒಬ್ಬರನ್ನೊಬ್ಬರು ಅಟ್ಟಿಸಿ-

ಕೊಂಡು ಓಡುತ್ತ ಆಟವಾಡುತ್ತಿದ್ದರು. ಹಳ್ಳಿಯ ನಾಯಿಗಳು ಅಲ್ಲಲ್ಲೇ ಮಲಗಿ ನಿದ್ರಿಸುತ್ತಿದ್ದವು.

ಈ ಸಭೆಯಲ್ಲಿ ತಮಗೆ ಒದಗಿದ್ದ ಕ್ಷಾಮವೂ ಅದರ ಪರಿಣಾಮವಾಗಿ ಆದ ಈ ಬಡಿದಾಟವೂ, ಅವುಗಳ ಬಗ್ಗೆ ಅವರು ಕೈಕೊಳ್ಳಬೇಕಾದ ಕಾರ್ಯ-ಕ್ರಮವೂ ನಿರ್ಧಾರವಾಗಬೇಕಿತ್ತು.

ಸ್ವಾಮೀಜಿಗೆ ಈ ವಿಷಯ ಹೇಳಬೇಕೆ, ಬೇಡವೆ? ತಾವೇ ಒಂದು ನಿರ್ಧಾರಕ್ಕೆ ಬರುವವರೆಗೂ ಅವರಿಗೆ ಈ ವಿಷಯವನ್ನು ತಿಳಿಸಬಾರದು. ಈ ವಿಷಯಕ್ಕೆಲ್ಲಾ ಅವರು ಒಪ್ಪೋದಿಲ್ಲ. ಆ ಅಂಗಡಿಯವನನ್ನು ಮಟ್ಟಹಾಕ-ಬೇಕಾದಲ್ಲಿ ಸಂದೇಹವೇ ಇರಲಿಲ್ಲ. ಮಾತಾಡುತ್ತಿದ್ದವರಲ್ಲಿ ಅನೇಕರು ಹಿಂದಿನ ರಾತ್ರಿ ಏಟುಗಳನ್ನು ತಿಂದಿದ್ದರು. ಮುಖ-ಮೈಮೇಲೆಲ್ಲಾ ಗಾಯದ ಕಲೆ-ಗಳು. ಆದರೆ ಪೋಲೀಸಿನವರು ಬಂದರೆ ಏನು ಗತಿ? ಹಿಂದೆ ಒಂದು ಸಲ ಒಂದು ಗುಂಪಿನವರಿಗೂ ಇನ್ನೊಂದು ಗುಂಪಿನವರಿಗೂ ಹೊಡೆದಾಟವಾದಾಗ ಸರಕಾರದವರು ಒಂದು ಪೋಲೀಸ ಪಡೆಯನ್ನು ಹಳ್ಳಿಯಲ್ಲಿ ಯಾವಾಗಲೂ ಇರೋಹಾಗೆ ಮಾಡಿಬಿಟ್ಟಿದ್ದರು. ಸಾಲದ್ದಕ್ಕೆ ಅವರ ತಿಂಡಿ-ಊಟದ ಖರ್ಚೆಲ್ಲಾ ಹಳ್ಳಿಗರೇ ವಹಿಸಬೇಕಾಗಿ ಬಂತು.

ಇಂತಹ ಸಭೆಯೊಳಗೆ ನುಗ್ಗಿಬಂದ ವೇಲನ್‌ನ ತಮ್ಮ.

"ಏನೋ ಅದು ತಮ್ಮ ಏನೋ?"

ಮಾತಾಡುವುದಕ್ಕೆ ಸ್ವಲ್ಪ ನಿಂತು ಸುಧಾರಿಸಿಕೊಳ್ಳಬೇಕಾಗಿತ್ತು. ಆದರೆ ಅಷ್ಟರಲ್ಲೇ ನಾಲ್ಕಾರು ಜನ ಅವನ ರಟ್ಟೆ ಹಿಡಿದು ಅಲ್ಲಾಡಿಸಿದಾಗ ಅವನು ವಿಧಿಯಿಲ್ಲದೆ ಬಾಯಿಬಿಟ್ಟ :

"ಸ್ವಾಮಿಗಳಿಗೆ..........ಸ್ವಾಮಿಗಳಿಗೆ ಊಟ, ತಿಂಡಿ ಏನೂ ಬೇಡ-ವಂತೆ.......ಇನ್ನು ಮೇಲೆ ಏನೂ ತಕ್ಕೊಂಡು ಹೋಗಬೇಡಿ."

"ಯಾಕೆ, ಯಾಕೆ ಏನಾಯಿತು?"

"ಮಳೆ ಬೀಳುತ್ತಾ ಇಲ್ಲವಲ್ಲ, ಅದಕ್ಕೆ. ಆಮೇಲೆ.......ಆಮೇಲೆ ಈ ಹೊಡೆದಾಟ ಬಡೆದಾಟ ಮಾಡಕೂಡದಂತೆ."

"ಅಲ್ಲಿಗೆ ಹೋಗೋಕೆ ನಿನಗ್ಯಾರು ಹೇಳಿದರು?"

"ನಾನು ಬೇಕೂಂತ ಅಲ್ಲಿಗೆ ಹೋಗಲಿಲ್ಲ........ಏನೋ ಹೋದೆ...."

ಕೇಳಿದರು ಹೇಳಿದೆ."

"ಏನು ಹೇಳಿದೆಯೊ ಬೊಗಳು."

ಇದ್ದುದನ್ನು ಇದ್ದಹಾಗೆ ಹೇಳಿದರೆ ತನಗೆ ಕಪಾಳ ಮೋಕ್ಷವೇ ಗತಿ-ಯೆಂದು ತಿಳಿದು ಹುಡುಗನಿಗೆ ಭಯವಾಯಿತು. ಅಲ್ಲಿ ಹೋದರೆ ಆ ಸ್ವಾಮೀಜಿ ರಟ್ಟೆ ಹಿಡಿದು ಗಡ್ಡದಿಂದ ಮುಖಕ್ಕೆ ತಿವಿದಿದ್ದರು. ಇಲ್ಲಿ ಈ ಜನ ಕುತ್ತಿಗೆಗೇ ಕೈ ಹಾಕಿದ್ದರು. ಈ ತಾಪತ್ರಯಕ್ಕೆಲ್ಲ ಯಾಕೆ ಸಿಕ್ಕಿಕೊಂಡೆ ಎನಿಸುತ್ತಿತ್ತು. ಸ್ವಾಮೀಜಿಗೆ ಈ ಸುದ್ದಿ ತಾನು ಹೇಳಿದೆ ಅಂತ ತಿಳಿದರೆ ನನ್ನನ್ನು ಹುರಿದು ಮುಕ್ಕಿಬಿಡುತ್ತಾರೆ. ಆದ್ದರಿಂದ ಸಾಧ್ಯವಾದಷ್ಟು ಮಟ್ಟಿಗೆ ತಾನು ಹೇಳಿದ ಹೊಡೆದಾಟದ ವಿಷಯವನ್ನು ಮುಚ್ಚಿಟ್ಟು ಕೇಳಿದಾಗ ಕಣ್ಣು-ಕಣ್ಣು ಬಿಟ್ಟ. ಆದರೆ ಅವರು ಬಿಡಲಿಲ್ಲ.

"ಏನು ಬೊಗಳಿದೆಯೊ ಅವರ ಮುಂದೆ?"

"ಮಳೆ ಬೀಳುತ್ತಾ ಇಲ್ಲ ಅಂತ."

"ಬಲು ದೊಡ್ಡ ಮನುಷ್ಯ. ನೀನು ಹೋಗಿ ಹೇಳೋತನಕ ಅವರಿಗೆ ತಿಳಿವೇ ಇರಲಿಲ್ಲವೇನೋ ಪಾಪ, ಅಲ್ಲವೆ?" ಅವರು ನಕ್ಕರು. ಅವನೂ ನಕ್ಕ.

ಅಷ್ಟು ಹೊತ್ತಿಗೆ ಸ್ವಾಮೀಜಿಯವರ ಉಪವಾಸದ ವಿಷಯ ಹೇಳಿ-ಬಿಡುವುದೇ ಉತ್ತಮ ಎನಿಸಿತು. ಮುಂದೆ ಎಂದಾದರೂ ವಿಷಯ ತಿಳಿದರೆ ಆಮೇಲೆ ತನ್ನ ಗತಿ ದೇವರೇ ಗತಿ.

"ಎಲ್ಲಾ ಸರಿ ಹೋಗೋತನಕ ಅವರಿಗೆ ಊಟ ಬೇಡವಂತೆ."

ಅವನು ಅಷ್ಟು ಒತ್ತಿ ಹೇಳಿದ್ದನ್ನು ಕೇಳಿ ಅವರಿಗೆ ಆಶ್ಚರ್ಯವಾಯಿತು.

"ಏನು ಹೇಳಿದರೂಂತ ಸರಿಯಾಗಿ ಹೇಳು."

ಹುಡುಗ ಒಂದು ನಿಮಿಷ ಸುಮ್ಮನಿದ್ದು ಹೇಳತೊಡಗಿದ:

"ಇನ್ನುಮೇಲೆ ಊಟ-ತಿಂಡಿ ತರಬೇಡ ಅಂತ ನಿಮ್ಮಣ್ಣನಿಗೆ ಹೇಳು. ನಾನು ಏನೂ ತಿನ್ನೋಲ್ಲ. ನಾನು ಏನೂ ತಿನ್ನದೆಹೋದರೆ ಆಗ ಎಲ್ಲ ಸರಿ-ಹೋಗುತ್ತೆ."

ಏನೂ ತಿಳಿಯುಲಾರದೆ ಅವರು ಅವನನ್ನೇ ನೋಡಿದರು. ಎಲ್ಲರ ಮುಖಗಳ ಮೇಲೆ ಭಯ, ಆಶ್ಚರ್ಯ. ತನಗೆ ಅಷ್ಟೊಂದು ಪ್ರಾಮುಖ್ಯತೆ

ಬರತೊಡಗಿದ್ದುದನ್ನು ಕಂಡು ಅವನಿಗೆ ಸಂತೋಷವಾಯಿತು. ಹಳ್ಳಿಯವರು ಸ್ವಲ್ಪಹೊತ್ತು ಮಾತಾಡಲಿಲ್ಲ. ಆಮೇಲೆ ಅವರಲ್ಲೊಬ್ಬ, "ಇಂತಹ ಸ್ವಾಮಿ-ಗಳು ನಮ್ಮೂರಲ್ಲಿರೋದು ನಮ್ಮ ಭಾಗ್ಯ. ಅವರಿಲ್ಲಿರೋ ತನಕ ನಮಗೆ ಏನು ಕಷ್ಟ ಬಂದರೂ ಪರಿಹಾರವಾಗಿಬಿಡುತ್ತೆ. ಅವರು ಮಹಾತ್ಮರ ಹಾಗೆ ಗಾಂಧೀಜಿ ಹಾಗೇ ಉಪವಾಸ ಮಾಡಿದಾಗ ನಮ್ಮ ಭಾರತದಲ್ಲಿ ಎಂತಹ ಅದ್ಭುತ ಕೆಲಸಗಳಾದವು. ಅವರು ಉಪವಾಸ ಮಾಡಿದರೆ ಮಳೆ ಬರೋದು ಖಂಡಿತ. ಎಂತಹ ಪ್ರೇಮ! ಎಂತಹ ತ್ಯಾಗ! ಗಂಗೇನ ತರೋದಕ್ಕೆ ಭಗೀರಥ ತಪಸ್ಸು ಮಾಡಲಿಲ್ಲವೆ ಅನ್ನ ನೀರು ಬಿಟ್ಟು? ಮಹಾತ್ಮರಿಗೆ ಮಾತ್ರ ಇಂತಹ ಕೆಲಸ ಮಾಡೋದಕ್ಕೆ ಸಾಧ್ಯ."

ನಿರಾಸೆಯ ಕತ್ತಲು ಕಳೆದು ಎಲ್ಲೆಲ್ಲೂ ಬೆಳಕು ಮೂಡತೊಡಗಿತು. ಹೊಡೆದಾಟ ಬಡಿದಾಟವೆಲ್ಲ ಮರೆತುಹೋಯಿತು.

ಹಳ್ಳಿಯಲ್ಲೆಲ್ಲಾ ಇದರ ಮಾತೇ ಮಾತು. ನದಿಯ ದಡದಲ್ಲಿ ಮೊಸಳೆ-ಯೊಂದು ಸಾಕಾಗುವಷ್ಟು ನೀರಿಲ್ಲದೆ ಬಿಸಿಲಿನಲ್ಲಿ ಬಿದ್ದು ಸತ್ತುಹೋಗಿದೆ-ಯೆಂದು ಯಾರೊ ಸಮಾಚಾರ ತಂದರು. ಹತ್ತಿರದ ಹಳ್ಳಿಯಲ್ಲಿ ನೀರಿನಲ್ಲಿ ಮುಳುಗಿಹೋಗಿದ್ದ ದೇವಸ್ಥಾನ ಮೇಲಕ್ಕೆ ಕಾಣುತ್ತಿದೆಯೆಂದು ಇನ್ನೊಬ್ಬರ ವರ್ತಮಾನ. ನೂರು ವರ್ಷಗಳ ಹಿಂದೆ ನೀರಿನಲ್ಲಿ ಮುಳುಗಿಹೋಗಿದ್ದರೂ ಗುಡಿಯೊಳಗಿದ್ದ ದೇವರು ಅಚ್ಚಳಿಯದಂತಿತ್ತು. ಗುಡಿಯ ಸುತ್ತಲೂ ಇದ್ದ ನಾಲ್ಕು ತೆಂಗಿನ ಮರಗಳು ಇನ್ನೂ ಅಲ್ಲೇ ಇವೆಯಂತೆ. ಇತ್ಯಾದಿ ಇತ್ಯಾದಿ. ಪ್ರತಿ ಘಂಟೆಗೆ ಬರುತ್ತಿದ್ದ ವಿವರಗಳ ಸಂಖ್ಯೆ ಒಂದಕ್ಕೆ ನಾಲ್ಕಾಯಿತು. ನೂರಾರು ಜನ ನೀರಿನಲ್ಲಿ ಮುಳುಗಿ ನೀರಿನಲ್ಲಿ ಮೇಲೆದ್ದಿದ್ದ ದೇವಸ್ಥಾನ ನೋಡಲು ಹೊರಟರು. ಕೆಲವರು ಎಚ್ಚರಿಕೆಯಿಂದ ನಡೆಯದೆ ನದಿಯ ಬದಿಯಲ್ಲಿ ಕಾಲಿಟ್ಟು ಒಳಗೇ ಹೂತುಹೋದರು. ಆದರೂ ಜನರು ಹೆದರ-ಲಿಲ್ಲ. ಅಂಗಡಿಯವನ ವಿಷಯದಲ್ಲಿ ಅಯ್ಯೋ ಪಾಪವೆನ್ನುವಷ್ಟು ಅವರ ಭಾವನೆಗಳು ಬದಲಾದವು.

"ಏನೇ ಆಗಲಿ, ಅವನು ಅಂಗಡಿಯವನನ್ನು ಬೋ........ಮಗ ಅಂತ ಅನ್ನಬಾರದಾಗಿತ್ತು........"

"ಎಷ್ಟೇ ಆದರೂ ಬಂಧು-ಬಳಗ ಅಂದರೆ ಸಹಾಯ ಮಾಡೋದು

ನ್ಯಾಯ. ಅಂಗಡಿಯವನಿಗೆ ಅವನ ಬಂಧುಗಳು ಸಹಾಯ ಮಾಡಿದ್ದು ಏನೂ ಆಶ್ಚರ್ಯವಿಲ್ಲ."

ಅಲ್ಲಿದ್ದವರೆಲ್ಲಾ ತಮ್ಮ ತಮ್ಮ ಗಾಯಗಳನ್ನು ಮುಚ್ಚಿಕೊಂಡರು. ಆದರೆ ಅವರನ್ನು ಹಾಗೆ ಬಿಟ್ಟುಬಿಡೋದೆ. ಸುಮ್ಮನೆ ಹಾಗೆ ಬಿಡದೆ ಯಾರಾದರೂ ಮೂರನೆಯವರೊಬ್ಬರಿಂದ ಹೇಳಿಸಿ ಅವರಿಂದ ತಮಗಾಗಿದ್ದ ನಷ್ಟದ ವೆಚ್ಚವನ್ನು ಪಡೆಯಬೇಕೆಂದು ತೀರ್ಮಾನವಾಯಿತು. ಇಷ್ಟೊಂದು ಕ್ರಾಂತಿ ಹೀಗೆ ಶಾಂತಿಯುತವಾಗಿ ಮುಕ್ತಾಯವಾದದ್ದರಿಂದ ಅದಕ್ಕೆ ಕಾರಣರಾದ ಸ್ವಾಮಿಗಳಿಗೆ ವಂದಿಸಿ ಬರಲು ಊರಿಗೆ ಊರೇ ದೇವಸ್ಥಾನಕ್ಕೆ ಹೊರಟಿತು.

ರಾಜು ಎಂದಿನಂತೆ ಊಟಕ್ಕಾಗಿ ಕಾಯುತ್ತಿದ್ದನು. ಹಣ್ಣು-ಹಂಪಲೇನೋ ಇತ್ತು. ಆದರೆ ಹಸಿವನ್ನು ಅಡಗಿಸುವ ರೀತಿ ಊಟ ಇನ್ನೂ ಬಂದಿರಲಿಲ್ಲ. ಏನಾದರೂ ತಿನ್ನಬೇಕೆನಿಸಿದರೆ ಸೂಕ್ಷ್ಮವಾಗಿ ಅದನ್ನು ಅವರಿಗೆ ತಿಳಿಸುತ್ತಿದ್ದ. ಜನ ಅದು ಅವನ ಯೋಗಾಭ್ಯಾಸಕ್ಕೆ ಬೇಕೇಬೇಕೇನೋ ಎಂದು ತಿಳಿಯುತ್ತಿದ್ದರು. ಒಂದು ಸಲ ತಾನು ಹಿಂದೆ ರೈಲ್ವೆಸ್ಟೇಷನ್ನಿನಲ್ಲಿ ತಿನ್ನುತ್ತಿದ್ದಂತಹ ಬೋಂಡಾ ಎಷ್ಟು ರುಚಿ! ಅದನ್ನು ಯಾವುದರಲ್ಲೇ ಕರಿದಿರಲಿ ಅದರ ರುಚಿಯೇ ರುಚಿ. ಸುಲಭವಾಗಿ ಆಗುತ್ತೆ ಅಂದರೆ ಸೀಮೆ ಎಣ್ಣೇಲಿ ಕರಿಯೋಕೆ ಆ ಮಾರುವವನು ಸಿದ್ಧನಾಗಿದ್ದ! ಆದರೂ ಅವನು ತರುತ್ತಿದ್ದ ತಿಂಡಿಗಳೆಲ್ಲಾ ಚೆನ್ನಾಗಿರುತ್ತಿದ್ದವು. ಅಂದು ಸಂಜೆ ಭಗವದ್ಗೀತೆಯ ಮೇಲೆ ಉಪನ್ಯಾಸ ಮಾಡುತ್ತಿರಬೇಕಾದರೆ ಇದ್ದಕ್ಕಿದ್ದ ಹಾಗೆ ಬೋಂಡದ ನೆನಪಾಯಿತು. ಹೇಗಿದ್ದರೂ ಒಲೆಯಿದೆ, ಇದ್ದಲಿಯಿದೆ, ಎಣ್ಣೆ ಇದೆ. ಒಂದಿಷ್ಟು ಈರುಳ್ಳಿ, ಆಲೂಗಡ್ಡೆ, ಹಸಿ ಮೆಣಸಿನಕಾಯಿ, ಕೊತ್ತಂಬರೀ ಸೊಪ್ಪು. ಕಡಲೇ ಹಿಟ್ಟು ತರಿಸಿಕೊಂಡು ತಾನೇ ಯಾಕೆ ಮಾಡಿ ನೋಡಬಾರದು? ಜನಕ್ಕೆ ಉಪಾಯವಾಗಿ ಸೂಚಿಸಿದ್ದೂ ಆಯಿತು.

ದೂರದಲ್ಲಿ ಜನ ಬರುತ್ತಿರುವುದನ್ನು ನೋಡಿ ರಾಜುವಿನ ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಯಿತು. ಗಡ್ಡವನ್ನು ನೀವಿಕೊಂಡು, ಜುಟ್ಟು ಸರಿಪಡಿಸಿಕೊಂಡು, ಕೈಯಲ್ಲೊಂದು ಪುಸ್ತಕವನ್ನು ಹಿಡಿದು ಯಥಾಪ್ರಕಾರ ತನ್ನ ಪಾತ್ರವನ್ನು ಅಭಿನಯಿಸಲು ಕುಳಿತನು. ತಲೆಯೆತ್ತಿ ನೋಡಿದಾಗ ಎಂದಿಗಿಂತ ಹೆಚ್ಚು ಜನ ಬರುತ್ತಿರುವುದು ಕಂಡಿತು. ಒಂದು ನಿಮಿಷ ಆಶ್ಚರ್ಯ-

ವಾದರೂ ಕಾರಣ ಹೊಳೆಯಿತು. ಹೊಡೆದಾಟವನ್ನು ನಿಲ್ಲಿಸಿದ್ದಕ್ಕಾಗಿಯೇ ಇರಬೇಕು. ಅಂತೂ ಕೊನೆಗೂ ಹಳ್ಳಿಗೆ ಉಪಯೋಗವಾಗುವಂತಹ ಕೆಲಸ ಮಾಡಿದೆನಲ್ಲ. ಅಂತೂ ವೇಲನ್‌ನ ಆ ಮೂರ್ಖ ತಮ್ಮ ಅಂತಹ ಮೂರ್ಖ-ನೇನೂ ಅಲ್ಲ. ಕಡಲೆಹಿಟ್ಟು ತಂದಿದ್ದಾರೋ ಇಲ್ಲವೋ; ತಂದಿದ್ದರೆ ಅಡಿಗೆ ಮಾಡಿಕೊಳ್ಳುವ ಜಾಗದಲ್ಲಿ ಇಟ್ಟುಹೋಗುತ್ತಾರೆ.

ಮಂಟಪದ ಬಳಿ ಬರುವ ಹೊತ್ತಿಗೆ ಅವರ ಕಾಲಸಪ್ಪಳದ ಸದ್ದು ಕಡಿಮೆಯಾಯಿತು. ರಾಜುವಿನ ದಿವ್ಯ ಸಾನ್ನಿಧ್ಯದ ಬಳಿ ನಿಂತಾಗ ಮಕ್ಕಳೂ ಬಾಯಿಬಿಡುತ್ತಿರಲಿಲ್ಲ.

ಹಿಂದಿನಂತೆಯೇ ಅಂದೂ ಬಂದವರೆಲ್ಲ ಅವನ ಸುತ್ತಲೂ ಕುಳಿತು-ಕೊಂಡರು. ಹೆಣ್ಣುಮಕ್ಕಳು ನೆಲವನ್ನು ಗುಡಿಸಿ, ಹಣತೆಗಳಿಗೆ ಎಣ್ಣೆ, ಬತ್ತಿ ಹಾಕಿದರು. ಹತ್ತು ನಿಮಿಷ ಕಳೆಯುವ ವರೆಗೂ ರಾಜು ಅವರ ಕಡೆ ನೋಡ-ಲಿಲ್ಲ. ಮಾತಾಡಲೂ ಇಲ್ಲ. ಸುಮ್ಮನೆ ತನ್ನ ಪುಸ್ತಕದ ಹಾಳೆಗಳನ್ನು ತಿರುವಿ-ಹಾಕುತ್ತಿದ್ದನು. ಆಮೇಲೆ ತಲೆಯೆತ್ತಿ ನೆರೆದಿದ್ದವರನ್ನು ಒಂದು ಸಲ ನೋಡಿ ವೇಲನ್‌ನನ್ನು ದೃಷ್ಟಿಸುತ್ತ—

“ಶ್ರೀಕೃಷ್ಣಪರಮಾತ್ಮ ಏನು ಹೇಳುತ್ತಾನೆಂದರೆ........” ಮಿಣುಕು ದೀಪದಲ್ಲಿ ಅವನ ವ್ಯಾಖ್ಯಾನ ಮುಂದುವರಿಯಿತು. ಒಳ್ಳೆಯ ತಿಂಡಿಯನ್ನು ತಿನ್ನುವುದರಿಂದ ಹಿಡಿದು ದೇವರಲ್ಲಿ ಸಂಪೂರ್ಣ ಭಕ್ತಿಯನ್ನಿಡುವ ವರೆಗೂ ಹರಿಯಿತು ಅವನ ವೇದಾಂತದ ವಾಕ್-ಝರಿ.

ಮಧ್ಯದಲ್ಲಿ ಯಾರೂ ಉಸಿರೆತ್ತಲಿಲ್ಲ. ಒಂದು ಘಂಟೆಯ ನಂತರ ರಾಜು ಸ್ವಲ್ಪ ನಿಲ್ಲಿಸಿದಾಗ ವೇಲನ್, “ಸ್ವಾಮೀಜಿ, ನಿಮ್ಮ ಪ್ರಾರ್ಥನೆಯಿಂದ ನಮ್ಮ ಹಳ್ಳಿ ನಿಜವಾಗಿಯೂ ಪಾವನವಾಗುತ್ತೆ. ನಿಮ್ಮ ವ್ರತ ಸಾಂಗವಾಗಿ ನೆರವೇರಲಿ ಅಂತ ಹಳ್ಳೀಲಿರೋ ಪ್ರತಿಯೊಬ್ಬರೂ ಹಗಲು–ರಾತ್ರಿ ಪೂಜೆ ಮಾಡುತ್ತೇವೆ.”

ರಾಜುವಿಗೆ ಆಶ್ಚರ್ಯವಾಯಿತು. ಆದರೆ ಅವರು ಮಾತಾಡುವ ರೀತಿಯೇ ಅದು ಎಂದು ಸುಮ್ಮನಾದನು. ಜಗಳವಾಡದ ಹಾಗೆ ಅವರ ತಲೆಗೆ ವಿವೇಕ ತುಂಬಿದ್ದಕ್ಕಾಗಿ ಹೀಗೆ ತನ್ನನ್ನು ಹೊಗಳುತ್ತ ಇರಬೇಕು. ಆದರೆ ಒಬ್ಬೊ-ಬ್ಬರೂ ಹೊಗಳಿಕೆ-ಸುರಿಮಳೆ ಸುರಿಸತೊಡಗಿದರು. ಒಬ್ಬ ಹೆಂಗಸು ಬಂದು

ಅಡ್ಡಬಿದ್ದಳು.

"ಏನು ತಾಯಿ, ನಾನು ಎಷ್ಟು ಸಲ ಹೇಳಿಲ್ಲ, ಹೀಗೆ ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನ ಕಾಲಿಗೆ ಅಡ್ಡಬೀಳಬಾರದು ಅಂತ."

"ನೀವು ಮನುಷ್ಯರಲ್ಲ ಸ್ವಾಮೀಜಿ, ಮಹಾತ್ಮರು. ನಿಮ್ಮ ಕಾಲಿನ ಧೂಳು ಸಿಕ್ಕಿದರೆ ಅದೇ ನಮಗೆ ಭಾಗ್ಯ."

"ಛೆಛೆ.... ...ಎಲ್ಲಾದರೂ ಉಂಟೆ?" ಎಂದು ರಾಜು ಕಾಲನ್ನು ಹಿಂದಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸಿದನು. ಆದರೆ ಅವನ ಸುತ್ತ ಜನರು ಕಿಕ್ಕಿರಿದರು. ರಾಜು ತನ್ನ ಕಾಲನ್ನು ಮುಚ್ಚಿಟ್ಟುಕೊಳ್ಳಲು ವಿಶ್ವಪ್ರಯತ್ನ ಮಾಡಬೇಕಾಯಿತು. ಆದರೆ ಅವರು ಮಾತ್ರ ಅವನನ್ನು ಬಿಡುವ ಹಾಗಿರ-ಲಿಲ್ಲ. ಕೊನೆಗೆ ಅವರಿಗೆ ಮನಸ್ಸು ಬಂದಹಾಗೆ ಮಾಡಲಿ ಎಂದು ನಿಂತು-ಬಿಟ್ಟನು. ಗುಂಪಿನಲ್ಲಿದ್ದವರೆಲ್ಲಾ ಬಂದು ಅವನ ಪಾದಧೂಳಿಯನ್ನು ತಲೆಗೆ ಹಚ್ಚಿಕೊಂಡರು. ಹಿಂದೆ ಎಂದೂ ಇಲ್ಲದಂತಹ ಒಂದು ಗಂಭೀರ ವಾತಾವರಣ ಮಂಟಪವನ್ನು ಆವರಿಸಿತು.

"ನಿಮ್ಮ ತಪಸ್ಸು ಮಹಾತ್ಮಾಜಿಯವರ ತಪಸ್ಸಿನ ಹಾಗೆ. ನಮ್ಮನ್ನು ಬದುಕಿಸೋಕೆ ನಿಮ್ಮಂತಹ ಶಿಷ್ಯನನ್ನು ಇಲ್ಲಿ ಬಿಟ್ಟುಹೋಗಿದ್ದಾರೆ."

ಹೃದಯ ತುಂಬಿಬರುತ್ತಿದ್ದ ಮೆಚ್ಚುಕೆಯ ನುಡಿಯನ್ನು ಬಾಯಲ್ಲಿ ಆಡಿತೋರಿಸಲಾರದೆ ಮೂಕರಾಗಿದ್ದರು ಜನರು. ಅಂತೂ ಏನೋ ವಿಶೇಷ ಸಮಯವಿದ್ದ ಹಾಗಿದೆ ಎನಿಸಿತು ರಾಜುವಿಗೆ. ಜನ ಎಷ್ಟು ಹೊತ್ತಾದರೂ ಅಲ್ಲಿಂದ ಕಾಲ್ದೆಗೆಯುವ ಹಾಗೆ ಕಾಣಲಿಲ್ಲ.

ಸ್ವಾಮೀಜಿ ತಮ್ಮ ಉಪವಾಸ ವ್ರತವನ್ನು ಪ್ರಾರಂಭಿಸಿಬಿಟ್ಟದ್ದಾರೆಂದು ತಿಳಿದುಕೊಂಡು ವೇಲನ್ ಊಟವನ್ನು ತಂದಿರಲಿಲ್ಲ. ಸ್ವಾಮೀಜಿ ಹಳ್ಳಿಗೆ ಬಂದಾಗಿನಿಂದ ವೇಲನ್ ಹಾಗೆ ಊಟ-ತಿಂಡಿ ತರದೆ ಬರಿಗೈಯಲ್ಲಿ ಬಂದುದು ಇದೇ ಮೊದಲನೆಯ ಸಲ. ತಾನು ಉಪವಾಸ ಮಾಡುತ್ತೇನೆಂದು ಹೇಳಿ-ಕಳುಹಿಸಿದ್ದರಿಂದ ತಮ್ಮ ಹೊಡೆದಾಟದ ಯೋಚನೆಯನ್ನೂ ಮರೆತುಬಿಟ್ಟು ಜನ ಹೀಗೆ ಓಡಿಬಂದಿರುವಾಗ, "ಬೋಂಡಾಕ್ಕೆ ಹಿಟ್ಟು ತಂದಿರಾ?" ಎಂದು ಕೇಳುವುದೆ? ಅದೂ ಅಲ್ಲದೆ ಆಗಲೆ ತಾನು ಎರಡು ಸಲ ಊಟಮಾಡಿ ಆಗಿತ್ತು. ಮುಖದಲ್ಲಿ ಆಯಾಸದ ಚಿಹ್ನೆ ಕಂಡರೆ ಅದೂ ಒಳ್ಳೆಯದೆ. ಆದರೆ

ಈ ಜನ ಇನ್ನೂ ಇಲ್ಲಿ ಯಾಕೆ ನಿಂತಿದ್ದಾರೆ ? ರಾಜು ವೇಲನ್‌ನನ್ನು ಪಕ್ಕಕ್ಕೆ ಕರೆದನು. "ಹೆಂಗಸರು, ಮಕ್ಕಳನ್ನು ಮನೆಗೆ ಕಳಿಸಬಾರದೆ? ಆಗಲೆ ಹೊತ್ತು ಬೇಕಾದಷ್ಟಾಗಿದೆ."

ಜನವೆಲ್ಲಾ ಹೊರಟಾಗ ಮಧ್ಯರಾತ್ರಿಯಾಗಿತ್ತು. ಆದರೆ ವೇಲನ್ ಮಾತ್ರ ಹೋಗದೆ ಉಳಿದ. ಕಂಭಕ್ಕೆ ಒರಗಿ ಕುಳಿತುಕೊಂಡ. ಅವನನ್ನು ನೋಡಿ ರಾಜುವಿಗೆ ಆಶ್ಚರ್ಯವಾಯಿತು.

"ನಿದ್ದೆ ಬರೋದಿಲ್ವೆ ವೇಲನ್ ?"

"ಇಲ್ಲ ಗುರು. ನೀವು ಮಾಡುತ್ತಾ ಇರೋ ತ್ಯಾಗದ ಮುಂದೆ ನಾವು ನಿದ್ದೆಗೆಡೋದು ಏನು ಮಹಾ."

"ಅದಕ್ಕೆ ಅಷ್ಟೊಂದು ಮಹತ್ವ ಕೊಡಬೇಕಾಗಿಲ್ಲ. ನನ್ನ ಕರ್ತವ್ಯ ನಾನು ಮಾಡುತ್ತೇನೆ ಅಷ್ಟೆ. ಮನೆಗೆ ಹೋಗಿ ನಿದ್ದೆ ಮಾಡಿ ಬಾ."

"ಇಲ್ಲ ಗುರು, ನಾಳೆ ಬೆಳಿಗ್ಗೆ ಗೌಡರು ಬರುತ್ತಾರೆ. ಅವರು ಬಂದ ಮೇಲೆ ನಾನು ಹೋಗುತ್ತೇನೆ. ಮನೆಗೆ ಹೋಗಿ, ಇರೋ ಕೆಲಸ ಮುಗಿಸಿ ಮತ್ತೆ ಬರುತ್ತೇನೆ."

"ಇಲ್ಲಿ ಯಾವಾಗಲೂ ಯಾರಾದರೂ ಒಬ್ಬರಿರುವುದು ಅನವಶ್ಯಕ. ನಾನು ಒಬ್ಬನೇ ಇರಬಲ್ಲೆ."

"ನೀವೇನು ಅದರ ಯೋಚನೆ ಮಾಡಬೇಡಿ ಗುರು. ಇಲ್ಲಿರೋದು ನಮ್ಮ ಕೆಲಸ. ನೀವು ದೊಡ್ಡ ತ್ಯಾಗಕ್ಕೆ ಸಿದ್ಧವಾಗಿದ್ದೀರಿ. ನಿಮ್ಮ ಪಕ್ಕದಲ್ಲಿ ಕುಳಿತುಕೊಳ್ಳೋದನ್ನು ಬಿಟ್ಟು ನಾವು ಬೇರೆ ಏನೂ ಮಾಡೋಕೆ ಸಾಧ್ಯ-ವಿಲ್ಲ. ಇಲ್ಲಿ ಕೂತು ನಿಮ್ಮ ಮುಖ ನೋಡುತ್ತ ಇದ್ದರೆ ಅದೇ ದೊಡ್ಡ ಪುಣ್ಯ."

ಇದರಿಂದ ರಾಜುವಿನ ಕಣ್ಣಿನಲ್ಲಿ ನೀರೂರಿತು. ಎಂತಹ ಅಭಿಮಾನ! ಆದರೆ ಇರುವ ವಿಷಯವನ್ನು ಹೇಳದೆ ವಿಧಿಯಿರಲಿಲ್ಲ. ಅಂತಲೇ ಹೇಳಲೇ-ಬೇಕಾಯಿತು. "ಅದು ಸರಿ ವೇಲನ್, ಪೂಜೆ ಮಾಡುವವನಷ್ಟೇ ಆ ಪೂಜೇನ ಭಕ್ತಿಯಿಂದ ಕೂತು ನೋಡುವವನಿಗೂ ಪುಣ್ಯ ಬರುತ್ತೆ ಅಂತ ಪುರಾಣದಲ್ಲಿ ಹೇಳಿದೆ. ನನ್ನ ಶ್ರಮ ಸಾರ್ಥಕವಾಯಿತಲ್ಲ ಅದೇ ನನಗೆ ಸಂತೋಷ."

"ಎಷ್ಟಾದರೂ ದೇವರು ದೊಡ್ಡವನು. ಅಂತೂ ನೀವು ಒಬ್ಬರಿಗೊಬ್ಬರು

ಜಗಳವಾಡದೇ ಇರಬೇಕು. ಈಗ ಅಂತಹ ಸಂದರ್ಭ ಇಲ್ಲದೇ ಇರೋದ-ರಿಂದ ಇನ್ನು ಭಯವಿಲ್ಲ. ಇನ್ನು ನೀನು ಮನೆಗೆ ಹೋಗು. ನಾನು ನಾಳೆ ಎಂದಿನಂತೆ ಊಟಮಾಡುತ್ತೇನೆ. ಬರೋವಾಗ ಒಂದಿಷ್ಟು ಅಕ್ಕಿ, ಹಿಟ್ಟು, ಮೆಣಸಿನಕಾಯಿ........"

ವೇಲನ್‌ನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಆದರೆ ಅವನ ಭಕ್ತಿ ಅವನ ಆಶ್ಚರ್ಯವನ್ನು ತೋರಗೊಡಲಿಲ್ಲ. ಆದರೂ ಇಂತಹ ಸಮಯದಲ್ಲಿ ಸುಮ್ಮ-ನಿರಲಾದೀತೆ? "ಹಾಗಾದರೆ ನಾಳೆ ಮಳೆ ಬೀಳುತ್ತೆಯೇ ಗುರುಗಳೆ?"

ರಾಜು ಯೋಚಿಸಬೇಕಾಯಿತು. ಇದೇನಿದು ಯಾವುದೋ ಹೊಸ ಸಮಸ್ಯೆ ಉದಯಿಸಿದ ಹಾಗಿದೆಯಲ್ಲ? "ಹ್ಯಾಗೆ ಹೇಳೋದು, ಬಿದ್ದರೂ ಬೀಳಬಹುದು. ಆದೆಲ್ಲ ದೈವೇಚ್ಛೆ."

ರಾಜು ಹೀಗೆಂದ ಕೂಡಲೇ ವೇಲನ್ ತಾನು ಕುಳಿತಿದ್ದ ಕಂಭದ ಬಳಿಯಿಂದ ಮೇಲೆದ್ದು ಅವನ ಬಳಿ ಹೋಗಿ ತನ್ನ ತಮ್ಮ ತಂದ ಸಮಾ-ಚಾರವನ್ನು ಚಾಚೂ ತಪ್ಪದೆ ಹೇಳಿ ಮುಗಿಸಿದನು. ಸ್ವಾಮೀಜಿ ನದಿಯ ನೀರಿನಲ್ಲೇ ನಿಂತು ಆಕಾಶವನ್ನೇ ನೋಡುತ್ತ ಪಾರ್ಥನೆ ಮಾಡುವುದು. ಮಳೆ ಬರುವ ತನಕ ಉಪವಾಸವಿದ್ದು ಪ್ರಾರ್ಥನೆ ಮಾಡುತ್ತಲೇ ಇರುವುದು. ಒಂದೆರಡು ವಾರ ಹೀಗೆ ಮಾಡಿದರೆ ಮಳೆರಾಯನಿಗೆ ಸಂತೋಷವಾಗಿ ಮಳೆ ಧಾರಾಕಾರವಾಗಿ ಹುಯ್ಯುವುದು. ಇಂತಹ ಒಂದು ತಪಸ್ಸು ಮಾಡಲು ಸ್ವಾಮೀಜಿ ಮನಸ್ಸು ಮಾಡಿದ್ದು ಹಳ್ಳಿಯವರ ಭಾಗ್ಯವೇ ಭಾಗ್ಯ.

ವೇಲನ್‌ನ ಆ ನಿರ್ಮಲ ಮನಸ್ಸನ್ನೂ, ಎಣೆಯಿಲ್ಲದ ಆ ಭಕ್ತಿಯನ್ನೂ, ನಂಬಿಕೆಯನ್ನೂ ಕಂಡು ರಾಜುವಿನ ಕಣ್ಣು ಹನಿಗೂಡಿತು. ಸ್ವಲ್ಪ ದಿನದ ಹಿಂದೆ ಅಂತಹ ಒಂದು ತಪಸ್ಸನ್ನು ಕುರಿತು ಅದರ ಪ್ರಭಾವವನ್ನು ವಿವರಿಸಿ ತಾನೇ ಆ ಜನಕ್ಕೆ ಒಂದು ಘಂಟೆ ಉಪನ್ಯಾಸ ಮಾಡಿದ್ದನು. ಆ ವರ್ಣನೆ-ಯಲ್ಲಿ ಅರ್ಧ ತನ್ನ ಕಲ್ಪನೆಯಾದರೆ, ಇನ್ನರ್ಧ ಅಮ್ಮ ಹೇಳುತ್ತಿದ್ದ ತಪಸ್ವಿ-ಗಳ ಕಥೆಯ ನೆನಪು. ಅದೇ ಇಂದು ಈ ರೂಪ ತಳೆದಿತ್ತು. ತಾನೇ ಕಟ್ಟಿ-ಕೊಂಡ ಕೋಟೆಯಿಂದ ಹೊರಗೆ ಬರುವ ಹಾಗೇ ಇರಲಿಲ್ಲ. ತನಗಾದ ಆಶ್ಚರ್ಯವನ್ನು ಸಹ ಹೊರಸೂಸುವ ಹಾಗಿರಲಿಲ್ಲ. ಅಂತೂ ತನ್ನ ಮಾತು-ಗಳಿಗೆ ತಾನೇ ಬೆಲೆ ಕೊಡುವ ಕಾಲ ಬಂದಿತ್ತು. ಆದರೆ ಈ ವಿಷಯವನ್ನು

ಯೋಚಿಸಲು ಅವನಿಗೆ ಏಕಾಂತ ಬೇಕಾಗಿತ್ತು. ಕಾಲ ಬೇಕಾಗಿತ್ತು. ರಾಜು ವೇದಿಕೆಯಿಂದ ಕೆಳಗಿಳಿದ. ಆ ವೇದಿಕೆಯ ಮೇಲಿದ್ದರೆ ಬಂಧನ ಇನ್ನೂ ಹೆಚ್ಚು. ಅದಕ್ಕೆ ಹೇಗೆ ಅಂತಹ ಆಕರ್ಷಕಶಕ್ತಿ ಬಂದಿತೋ ದೇವರೇ ಬಲ್ಲ. ಅಲ್ಲಿದ್ದಷ್ಟು ಹೊತ್ತೂ ಅವನು ಬರಿಯ ಮಾನವನಲ್ಲ, ಮಹಾತ್ಮ. ರಾಜುವಿಗೆ ಈಗೀಗ ತಾನು ಮಾಡುತ್ತಿದ್ದ ಏಕಪಾತ್ರಾಭಿನಯದ ಮಹತ್ವದ ಅರಿವಾಯಿತು. ಆ ಪಾತ್ರ ತನ್ನ ಹದ್ದು ಮೀರಿ ಬೆಳೆದುಬಿಟ್ಟಿರುವುದೂ ತಿಳಿಯಿತು. ಬೆಕ್ಕಿನಂತಹ ತನ್ನ ಆಕೃತಿಗೆ ಹುಲಿಯಂತಹ ಮಹತ್ವವನ್ನು ತಂದುಕೊಟ್ಟಿದ್ದ. ಆ ಕಲ್ಲುವೇದಿಕೆಗೆ ಬಂಗಾರದ ಸಿಂಹಾಸನದ ಬೆಲೆಯನ್ನು ಹೊರಿಸಿದ್ದ.

ಮುಳ್ಳು ಚುಚ್ಚಿದವನ ಹಾಗೆ ಆ ಸ್ಥಳದಿಂದ ಎದ್ದುಬಿಟ್ಟು ವೇಲನ್‌ನ ಹತ್ತಿರ ಬಂದ ರಾಜು. ಅವನಿಗೆ ನಿಜವಾಗಿ ಭಯವಾಗಿತ್ತು. ಧ್ವನಿ ಮೆದುವಾಗಿತ್ತು. ಸ್ವಾಮೀಜಿ ತನ್ನ ಹತ್ತಿರ ಬರುವುದನ್ನು ನೋಡಿ ವೇಲನ್‌ನಿಗೆ ದಿಗ್ಭ್ರಮೆಯಾಯಿತು.

"ಇಲ್ಲಿ ನೋಡು ವೇಲನ್, ಇವತ್ತು ರಾತ್ರಿ ನಾನು ಒಬ್ಬನೇ ಇರಬೇಕು. ನಾಳೇನೂ ನಾನು ಒಬ್ಬನೇ ಇರಬೇಕು. ನಾಳೆ ರಾತ್ರಿ ಬಂದು ನನ್ನನ್ನು ನೋಡಿ. ನಾಳೆ ರಾತ್ರಿಯ ತನಕ ನೀನಾಗಲೀ, ಬೇರೆ ಯಾರಾದರೂ ಆಗಲಿ ಇಲ್ಲಿಗೆ ಬರಕೂಡದು."

ಗುರುವಿನ ಮಾತಿನ ಮಂತ್ರಶಕ್ತಿಗೆ ಮರುಳಾಗಿ ವೇಲನ್ ಮರುಮಾತಾಡದೆ ಎದ್ದುಬಿಟ್ಟ.

"ಹಾಗಾದರೆ ನಾಳೆ ರಾತ್ರಿ ಒಬ್ಬನೇ ಬಂದು ನೋಡಲೆ ಗುರುವೆ?"

"ಹೌದು, ಒಬ್ಬನೇ ಬಾ."

"ಸರಿ ಗುರುವೆ, ನೀವು ಹೇಳಿದ ಹಾಗೆ ಯಾಕೆ, ಏನು, ಎತ್ತ ಅಂತ ಕೇಳೋಕೆ ನಾವು ಯಾರು? ನದಿ ಹತ್ತಿರ ನಮ್ಮವರನ್ನು ನಿಲ್ಲಿಸಿ ಇಲ್ಲಿಗೆ ಯಾರೂ ಬರದಹಾಗೆ ನೋಡಿಕೋತೇನಿ."

ವೇಲನ್ ಸ್ವಾಮೀಜಿಗೆ ಸಾಷ್ಟಾಂಗಪ್ರಣಾಮ ಮಾಡಿ ಹೊರಟುಹೋದ. ಅವನು ಹೋದ ದಿಕ್ಕನ್ನೇ ಸ್ವಲ್ಪಹೊತ್ತು ನೋಡುತ್ತಿದ್ದು ಒಳಗೆ ಹೋಗಿ ಮಲಗಿದ. ದಿನವಿಡೀ ಕುಳಿತು ಕೈ–ಮೈ ನೋಯುತ್ತಿತ್ತು. ಹೊರಗೆ ದೂರದಲ್ಲಿ ಹಳ್ಳಿಯೂ ನಿದ್ರಿಸತೊಡಗಿತ್ತು. ಮಂಟಪದಲ್ಲಿ ಬಾವಲಿಗಳು

ಮಾತ್ರ ಅತ್ತಿತ್ತ ಓಡಾಡುತ್ತ ಸದ್ದುಮಾಡುತ್ತಿದ್ದವು. ರಾಜುವಿಗೆ ನಿದ್ದೆ ಬರ-
ಲಿಲ್ಲ. ತಲೆಯತುಂಬ ನೂರಾರು ಯೋಚನೆಗಳು.

ಮೊಣಕಾಲುದ್ದ ನೀರಿನಲ್ಲಿ ನಿಂತು ಹದಿನೈದು ದಿನ ಉಪವಾಸವಿರು-
ವುದೆ? ಅವರಿಗೆ ಯಾಕಾದರೂ ಅಂತಹ ತಪಸ್ಸಿನ ವಿಷಯ ಹೇಳಿದೆನೊ?
ಆಗೇನೊ ಹೇಳುವುದಕ್ಕೂ, ಕೇಳುವುದಕ್ಕೂ ಬಹಳ ಚೆನ್ನಾಗಿತ್ತು. ಆದರೆ
ಈಗ ತಾನೇ ಆ ಕೆಲಸ ಮಾಡಬೇಕಾಗಿ ಬಂದಾಗ? ಹೀಗಾಗುತ್ತದೆಂದು
ತಿಳಿದಿದ್ದರೆ ಕಥೆಯನ್ನು ಬೇರೆ ರೀತಿ ಹೇಳಬಹುದಾಗಿತ್ತು. ಹದಿನೈದು ದಿನ
ಪಟ್ಟಾಗಿ ಬೋಂಡ ತಿಂದರೆ ಮಳೆ ಬರುತ್ತೆ ಎಂದು ಹೇಳಬಹುದಾಗಿತ್ತು.
ಹಿಂದೆ ಅವನಮ್ಮ ಒಂದು ಸಲ ಹೇಳಿದ್ದಳು: ಯಾರಾದರೂ ಒಬ್ಬ ಒಳ್ಳೆ
ಮನುಷ್ಯ ಇದ್ದರೂ ಸಾಕು. ಅವನಿಗೋಸ್ಕರವಾದರೂ ಮಳೆ-ಬೆಳೆಯಾಗುತ್ತೆ.
ಈಗ ಯಾವ ಮನುಷ್ಯನ ಪುಣ್ಯದಿಂದಲೂ ಮಳೆ ಬರಬಾರದೆ? ಈಗ ಆಗಿಲ್ಲ-
ವಲ್ಲ; ಏನು ಮಾಡುವುದು? ಎಲ್ಲಾದರೂ ಓಡಿಹೋಗಬೇಕು ಅಷ್ಟೆ. ಬಸ್
ಹತ್ತಿ ಯಾವುದಾದರೂ ಊರಿಗೆ ಹೊರಟುಹೋಗಿಬಿಟ್ಟರೆ ಮುಗಿಯಿತು.
ಅಲ್ಲಿ ತನ್ನಂತಹ ಗಡ್ಡದ ಸಾಧುಗಳು ನೂರಾರು ಜನ. ಅಲ್ಲಿ ಯಾರೂ
ತನ್ನನ್ನು ಗಮನಿಸುವುದಿಲ್ಲ. ವೇಲನ್ ಒಂದು ದಿನ ನೋಡಬಹುದು, ಎರಡು
ದಿನ ನೋಡಬಹುದು. ಆದರೆ ಮೂರನೆಯ ದಿನ ಸ್ವಾಮೀಜಿ ಹಿಮಾಲಯಕ್ಕೆ
ಹೋಗಿದ್ದಾರೆ ಎಂದುಕೊಳ್ಳುವುದೇ ನಿಜ. ಆದರೆ ಹೇಗೆ ಹೋಗುವುದು?
ಹೋಗುವಾಗ ಸಿಕ್ಕಿಬಿದ್ದರೆ? ಮೋಸಮಾಡಿ ಓಡಿಹೋಗುತ್ತಿದ್ದಾನೆ ಎಂದು
ತಿಳಿದರೆ ಜೀವ ಸಹಿತ ಬಿಡೋಲ್ಲ. ಆದರೆ ಇಷ್ಟು ದಿನ ತನ್ನನ್ನು ನಂಬಿದವರ
ಗತಿ? ತನ್ನ ಕಾಲು ಮುಟ್ಟಿ ನಮಸ್ಕಾರ ಮಾಡಿದ ಆ ಹೆಂಗಸರ ಕಣ್ಣು-
ಗಳಲ್ಲಿನ ಆತಂಕ? ತನಗಾಗಿ ಏನುಬೇಕಾದರೂ ಮಾಡಲು ಸಿದ್ಧರಾಗಿದ್ದ ಆ
ಜನರ ಅಭಿಮಾನ? ಇಂತಹವರಿಗೆ ಎರಡು ಬಗೆಯುವುದೇ? ರಾಜು
ಯಾರಾದರೂ ಬಂದುಬಿಟ್ಟಾರೆಂದೆಣಿಸಿ ಬೇಗ ಎದ್ದು ನದಿಯಲ್ಲಿನ ಮಣ್ಣು
ಬಗೆದು, ಪಾತ್ರೆಯಲ್ಲಿ ನೀರು ತುಂಬಿಕೊಂಡು, ಬೇಗಬೇಗ ಒಂದಿಷ್ಟು ಅನ್ನ
ಬೇಯಿಸಿಕೊಂಡು ನುಂಗಿದನು. ರಾತ್ರಿಗಾಗಿ ಒಂದಿಷ್ಟು ಅನ್ನವನ್ನು ಗರ್ಭ-
ಗುಡಿಯಲ್ಲಿ ಮುಚ್ಚಿಟ್ಟನು. ರಾತ್ರಿಗಾದರೂ ಈ ಜನ ತನ್ನನ್ನು ಒಬ್ಬನನ್ನೇ
ಬಿಟ್ಟರೆ ಹೊಟ್ಟೆಗೆ ಒಂದಿಷ್ಟು ಅನ್ನ ಹಾಕಿಕೊಂಡು ಹೇಗಾದರೂ ಬದುಕಿರ-

ಬಹುದು. ದಿನಕ್ಕೆ ಎಂಟು ಘಂಟೆ ನೀರಿನಲ್ಲಿ ನಿಲ್ಲೋದು ಕಷ್ಟವಾಗಬಹುದು. ಆದರೆ ಅದೂ ಅಭ್ಯಾಸವಾಗಿಬಿಡುತ್ತೆ. ಅಷ್ಟುಹೊತ್ತಿಗೆ ಮಳೆ ಬರಬಹುದು. ಅಂತೂ ಸಾಧ್ಯವಾದಷ್ಟು ಹೊತ್ತು ಉಪವಾಸ ಮಾಡಬೇಕು.

ರಾತ್ರಿಗೆ ವೇಲನ್ ಬಂದಾಗ ರಾಜು ಅವನನ್ನು ಹತ್ತಿರ ಕೂಡಿಸಿಕೊಂಡು ಮಾತಿಗಾರಂಭಿಸಿದನು :

"ವೇಲನ್, ಇಷ್ಟು ದಿನ ನೀನು ನನ್ನ ಸ್ನೇಹಿತನ ಹಾಗಿದ್ದೆ. ಇನ್ನು ಮೇಲೂ ಹಾಗೇ ಇರಬೇಕು........ಆದರೆ ನಾನು ಜಪ ಮಾಡಿದರೆ ಮಳೆ ಬರುತ್ತೆ ಅಂತ ನಿಮಗೆ ಯಾಕೆ ಅನ್ನಿಸಿತು ?"

"ಆ ಹುಡುಗ ಹೇಳಿದ. ನೀವು ಹಾಗಂತ ಹೇಳಲಿಲ್ಲವೆ ಗುರು ?" ಹೇಳಲಿಲ್ಲ ಎನ್ನಲಿಲ್ಲ ರಾಜು. ಈಗಲಾದರೂ ನಿಜ ಹೇಳಿಬಿಡಬಹುದಾಗಿತ್ತು. ಆದರೂ ಹೇಳಲಿಲ್ಲ. ಕೇಳಿದುದಕ್ಕೆ ನೇರವಾಗಿ ಉತ್ತರಿಸುವುದು ರಾಜುವಿನ ಪದ್ಧತಿಯಾಗಿರಲಿಲ್ಲ.

"ಆ ವಿಚಾರ ನಾನು ಕೇಳಲಿಲ್ಲ. ಆದರೆ ನಾನು ಜಪ ಮಾಡಿದರೆ ಮಳೆ ಬರುತ್ತೆ ಅಂತ ಯಾಕೆ ತಿಳಿದುಕೊಂಡಿದ್ದೀರಿ ?"

ವೇಲನ್‌ನಿಗೆ ಏನು ಹೇಳಬೇಕೋ ತಿಳಿಯಲಿಲ್ಲ. ಗುರುವಿನ ಮನಸ್ಸಿನಲ್ಲಿ ಏನಿದೆಯೊ ಯಾರಿಗೆ ಗೊತ್ತು? ಗುರು ಕೇಳಿದ ಪ್ರಶ್ನೆಗೆ ಏನೋ ಮಹತ್ವದ ಉತ್ತರವಾಗಿದ್ದಿರಬೇಕು. ಆದರೆ ತನ್ನಂತಹ ರೈತ ಆ ಪ್ರಶ್ನೆಗೆ ಉತ್ತರಕೊಡುವುದು ಸಾಧ್ಯವೆ ?

"ಇನ್ನೇನು ತಾನೆ ಮಾಡಬೇಕು ಗುರುವೆ ?"

"ಇಲ್ಲಿ ಬಾ ವೇಲನ್, ಇಲ್ಲಿ ಬಂದು ಕೂತುಕೊ. ನಾನು ಹೇಳೋದನ್ನೆಲ್ಲಾ ಕೇಳು. ನಿನಗಾಗಿ, ನಿಮ್ಮ ಜನರಿಗಾಗಿ ನಾನು ಉಪವಾಸ ಬೇಕಾದರೂ ಮಾಡುತ್ತೇನೆ. ಏನು ಬೇಕಾದರೂ ಮಾಡೋಕೆ ಸಿದ್ಧನಾಗಿದ್ದೇನೆ, ಆದರೆ ಅದನ್ನು ಮಾಡೋ ಅರ್ಹತೆ ನನಗಿಲ್ಲ. ಅದೆಲ್ಲ ಮಹಾತ್ಮರ ಕೆಲಸ. ನಾನು ಅಂತಹ ಮಹಾತ್ಮನಲ್ಲ. ನೀವು ತಿಳಿದುಕೊಂಡಿರೋ ಹಾಗೆ ಹಿಮಾಲಯದ ಸ್ವಾಮಿಯೂ ಅಲ್ಲ. ನಾನೂ ನಿಮ್ಮ ಹಾಗೆ ಒಬ್ಬ ಸಾಧಾರಣ ಮನುಷ್ಯ."

ವೇಲನ್‌ನಿಗೆ ಇದನ್ನು ತಡೆಯುವುದು ಸಾಧ್ಯವಾಗಲಿಲ್ಲ. ಆದರೆ

ಅವನೆಷ್ಟೇ ಹೇಳಿದರೂ ರಾಜು ಬಿಡಲಿಲ್ಲ. ರಾತ್ರಿ ತಂಪಾಗಿತ್ತು. ರಾಜು ವೇಲನ್‌ನನ್ನು ಕರೆದುಕೊಂಡು ನದಿಯ ಬಳಿ ಹೋಗಿ ಪಾವಟಿಗೆಯ ಮೇಲೆ ಕುಳಿತ.

"ವೇಲನ್, ದೂರ ಹೋಗಬೇಡ, ಇಲ್ಲೇ ಕೂತುಕೊ. ನಾನು ಹೇಳೋ ವಿಷಯ ನೀನು ಕೇಳಬೇಕು. ನೀವು ತಿಳಿದುಕೊಂಡಿರೊ ಅಂತಹ ಸ್ವಾಮೀಜಿ ನಾನಲ್ಲ. ನನ್ನ ಕಥೆ ಹೇಳುತ್ತೇನೆ ಕೇಳು. ಆಗ ನಿನಗೇ ತಿಳಿಯುತ್ತೆ........"

ಬತ್ತಿ ಬಾಡಿ ಹೋಗುತ್ತಿದ್ದ ನದಿ ಸದ್ದುಮಾಡದೇ ಎಲ್ಲೋ ಹರಿಯುತ್ತಿತ್ತು. ಆಲದ ಮರದ ಒಣಗಿದ ಎಲೆಗಳು ಉದುರಿಬೀಳುತ್ತಿದ್ದವು. ರಾಜುವಿನ ಧ್ವನಿ ರಾತ್ರಿಯ ಕತ್ತಲನ್ನು ಆವರಿಸಿತು. ವೇಲನ್ ಕಿವಿಗೊಟ್ಟು ರಾಜು ಹೇಳುವುದನ್ನೇ ಕೇಳತೊಡಗಿದ. ಆದರೆ ಅವನ ಮುಖದ ಮೇಲೆ ಭಕ್ತಿಯ ಭಾವ ಅಳಿಸಿಹೋಗಲಿಲ್ಲ. ಬದಲಾಗಿ ಹೆಚ್ಚಿನ ಒಂದು ಗಾಂಭೀರ್ಯ ಅಲ್ಲಿ ಮೂಡಿತು. ಹಣೆಯ ಮೇಲೆ ಚಿಂತೆಯ ಗೆರೆ ಕಾಣಿಸಿಕೊಂಡಿತು.

# 7

ಮಾರ್ಕೋ ನನ್ನನ್ನು ಮನೆಯವನೆಂದೇ ತಿಳಿದನು. ಪ್ರವಾಸಿಗಳನ್ನು ಅಲ್ಲಲ್ಲಿ ಕರೆದುಕೊಂಡು ಹೋಗುವ ಬದಲು ಒಂದೇ ಒಂದು ಪ್ರವಾಸೀ ಕುಟುಂಬದ ಮೇಲ್ವಿಚಾರಕನಾಗಿ ನಿಂತೆ. ಮಾರ್ಕೋ ಯಾವುದಕ್ಕೂ ಬರುತ್ತಿರಲಿಲ್ಲ. ಗೋಡೆಯ ಮೇಲಿನ ಚಿತ್ರಗಳನ್ನು ಬರೆದುಕೊಳ್ಳುವುದನ್ನು ಬಿಟ್ಟರೆ ಅವನಿಗೆ ಬೇರೆ ಕೆಲಸವೇ ಇಲ್ಲ. ಆ ಶಿಲ್ಪಶಾಸ್ತ್ರದಲ್ಲಿ ಅವನ ಹೃದಯ-ಮನಸ್ಸುಗಳೆರಡೂ ಲೀನವಾಗಿಬಿಟ್ಟಿದ್ದವು. ರೈಲಿನ ಟಿಕೆಟ್ ತೆಗೆದುಕೊಳ್ಳ-ಬೇಕಾದರೂ ಅವನಿಗೊಂದು ಮಹಾ ತಾಪತ್ರಯ. ಮನೆಯ ಕೆಲಸವನ್ನೆಲ್ಲಾ ಯಾರಾದರೊಬ್ಬರ ಮೇಲೆ ಹಾಕಿಬಿಟ್ಟು ತಾನು ಆ ಪುರಾತನ ಪ್ರಪಂಚದಲ್ಲಿ ಮುಳುಗಿಬಿಡಬಹುದೆಂದುಕೊಂಡು ಮದುವೆ ಮಾಡಿಕೊಂಡನೇನೊ? ಆದರೆ ಅವನು ಹೆಣ್ಣು ಆರಿಸುವಾಗ ತಪ್ಪುಮಾಡಿದ್ದನು. ಅವನೊಂದು ರೀತಿಯ ಕನಸಿನ ಪ್ರಪಂಚವಾದರೆ ಇವಳದೊಂದು ಕನಸಿನ ಸಾಮ್ರಾಜ್ಯ. ಅವಳ ನಾಟ್ಯಕಲೆಗೆ ಬೆಲೆ ಕೊಡುವಂತಹ ಗಂಡನೊಬ್ಬ ಸಿಕ್ಕಿದ್ದರೆ ಅವಳ ಸುಖಕ್ಕೆ ಪಾರವೇ ಇರುತ್ತಿರಲಿಲ್ಲ. ಅವಳಿಗೆ ನನ್ನ ಸಹಾಯ ಬೇಕಾದುದು ಇಲ್ಲಿಯೆ. ನನ್ನ ದಿನದ ಕೆಲಸಗಳನ್ನೆಲ್ಲಾ ಬಿಟ್ಟುಬಿಟ್ಟು ನಾನು ಅವರ ನೆರವಿಗೆ ಹೋದೆ.

ಮಾರ್ಕೋ ಒಂದು ತಿಂಗಳ ವರೆಗೂ ಬೆಟ್ಟದ ಬಂಗಲೆಯಲ್ಲಿ ತಂಗಿದನು. ಮನೆಯ ವ್ಯವಹಾರಕ್ಕೆ ನಾನೇ ಯಜಮಾನ. ರಸೀತಿ ಕೊಟ್ಟು-ಬಿಟ್ಟರೆ ಸರಿ. ಎಷ್ಟು ಹಣ ಕೊಡಲೂ ಸಿದ್ಧವಾಗಿದ್ದನು. ಆದರೆ ಹೋಟೆಲಿ-ನಲ್ಲಿದ್ದ ರೂಮು ಇನ್ನೂ ಅವರದಾಗಿತ್ತು. ಗಫೂರನ ಕಾರಿಗೆ ಬಿಡುವೇ ಇರ-ಲಿಲ್ಲ. ಕಾರು ಗಫೂರನದಲ್ಲದೆ ಮಾರ್ಕೋನದಾದ ಹಾಗಿತ್ತು. ಅಂತೂ ಊರಿಗೂ, ಬೆಟ್ಟಕ್ಕೂ ನಡುವೆ ಕಾರು ದಿನಕ್ಕೆ ಒಂದು ಸಲವಾದರೂ ಬಂದು-ಹೋಗದೆ ಇರುತ್ತಿರಲಿಲ್ಲ. ಜೋಸೆಫ್ ಮಾರ್ಕೋಗೆ ಬೇಕಾದ ಸಕಲವನ್ನೂ ಒದಗಿಸುತ್ತಿದ್ದುದರಿಂದ ಅವನನ್ನು ವಿಚಾರಿಸಿಕೊಳ್ಳುವ ಅಗತ್ಯ ನನಗಿರಲಿಲ್ಲ. ಅವರಿಬ್ಬರನ್ನೂ ನೋಡಿಕೊಳ್ಳುವುದೆಂದೇನೋ ಮಾತುಕತೆಯಾಗಿತ್ತು ನನ್ನ

ಇತರ ಕೆಲಸ ಕಾರ್ಯಗಳನ್ನು ಬಿಟ್ಟುಕೊಡದೆ ತನಗೆ ಸಾಧ್ಯವಾದಷ್ಟು ಹೊತ್ತನ್ನು ಅವರಿಬ್ಬರಿಗಾಗಿ ಮೀಸಲಿಡಬೇಕೆಂದು ಒಪ್ಪಂದವಾಗಿತ್ತು. ಇದಕ್ಕೆ ಮಾರ್ಕೊ ನನಗೆ ಇಷ್ಟೊಂದು ದುಡ್ಡು ಕೊಟ್ಟುಬಿಡುತ್ತಿದ್ದನು. ನನ್ನ ದಿನದ ಕೆಲಸವೆಂದರೆ ಇಷ್ಟೇ ರೋಜಿಯ ಹತ್ತಿರವಿರುವುದು. ಅವಳಿಗೆ ಏನು ಬೇಕೋ ಅದನ್ನು ಮಾಡುವುದು. ಆದರೆ ಈಚೀಚೆಗೆ ರೋಜಿ ಅವಳ ಗಂಡನ ಬಗ್ಗೆ ತೋರುತ್ತಿದ್ದ ಆದರ ಸ್ವಲ್ಪ ಅತಿಯಾದ ಹಾಗೆ ಕಂಡಿತು. ಆದರೆ ಅವನಿಗೆ ಮಾತ್ರ ಇದರ ಪರಿವೆಯೇ ಇದ್ದಂತಿರಲಿಲ್ಲ. ಟೇಬಲ್ಲಿನ ತುಂಬ ಕಾಗದಗಳು. ರೋಜಿ ಏನಾದರೂ ಅದರ ಹತ್ತಿರ ಹೋದರೆ—

"ಅದರ ಹತ್ತಿರ ಹೋಗಬೇಡ ರೋಜಿ, ಎಲ್ಲಾದರೂ ಕಲಸು ಮೇಲೋಗರವಾಗಿಬಿಟ್ಟೀತು. ಈಗ·ತಾನೆ ಏನೋ ಒಂದು ವ್ಯವಸ್ಥೆಗೆ ಬರೋ-ಹಾಗಿದೆ" ಎನ್ನುತ್ತಿದ್ದನು.

ನನಗೇನೊ ಅವನ ಕೆಲಸ-ಕಾರ್ಯಗಳಲ್ಲಿ ಆಸಕ್ತಿಯಿರಲಿಲ್ಲ. ಅಷ್ಟಕ್ಕೂ ನನಗೂ ಅದಕ್ಕೂ ಏನು ಸಂಬಂಧ? ಆದರೆ ಅವಳು ಮಾತ್ರ ಈಚೀಚೆಗೆ ಅವನ ಊಟ·ತಿಂಡಿಯ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿದ್ದಳು. ಜೋಸೆಫ್ ಕೊಡುವ ಊಟ ಸರಿಯಾಗಿದೆಯೆ? ಎನ್ನುತ್ತಿದ್ದಳು. ಅವನ ರೂಮನ್ನು ಅಚ್ಚುಕಟ್ಟಾಗಿ ಇಡುತ್ತಿದ್ದಳು ಒಂದೊಂದು ಸಲ.

"ಇವತ್ತು ರಾತ್ರಿ ಇಲ್ಲೇ ಇರಲೊ?" ಎನ್ನುವುದೂ ಉಂಟು ಆದರೆ ಅವನು ಮಾತ್ರ ಯಾವ ವಿಶೇಷ ಉತ್ಸಾಹವನ್ನೂ ತೋರದೆ—

"ಬೇಕಾದರೆ ಇರು. ಆದರೆ ರಾಜು ನೀನೇನು ಇರುತ್ತೀಯೋ ಅಥವಾ ಹೋಗಬೇಕೊ?"

ಇಲ್ಲದಿದ್ದರೆ ರೋಜಿಯ ಹತ್ತಿರ ಇರುವುದಕ್ಕಾಗುವುದಿಲ್ಲ. ಅದಕ್ಕೆ ನಾನು ಇರುವ ಇಚ್ಛೆ ತೋರದೆ—

"ಇಲ್ಲ, ಬೇರೆ ಯಾರೋ ಪ್ರವಾಸಿಗಳು ಬರುತ್ತಾರೆ. ಅವರ ಜೊತೆ ಹೋಗಬೇಕು. ಹೋದರೆ ಪರವಾಗಿಲ್ಲವೆ?"

"ಹೋಗು ಹೋಗು, ಪರವಾಗಿಲ್ಲ. ಎಷ್ಟಾದರೂ ನಿನಗೆ ನೂರಾರು ಕೆಲಸಗಳು. ಯಾವಾಗಲೂ ಇಲ್ಲೇ ಇರು ಅಂತ ಅನ್ನೋದಕ್ಕೆ ಆಗುತ್ತೆಯೆ?"

"ನಾಳೆ ಕಾರು ಎಷ್ಟುಹೊತ್ತಿಗೆ ಬೇಕು?" ಮಾರ್ಕೊ ತನ್ನ ಹೆಂಡ-

ತಿಯ ಕಡೆ ತಿರುಗಿದ. ಅವಳು—

"ನಾಳೆ ಬೆಳಿಗ್ಗೆ ಎಷ್ಟು ಜಾಗ್ರತೆ ಸಾಧ್ಯವೋ ಅಷ್ಟು ಜಾಗ್ರತೆ" ಎಂದಳು.

ಕಾರು ಬೆಟ್ಟವನ್ನು ಬಿಟ್ಟು ಹೊರಟಿತು. ಗಫೂರ್ ಕನ್ನಡಿಯಲ್ಲಿ ನನ್ನ ಮುಖವನ್ನು ಹಲವಾರು ಸಲ ನೋಡಿದ. ಈಚೆಗೆ ನಾನು ಅವನ ಹತ್ತಿರ ಹೆಚ್ಚಾಗಿ ಮಾತಾಡುತ್ತಿರಲಿಲ್ಲ. ಗಫೂರನ ಬಾಯಿ ಬೀಗವಿಲ್ಲದ ಬಾಯಿ. ಅವನು ನನ್ನ ವಿಚಾರ ಹೆಚ್ಚುಹೆಚ್ಚಾಗಿ ಹರಟುವುದು ನನಗೆ ಬೇಡವಾಗಿತ್ತು. ಇನ್ನು ಎಲ್ಲಿ ರೋಜಿಯ ವಿಷಯ ಆರಂಭಿಸಿಬಿಡುತ್ತಾನೊ ಎಂದುಕೊಂಡೆ. ಆದರೆ ಅವನು ಆ ಮಾತೆತ್ತದೆ ಮೋಟಾರು ಗಾಡಿಗಳ ಸಮಾಚಾರವೆತ್ತಿದ. ಆದರೆ ಒಂದೇ ವಿಷಯವನ್ನು ಕುರಿತು ಮಾತಾಡುವುದಕ್ಕೆ ಅವನಿಗೆ ಬರುತ್ತಿರಲಿಲ್ಲ. ಮಾತು ಮೋಟಾರು ಗಾಡಿಗಳಿಂದ ಪ್ರಾರಂಭವಾದರೂ ಕೊನೆಕೊನೆಗೆ ಹೆಂಗಸರ ಕಡೆ ತಿರುಗಿಬಿಡುತ್ತಿತ್ತು.

"ನಾಳೆ ಸ್ವಲ್ಪ ಕಾರಿನ ಬ್ರೇಕು ರಿಪೇರಿ ಮಾಡಬೇಕು. ಬೇಗ ಹೊರಡೋಕೆ ಆಗೋಲ್ಲ. ನಂದು ಎಷ್ಟಾದರೂ ಹಳೇ ಗಾಡಿ. ಆದರೆ ಈಗಿನ ಕಾಲದ ಹೊಸ ಕಾರುಗಳನ್ನು ನೋಡಿದರೆ ನನ್ನ ಹಳೇ ಕಾರೇ ಸಾವಿರ ಪಾಲು ವಾಸಿ. ಈಗಿನ ಹುಡುಗಿಯರಿಗಿಂತ ಹಳೆಯ ಕಾಲದ ಹೆಂಗಸರೇ ವಾಸಿಯಾಗಿರೋ ಹಾಗೆ ಅಲ್ಲಾ, ಆದರೂ ಈಗಿನ ಕಾಲದ ಹುಡುಗಿಯರು ಅಬ್ಬಾ, ಏನು ಹುಡುಗಿಯರು, ನಾನೇನಾದರೂ ಬೆಟ್ಟದ ಮೇಲೆ ಒಂದು ತಿಂಗಳ ಕಾಲ ನಿಲ್ಲಬೇಕಾಗಿದ್ದರೆ ನನ್ನ ಹೆಂಡತೀನ ಕೆಳಗೆ ಊರಲ್ಲಿರೋ ಹೋಟೆಲಿನಲ್ಲಿ ಇರೋಕೆ ಬಿಡುತ್ತಿದ್ದೆನಾ ?"

ಇದನ್ನೆಲ್ಲಾ ಕೇಳೋಕೆ ನಾನು ಸಿದ್ಧವಾಗಿರಲಿಲ್ಲ. ಕೇಳುವುದಕ್ಕೆ ಆಗುತ್ತಲೂ ಇರಲಿಲ್ಲ ನಾನು ಕೂಡಲೇ ವಿಷಯವನ್ನು ಬದಲಾಯಿಸಿಬಿಡುತ್ತಿದ್ದೆ.

"ಹಾಗಾದರೆ ಆ ಕಾರು ತಯಾರಿಸೋರಿಗಿಂತ ನಿನಗೆ ಹೆಚ್ಚು ಅನುಭವ ಇದೆಯೊ ?"

"ಇಲ್ಲ ಇಲ್ಲ, ಅವರಿಗೇ ಇರೋದು ಬಲು ಅನುಭವ. ಈ ಕಾಡುಮೇಡಿನ ರಸ್ತೆಗಳಲ್ಲಿ ಮೂರು ಹೊತ್ತೂ ಕಾರು ಓಡಿಸೋ ನನಗಿರೋ

ಅನುಭವ........"

ಸದ್ಯ ಅವನು ರೋಜಿಯನ್ನು ಮರೆತುಬಿಟ್ಟಿದ್ದಕ್ಕೆ ಮನಸ್ಸಿನಲ್ಲೇ ವಂದಿಸಿದೆ. ಆದರೂ ಏನೋ ಮನಸ್ಸಿಗೆ ನೆಮ್ಮದಿಯಿಲ್ಲ. ತಲೆಯತುಂಬ ರೋಜಿಯದೇ ಯೋಚನೆ. ನನ್ನ ಈ ಸ್ಥಿತಿಯನ್ನು ಗಫೂರ್ ಗಮನಿಸದೆ ಇರಲಿಲ್ಲ.

"ಏನು ರಾಜು, ನೀನು ಈಚೀಚೆಗೆ ಏನೋ ಒಂದು ತರಹ ಆಗಿದ್ದಿಯೆ. ಮೊದಲಿನಂತೆ ಸಲಿಗೆಯ ಮಾತು ಎಲ್ಲಿ ಮಾಯವಾಯಿತು?"

ನಿಜ, ನನಗೆ ಮೊದಲಿನ ಹಾಗೆ ಸಲಿಗೆಯಿಂದ ಇರುವುದಕ್ಕಾಗುತ್ತಿರಲಿಲ್ಲ. ಆ ನೆಮ್ಮದಿ ನಿಶ್ಚಿಂತೆ ಇರಲಿಲ್ಲ. ಕಣ್ಣೆದುರಿಗೆ ರೋಜಿಯದೇ ಚಿತ್ರ. ಅವಳ ಜೊತೆ ಕಳೆದ ರಸನಿಮಿಷಗಳ ನೆನಪು. ಇಲ್ಲವೆ ಅವಳೊಂದಿಗೆ ಮುಂದೆ ಕಳೆಯಬೇಕೆಂದಿರುವ ಸುಖದ ದಿನಗಳು. ನನಗೆ ಹುಚ್ಚೇ ಹಿಡಿದಿತ್ತು. ಏನೋ ಯೋಚನೆ. ಏನೋ ಭಯ. ಅವಳ ಗಂಡ ಅಂತಹ ಸಮಸ್ಯೆಯಾಗಿರಲಿಲ್ಲ. ಆದರೂ ಏನೋ ಭಯ. ಒಂದು ವೇಳೆ ಏನಾದರೂ........ಏನಾದರೂ........ ಆದರೆ?........ಏನಾದರೆ? ಎನ್ನುವುದು ನನಗೆ ಸ್ಪಷ್ಟವಾಗಿ ತಿಳಿದಿರಲಿಲ್ಲ. ನನ್ನ ತಲೆಯನ್ನು ತುಂಬಿದ್ದ ಯೋಚನೆಗಳಿಗೆ ಒಂದು ರೂಪವನ್ನು ಕೊಡುವ ಶಕ್ತಿಯೂ ಹೊರಟುಹೋಗಿತ್ತು. ಎಲ್ಲವೂ ಕಸಿರುಪಿಸಿರು. ಆ ಗೋಜಿನಿಂದ ಒಂದು ಎಳೆಯ ದಾರವೂ ಸರಿಯಾಗಿ ಬರುವ ಹಾಗಿರಲಿಲ್ಲ. ಒಂದು ವೇಳೆ ಅವಳಂತಹ ಆಧುನಿಕ ಯುವತಿಗೆ.... ...ನಾನು........ಸಿಲ್ಕಿನ ಜುಬ್ಬ ಧೋತಿ ಧರಿಸಿದ ನಾನು........ತಕ್ಕವನಲ್ಲವೆಂದು ನನ್ನನ್ನು ಒಲ್ಲದೇ ಹೋದರೆ? ಇದೇ ಹೆದರಿಕೆಯಲ್ಲಿ ನಾನು ದರ್ಜಿಯ ಹತ್ತಿರ ಹೋಗಿ ಡಾರ್‌ಡುರಾಯ್ ಪ್ಯಾಂಟುಗಳನ್ನೂ, ಬುಷ್‌ಕೋಟುಗಳನ್ನೂ ಹೊಲಿಸಿದೆ. ಮುಖಕ್ಕೂ, ತಲೆಗೂ ಅತ್ಯಾಧುನಿಕ ಸುಗಂಧಗಳನ್ನು ಲೇಪಿಸಿದೆ. ಖರ್ಚು ಒಂದಕ್ಕೆ ನೂರಾಯಿತು. ಅಂಗಡಿಯೇ ನನಗಿದ್ದ ಆಧಾರ. ಜೊತೆಗೆ ದಿನಗೂಲಿಯೆಂದು ಮಾರ್ಕೊ ನನಗೆ ಕೊಡುತ್ತಿದ್ದ ಅಷ್ಟು ಇಷ್ಟು ಹಣ. ಇನ್ನು ಮೇಲಾದರೂ ಅಂಗಡಿಯ ಲೆಕ್ಕಾಚಾರವನ್ನು ಸರಿಯಾಗಿ ಗಮನಿಸಬೇಕೆಂದುಕೊಂಡೆ. ಆ ಹುಡುಗ ಆಡಿದ್ದೇ ಆಟವಾಗಿತ್ತು. ಸ್ವಲ್ಪ ಬಿಡುವು ಸಿಕ್ಕಿದಾಗಲೆಲ್ಲ ಅಮ್ಮ ನನ್ನನ್ನು ಎಚ್ಚರಿಸುತ್ತಲೇ ಇದ್ದಳು.

"ಆ ಹುಡುಗನದೇ ರಾಜ್ಯವಾಗಿಬಿಟ್ಟದೆ. ಅವನು ಏನು ಮಾಡುತ್ತ ಇದ್ದಾನೆ, ಎಷ್ಟು ವ್ಯಾಪಾರವಾಗುತ್ತ ಇದೆ ಅನ್ನೋದಾದರೂ ತಿಳಿದಿದೆಯೊ ?"

"ಅವ್ಮಾ, ನೀನದೆಲ್ಲ ತಲೆಗೆ ಹಚ್ಚಿಕೊಳ್ಳಬೇಡ. ಇಷ್ಟೊಂದು ವಯಸ್ಸಾದ ಮೇಲೂ ನನಗೆ ಅಂಗಡಿ ವ್ಯವಹಾರ ಗಮನಿಸೋಕೆ ಬರೋದಿಲ್ಲ ಅಂದುಕೊಂಡಿದ್ದೀಯಾ ? "

ಅಮ್ಮ ಸುಮ್ಮನಾಗಿಬಿಡುತ್ತಿದ್ದಳು. ಆಮೇಲೆ ನಾನು ಅಂಗಡಿಗೆ ಹೋಗಿ ಅಧಿಕಾರಿಯುತವಾದ ವಾಣಿಯಿಂದ ಆ ಹುಡುಗನನ್ನು ಗದರಿಸಿ ಲೆಕ್ಕವನ್ನು ನೋಡುತ್ತಿದ್ದೆ. ನಾನು ಹೋದಾಗ ಒಂದಿಷ್ಟು ಚಿಲ್ಲರೆ ಹಣ, ಲೆಕ್ಕದ ಪುಸ್ತಕ ಇವಿಷ್ಟನ್ನು ನನ್ನ ಮುಂದಿಟ್ಟು, ತನ್ನ ಗೋಳನ್ನು ಪ್ರಾರಂಭಿಸಿಬಿಡುತ್ತಿದ್ದ. ನನಗೆ ಅದರ ಕಡೆ ಗಮನವೇ ಇರುತ್ತಿರಲಿಲ್ಲ. ಅವನ ಸಮಸ್ಯೆಗಳನ್ನು ಅವನಿಗೇ ಬಿಟ್ಟು ನನಗೆ ಬೇಕಾಗಿರುವುದು ನನ್ನ ಹಣ ಎಂದು ಗುಡುಗಿ ಬಂದುಬಿಡುತ್ತಿದ್ದೆ. ಆದರೆ ಬರುವುದಕ್ಕೆ ಮೊದಲು ಅವನು—

"ನಿಮ್ಮನ್ನ ಕೇಳಿಕೊಂಡು ಇಬ್ಬರು ಪ್ರಯಾಣಿಕರು ಬಂದಿದ್ದರು ಸಾರ್" ಎನ್ನುತ್ತಿದ್ದ.

"ಸರಿ ಸರಿ, ಅವರಿಗೆ ಮಾಡೋಕೆ ಬೇರೆ ಕೆಲಸವಿಲ್ಲ. ಏನು ಬೇಕಾಗಿತ್ತಂತೆ."

"ಒಂದು ಮೂರು ದಿನ ಊರು ನೋಡಬೇಕಾಗಿತ್ತಂತೆ. ಅಂತೂ ಮಾರ್ಗದರ್ಶಿಯಾಗಿ ನನ್ನ ಹೆಸರು ಚಿರಸ್ಥಾಯಿಯಾಗಿತ್ತು. ನನ್ನ ಕೀರ್ತಿ ಆಸೇತು–ಹಿಮಾಚಲದ ವರೆಗೂ ಹರಡಿತ್ತು. ಹುಡುಗ ಅಷ್ಟಕ್ಕೆ ಬಿಡುತ್ತಿರಲಿಲ್ಲ."

"ನೀವು ಎಲ್ಲಿದೀರಿ ಅಂತ ಕೇಳಿದರು ಸಾರ್."

ಸದ್ಯ ೨೮ನೇ ರೂಮಿನ ಹತ್ತಿರ ಕಳುಹಿಸಲಿಲ್ಲವಲ್ಲ, ನನ್ನ ಪುಣ್ಯಕ್ಕೆ. ಅವನಿಗೆ ಗೊತ್ತಿಲ್ಲ. ಇಲ್ಲದೆಯಿದ್ದರೆ ಅದನ್ನೂ ಮಾಡಿಬಿಡುತ್ತಿದ್ದನೋ ಏನೋ ?

"ಅವರು ಬಂದರೆ ಏನು ಹೇಳಲಿ ರಾಜು–ಸ್ವಾಮಿ ? "

ಅವನು ನನ್ನನ್ನು ರಾಜು–ಸ್ವಾಮಿ ಎಂದು ಕರೆಯುತ್ತಿದ್ದ. ಮರ್ಯಾದೆಗೆ ಮರ್ಯಾದೆಯೂ ಆಯಿತು. ಪರಿಚಯಕ್ಕೆ ಪರಿಚಯವೂ ಆಯಿತು

ಎಂದುಕೊಂಡಿದ್ದನೇನೋ !

"ಬಂದರೆ ನನಗೆ ಪುರುಸೊತ್ತಿಲ್ಲ ಎಂದು ಹೇಳಿಬಿಡು. ನನಗೆ ಬೆಳಗಿನಿಂದ ರಾತ್ರಿಯ ವರೆಗೂ ಬಿಡುವೇ ಇರೋದಿಲ್ಲ."

"ಹಾಗಾದರೆ ನಾನೇ ಅವರಿಗೆ ಊರು ತೋರಿಸಲೇ ಸಾರ್ ?"

ಆ ಧ್ವನಿಯಲ್ಲಿ ಎಷ್ಟು ಆಸೆಯಿತ್ತು ? ಹುಡುಗ ಮೆಲ್ಲನೆ ನನ್ನ ಸ್ಥಾನವನ್ನು ಆಕ್ರಮಿಸಲು ಪ್ರಯತ್ನಿಸುತ್ತಿದ್ದ. ಇವತ್ತು ಈ ಪ್ರವಾಸಿ, ನಾಳೆ ಆ ಪ್ರವಾಸಿ ಕೊನೆಗೆ ನನ್ನ ಹುಡುಗಿಯೂ ಬೇಕು ಎನ್ನುವ ಹಾಗೆ ಕಾಣುತ್ತೆ. ನನಗೆ ಸ್ವಲ್ಪ ಆಶ್ಚರ್ಯವೇ ಆಯಿತು.

"ನೀನು ಊರು ತಿರುಗೋಕೆ ಹೋದರೆ ಅಂಗಡಿ ಯಾರು ನೋಡಿಕೋತಾರೆ ?"

"ನನ್ನ ಚಿಕ್ಕಪ್ಪನ ಮಗ ಒಬ್ಬ ಇದ್ದಾನೆ ಸ್ವಾಮಿ. ನಾನು ಹೆಚ್ಚು ಹೊತ್ತು ಹೋಗೋಲ್ಲ. ಒಂದೆರಡು ಗಂಟೆ ಅಷ್ಟೆ. ಅಷ್ಟುಹೊತ್ತು ಆ ಅಂಗಡಿಯಲ್ಲಿರುತ್ತಾನೆ."

ನನಗೆ ಏನು ಹೇಳಬೇಕೋ ತಿಳಿಯಲಿಲ್ಲ. ನನ್ನ ಹಳೆಯ ಜೀವನದಲ್ಲಿ ನನಗೆ ಎಳ್ಳಷ್ಟೂ ಆಸಕ್ತಿ ಇರಲಿಲ್ಲ. ಆದರೂ ಅದು ನನ್ನನ್ನು ಬಿಡುವ ಹಾಗೆ ಕಾಣಲಿಲ್ಲ. ಮನೆಗೆ ಹೋದರೆ ಅಮ್ಮ ನೂರೆಂಟು ಸಮಸ್ಯೆಗಳನ್ನು ಮುಂದೊಡ್ಡುತ್ತಿದ್ದರು. ಕಂದಾಯ ಕೊಟ್ಟಿರಲಿಲ್ಲ, ಅಡುಗೆಮನೆ ಹಂಚುಗಳೆಲ್ಲ ಬರೀ ಒಡಕು, ಮನೆಯೆಲ್ಲ ಸೋರುತ್ತೆ, ರಿಪೇರಿ ಮಾಡಿಸಿರಲಿಲ್ಲ, ಅಂಗಡಿಯ ಲೆಕ್ಕ ಸರಿಯಾಗಿಟ್ಟಿರಲಿಲ್ಲ. ಹಳ್ಳಿಯಿಂದ ಬರುತ್ತಿದ್ದ ಪತ್ರಗಳಿಗೆ ಬರೆದಿರಲಿಲ್ಲ, ನನ್ನ ದೇಹದ ಆರೋಗ್ಯದ ವಿಷಯದಲ್ಲಿ ಸ್ವಲ್ಪವೂ ಲಕ್ಷ್ಯ ಕೊಡುತ್ತಿರಲಿಲ್ಲ ಇತ್ಯಾದಿ. ಮನೆಯಲ್ಲಿ ನನ್ನ ತಾಯಿ ಯಾವುದೋ ಕನಸಿನ ಪ್ರಪಂಚದಲ್ಲಿ ಏನನ್ನೋ ಗೊಣಗುತ್ತಿರುವಂತಿತ್ತು. ಇನ್ನು ಈ ಹುಡುಗನಂತೂ ತನ್ನದೇ ಆದ ರೀತಿಯಲ್ಲಿ ನನ್ನನ್ನು ಕಾಡುತ್ತಿದ್ದ. ಹರಟೆಗೆ ಸದಾ ಸಿದ್ಧನಾಗಿರುತ್ತಿದ್ದ. ಗಫೂರನ ಅಪಹಾಸ್ಯಕ್ಕಂತೂ ಕೊನೆಮೊದಲಿಲ್ಲ. ಓ, ನನಗೆ ಅದೆಲ್ಲ ತಲೆಬೇಸರವಾಗಿತ್ತು. ನನಗೆ ಇದರಲ್ಲೆಲ್ಲಾ ಆಸಕ್ತಿಯಿರಲಿಲ್ಲ. ನನ್ನ ಮನಸ್ಸು ಬೇರೆ ಯಾವುದೋ ವಿಷಯದಲ್ಲಿ ನೆಟ್ಟಿತ್ತು. ಹಣಕಾಸಿನ ವಿಷಯದಲ್ಲಿ ಸಹ ನನಗೆ ಆಸ್ಥೆಯಿರಲಿಲ್ಲ. ಆದರೂ ನನ್ನ ಪಾಸುಬುಕ್ಕನ್ನು

ನೋಡಿದರೆ ಹಣ ಹೇಗೆ ಕರಗುತ್ತಿದೆ ಎಂಬುದು ತಿಳಿಯದೆ ಇರುತ್ತಿರಲಿಲ್ಲ. ಆದರೆ ಕೌಂಟರಿನ ಮುಂದೆ ಕೈಯೊಡ್ಡಿದಾಗ ಹಣ ಕೈಗೆ ಬರುತ್ತಿರುವ ವರೆಗೂ ಅದನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಲು ನಾನು ಸಿದ್ಧನಾಗಿರಲಿಲ್ಲ. ಸದ್ಯ ನಮ್ಮ ತಂದೆ ಮಿತವ್ಯಯದ ಮಾರ್ಗವನ್ನು ಅನುಸರಿಸಿದ್ದುದರಿಂದ ನನಗೂ ಈ ಹೊತ್ತು ಬ್ಯಾಂಕಿನಲ್ಲಿ ಒಂದಿಷ್ಟು ಹಣವಿತ್ತು. ನನ್ನ ಜೀವನ-ದಲ್ಲಿದ್ದ ಒಂದೇ ಒಂದು ವಾಸ್ತವಾಂಶವೆಂದರೆ ರೋಜಿ. ಅವಳನ್ನು ನನ್ನ ಬಳಿಯಲ್ಲಿಟ್ಟುಕೊಳ್ಳುವ ಏಕೈಕ ಸಾಧನೆಯಲ್ಲಿ ನನ್ನ ಬೌದ್ಧಿಕಶಕ್ತಿಯಲ್ಲ ಕೇಂದ್ರೀಕೃತವಾಗಿತ್ತು. ಅವಳನ್ನು ಸದಾ ಕಾಲ ನನ್ನ ಬಳಿ ನಗುನಗುತಾ ಇರುವಂತೆ ಇಟ್ಟುಕೊಂಡಿರುವುದು ಸುಲಭದ ಕೆಲಸವಾಗಿರಲಿಲ್ಲ. ಅವಳನ್ನು ಮೂರು ಹೊತ್ತು ನನ್ನನ್ನಾಶ್ರಯಿಸಿ ಬಳ್ಳಿಯ ಹಾಗೆ ಇಟ್ಟುಕೊಂಡಿರುವುದೇ ನನ್ನ ಬಯಕೆಯಾಗಿತ್ತು. ಆದರೆ ಆ ಹೋಟೆಲಿನಲ್ಲಿ ಅದು ಅಷ್ಟು ಸುಲಭ-ಸಾಧ್ಯವಾಗಿರಲಿಲ್ಲ. ಕೌಂಟರಿನ ಬಳಿಯಿದ್ದ ಆ ಹೋಟೆಲಿನ ಕೆಲಸಗಾರ ತಿಂಡಿ-ತೀರ್ಥಗಳನ್ನು ತಂದುಕೊಡುತ್ತಿದ್ದ. ಆ ಹುಡುಗರು ನನ್ನನ್ನೇ ನೋಡುತ್ತಾ ನನ್ನ ಹಿಂದೆ ಅಪಹಾಸ್ಯ ಮಾಡುತ್ತಿದ್ದಾರೆಂಬ ಭಾವನೆ ನನ್ನನ್ನು ಕಾಡುತ್ತಿತ್ತು.

ಹೋಟೆಲಿನ ೨೮ನೇ ರೂಮಿಗೆ ನಾನು ಹೋಗುವುದನ್ನು ಯಾರು ನೋಡುವುದೂ ನನಗೆ ಇಷ್ಟವಿರಲಿಲ್ಲ. ಕಟ್ಟಡ ಕಟ್ಟಿರುವ ರೀತಿಯೇ ಬದ-ಲಾಗಿ ನಾನು ಮಹಡಿ ಹತ್ತುವುದನ್ನು ಆ ಕೆಲಸಗಾರ ನೋಡುವುದು ಸಾಧ್ಯ-ವಾಗದೆ ಹೋದರೆ? ನಾನು ರೋಜಿ ಎಷ್ಟು ಹೊತ್ತಿಗೆ, ಯಾವ ದಿನ ಹೋಟೆಲಿಗೆ ಬಂದೆವು, ಎಷ್ಟು ಹೊತ್ತಿಗೆ ಹೊರಟೆವು ಎನ್ನುವುದನ್ನೆಲ್ಲಾ ಅವನು ಬರೆದಿಟ್ಟುಕೊಳ್ಳುತ್ತಾನೆಂದು ನಾನು ನಂಬಿದ್ದೆ. ಬಾಗಿಲಿನಲ್ಲಿಯೇ ಇರುತ್ತಿದ್ದ ಅವನು ನನ್ನನ್ನು ನೋಡುವ ರೀತಿ ನನಗೆ ಸ್ವಲ್ಪವೂ ಇಷ್ಟವಿರ-ಲಿಲ್ಲ. ನನ್ನನ್ನು ನೋಡಿ ಹಾಸ್ಯಮಾಡುವ ಹಾಗಿರುತ್ತಿತ್ತು ಆ ಸೊಟ್ಟ ಮುಖದ ಮೇಲಿನ ನಗು. ಅವನನ್ನು ನೋಡದೆ ಹಾಗೇ ಹೋಗಿಬಿಡುವ ಹಾಗೂ ಇರಲಿಲ್ಲ. ಮೊದಲು ನನ್ನ ಜೊತೆ ಕೆಲಸ ಮಾಡುತ್ತಿದ್ದವನು. ಎದುರಿಗೆ ನೋಡಿದಾಗ ಒಂದು ಮಾತೂ ಆಡದೆ ಹೋಗಲು ಸಾಧ್ಯವೇ? ಅವನೆದುರಿಗೆ ಬಂದಾಗ, 'ನೆಹರು ಲಂಡನ್ನಿಗೆ ಹೋಗುತ್ತಾರಂತೆ ನೋಡಿ-

ದೆಯಾ?' ಎಂದೊ ಇಲ್ಲವೇ 'ಹೊಸ ತೆರಿಗೆಗಳನ್ನೆಲ್ಲಾ ಹಾಕುತ್ತಾರಂತೆ. ಪೇಪರಿನಲ್ಲಿ ಓದಿದೆಯಾ?' ಎಂದೊ ಪ್ರಾರಂಭಿಸುತ್ತಿದ್ದೆ. ಇಲ್ಲದೇ ಹೋದರೆ ಭಾರತ ಸರಕಾರದವರು ಪ್ರವಾಸಿಗಳಿಗಾಗಿ ಒಂದು ಹೊಸ ಯೋಜನೆ ತಯಾರು ಮಾಡುತ್ತಿರುವ ವಿಷಯವನ್ನು ಚರ್ಚಿಸುತ್ತಿದ್ದೆವು. ಆದರೆ ಅವನಿಗೆ ಮಾತ್ರ ನನಗೆ ಅದರಲ್ಲಿರುವ ಆಸಕ್ತಿ ಮೂರು ಕಾಸಿಗೂ ಕಡೆ ಎನ್ನುವ ಯೋಚನೆ ಆಗಾಗ ನನ್ನ ಮನಸ್ಸಿನಲ್ಲಿ ಹಾದುಹೋಗುತ್ತಿತ್ತು. ಆದರೆ ಅದು ಅಷ್ಟು ಸುಲಭವಾಗಿರಲಿಲ್ಲ. ರೋಜಿಗೂ ಅವಳ ಗಂಡನಿಗೂ ಈ ಹೋಟೆಲೆಂದರೆ ಅದೇನೋ ಅಭಿಮಾನ. ಮಾರ್ಕೊವೇನೋ ಬೆಟ್ಟದಿಂದ ಎಂದೂ ಕೆಳಗಿಳಿಯದಿದ್ದರೂ ಹೋಟೆಲನ್ನು ಬದಲಾಯಿಸುವ ಯೋಚನೆ ಅವನಿಗಿರಲಿಲ್ಲ. ರೋಜಿಗಾದರೂ ತನ್ನ ರೂಮಿನಿಂದ ಕಾಣುವ ತೆಂಗಿನ ತೋಟದ ಹುಚ್ಚು. ಅಂತೆಯೇ ಆ ರೂಮಿನ ಮೇಲೂ ಒಂದು ರೀತಿಯ ಮೋಹ ಅವಳಿಗೆ. ಆ ತೋಟದ ಮೇಲೆ ಅದೇಕೆ ಅಷ್ಟು ಮೋಹವೋ ನನಗೆ ಮಾತ್ರ ತಿಳಿಯುತ್ತಿರಲಿಲ್ಲ.

ಈಚೀಚೆಗೆ ಅವಳನ್ನು ನಾನು ಅರ್ಥ ಮಾಡಿಕೊಂಡೇ ಇಲ್ಲವೇನೋ ಎನಿಸತೊಡಗಿತ್ತು. ನಾನೇನೋ ನನ್ನ ಪ್ರೇಮಪೂಜೆಯನ್ನು ಅವಿಚ್ಛಿನ್ನವಾಗಿ ಸಾಗಿಸಿದ್ದೆ. ಆದರೆ ಅವಳು ಮಾತ್ರ ಒಮ್ಮೊಮ್ಮೆ ತನ್ನ ತೋಳತೆಕ್ಕೆಯಿಂದ ಬಿಡಿಸಿಕೊಂಡು ದೂರ ಸರಿಯುತ್ತಿದ್ದಳು. ಬೆಟ್ಟದ ಮೇಲಿದ್ದ ಗಂಡನ ಬಗ್ಗೆ ಎಲ್ಲಿಲ್ಲದ ಅಭಿಮಾನ ಬಂದಹಾಗಿತ್ತು.

"ಗಫೂರನಿಗೆ ಹೇಳಿ ಕಾರು ತರಿಸಿ, ನಾನು ಅವರನ್ನು ನೋಡಿಕೊಂಡು ಬರಬೇಕು."

ಆದರೆ ನಾನು ಮಾತ್ರ ಇನ್ನು ಆ ಮಾತಿಗೆಲ್ಲ ಸಿಡುಗುಟ್ಟುವ ಸ್ಥಿತಿಯನ್ನು ಮುಟ್ಟಿರಲಿಲ್ಲ. ಅದರಿಂದ ಸುಮ್ಮನೆ—

"ನೋಡು ರೋಜಿ, ನಾಳೆ ಸಾಯಂಕಾಲದ ವರೆಗೂ ಬರೋಲ್ಲ. ಅದೂ ಅಲ್ಲದೆ ನಿನ್ನೆ ತಾನೇ ಹೋಗಿದ್ದೆ. ಇನ್ನು ನಾಳೆಯ ವರೆಗೂ ಅವರೇನೂ ನಿನ್ನ ಬರುವುದಕ್ಕೆ ಹೇಳಿಲ್ಲ ಅಲ್ಲವೆ?"

"ಹೌದು" ಎಂದು ರೋಜಿ ಚಿಂತಾಕ್ರಾಂತಳಾಗುತ್ತಿದ್ದಳು.

ತಲೆ ಕೆದರಿಕೊಂಡು, ಮಾಸಿದ ಬಟ್ಟೆಗಳನ್ನು ಹಾಕಿಕೊಂಡು ಮಂಚದ

ಒಂದು ಮೂಲೆಯಲ್ಲಿ ಮುದುಡಿ ಕೂಡುವ ರೋಜಿಯನ್ನು ನನ್ನಿಂದ ನೋಡುವುದಕ್ಕಾಗುತ್ತಿರಲಿಲ್ಲ.

"ರೋಜಿ, ನಿನಗೇನಾಗಿದೆ? ನನಗೆ ಹೇಳಬಾರದೆ? ನಿನಗೆ ಏನು ಬೇಕೋ ಅದನ್ನು ಮಾಡೋಕೆ ನಾನು ಯಾವಾಗಲೂ ಸಿದ್ಧನಾಗಿದೀನಿ. ಹೇಳು ರೋಜಿ, ಯಾಕೆ ಹೀಗಿದ್ದೀ?"

"ಎಷ್ಟೇ ಆದರೂ ಅವರು........ಅವರು ನನ್ನ ಯಜಮಾನರು........ ಅವರಿಗೆ ಗೌರವ ಕೊಡಬೇಕಾದದ್ದು ನನ್ನ ಧರ್ಮ."

ನನಗೆ ಅವಳ ಭಾವನೆಗಳೇ ಅರ್ಥವಾಗುತ್ತಿರಲಿಲ್ಲ. ಇದು ನಿಜವಿರಬಹುದೇ? ರೋಜಿಗೆ ಈಗ ಅವಳ ಗಂಡನಲ್ಲಿ ನಿಜವಾಗಿಯೂ ಅಂತಹ ಪೂಜ್ಯಭಾವನೆ ಉಂಟಾಗಿದೆಯೆ? ಅಥವಾ ಇದೆಲ್ಲ ನನ್ನ ಕಣ್ಣಿಗೆ ಮಣ್ಣೆರಚುವ ನಾಟಕವೇ? ನನಗೆ ಏನು ಮಾಡಲೂ ತೋಚುತ್ತಿರಲಿಲ್ಲ.

"ರೋಜಿ, ಇಲ್ಲಿ ನೋಡು, ಒಂದು ವೇಳೆ ಈಗ ಗಫೂರ್ ಬಂದರೂ ಅಲ್ಲಿಗೆ ಹೋಗುವುದಕ್ಕಾಗುತ್ತೆಯೇ?"

"ನಿಜ, ಆದರೆ........ಆದರೆ?........"

"ಏನು ಆದರೆ?"

"ಆದರೆ ನಾನು ಮಾಡುತ್ತಾ ಇರೋದು ನ್ಯಾಯವೆ? ಇಷ್ಟು ದಿನವಾದರೂ ಅವರಿಗೆ ಸ್ವಲ್ಪವೂ ಅಭಿಮಾನ ಬಂದಿಲ್ಲ. ನನಗೋಸ್ಕರ ಎಷ್ಟು ಕಷ್ಟಪಟ್ಟಿದ್ದಾರೆ. ನನ್ನನ್ನು ರಾಣಿಯ ಹಾಗೆ ಇಟ್ಟಿದ್ದಾರೆ. ಚಿನ್ನದಂತಹ ಮನುಷ್ಯ. ಇಲ್ಲದೆ ಹೋದರೆ ಯಾರೇ ಆಗಲಿ. ದೂರದಲ್ಲಿರುವ ಹೋಟೆಲಿನಲ್ಲಿ ತಮ್ಮ ಹೆಂಡತೀನ ಒಬ್ಬಳೇ ಇರೋಕೇ ಬಿಡುತ್ತಿದ್ದರೆ?"

"ಹೋಗಲಿ, ಈಗ ಸ್ವಲ್ಪ ಕಾಫಿಗೆ ಹೇಳಲೇನು?"

"ಇಲ್ಲ, ನನಗೆ ಬೇಡ. ಅವರೇನೋ ಅಷ್ಟು ಒಳ್ಳೆಯವರಾಗಿರೋ ಹೊತ್ತಿಗೆ ಏನೂ ಅಂದುಕೊಳ್ಳದೆ ಇರಬಹುದು. ಆದರೆ ಹೆಂಡತಿಯಾದೋಳು ನಾನು ಅವರ ಹತ್ತಿರ ಇರಬೇಡವೇ? ಅವರು ಹೇಗಾದರೂ ಇರಲಿ, ಪತಿ ಸೇವೆ ಸತಿಯ ಕರ್ತವ್ಯ."

ನಾನು, "ನಿನ್ನ ಗಂಡ ನಿನಗೆ ಕೊಡೋ ಬೆಲೆ ಮೂರು ಕಾಸಿನಷ್ಟು" ಎಂದು ಹೇಳಿಬಿಡುತ್ತೇನೆ. ಇಂದು ಅವಳು ಸ್ತ್ರೀ ಧರ್ಮದ ವಿಚಾರ ಮೊವಲೇ

ಬಾಣ ಬಿಟ್ಟಿದ್ದಳು.

ಇನ್ನು ಹೇಳುವುದಕ್ಕೆ ಉಳಿದಿರುವುದೇನು ? ಅಂತೂ ಅದೊಂದು ಬಗೆಹರಿಯಲಾರದ ಸಮಸ್ಯೆ. ಆದರೆ ಬೆಟ್ಟದ ಮೇಲಿರುವ ಬಂಗಲೆಗೆ ಹೋದ ಮೂರು ಘಂಟೆಯೊಳಗಾಗಿ ಬಳಸಬಾರದ ಭಾಷೆಯನ್ನು ಬಳಸುತ್ತ ಗಂಡನನ್ನು ಬಿಟ್ಟು ಹೋಟೆಲಿಗೆ ಹಿಂತಿರುಗುವ ವಿಷಯವೂ ನನಗೆ ಗೊತ್ತಿತ್ತು. ಆ ಹಾಳು ಮನುಷ್ಯ ಬೆಟ್ಟದಿಂದ ಕೆಳಗಿಳಿದು ಬಂದು ಇವಳನ್ನು ಕರೆದುಕೊಂಡು ಎಲ್ಲಾದರೂ ತೊಲಗಿ ಹೋಗಬಾರದೆ? ಆಗ ನನ್ನಷ್ಟಕ್ಕೆ ನಾನು ಅಂಗಡಿಯ ಕೆಲಸಕ್ಕಾದರೂ ನಿಶ್ಚಿಂತೆಯಿಂದ ಹಿಂತಿರುಗಬಹುದು. ಅವನಿಗೇಕೆ ನಾನು ಕಾಯಬೇಕು? ಅಷ್ಟಕ್ಕೂ ಇವರಿಗೂ ನನಗೂ ಏನು ಸಂಬಂಧ? ಇವಳನ್ನು ಇಲ್ಲೇ ಹೋಟೆಲಿನಲ್ಲಿ ಒಬ್ಬಂಟಿಗಳನ್ನಾಗಿ ಬಿಟ್ಟು ಹೊರಟುಹೋಗಬೇಕು. ಅವನಿಗೆ ಕೆಲಸ ಇದ್ದಷ್ಟು ದಿನವೂ ನನಗೆ ಈ ಕೊರಗು ತಪ್ಪಿದ್ದಲ್ಲ. ಆದರೆ ಅವನು ತನ್ನ ಏಕಾಂತದಿಂದ ಹೊರಗೆ ಬರುವ ಹಾಗೇ ಕಾಣುವುದಿಲ್ಲ. ಬರದಿದ್ದರೆ ಚಿಂತಿಲ್ಲ. ಇವಳ ವಿಚಾರ ಏನಾದರೂ ಮಾಡಬಾರದೇ? ನನಗೆ ಅವನ ಮೇಲೆ ವಿಪರೀತ ಸಿಟ್ಟು ಬಂತು. ನನ್ನನ್ನು ಇಕ್ಕಟ್ಟಿಗೆ ಸಿಲುಕಿಸುತ್ತಿದ್ದ. ನನಗೆ ಸುಮ್ಮನಿರಲಾಗಲಿಲ್ಲ. ನಾನು ರೋಜಿಯನ್ನು ಕೇಳಿದೆ :

"ಈ ಪುರುಷಾರ್ಥಕ್ಕಾಗಿ ಇಲ್ಲಿಗೆ ಯಾಕೆ ಬರಬೇಕು? ಅಲ್ಲೇ ಇರಬಾರದೆ?"

"ಇರಬಹುದು, ಆದರೆ ಅವರು ರಾತ್ರಿಯೆಲ್ಲ ಬರೀತಾ ಕೂಡುತ್ತಾರೆ."

"ರಾತ್ರೆಯಲ್ಲಿ ಬರೆದರೆ ಬೆಳಿಗ್ಗೆ ಮಾತಾಡೋದು ತಾನೆ?"

"ಬೆಳಿಗ್ಗೆಯೆಲ್ಲ ಆ ಗುಹೆಗಳು."

"ಸರಿ, ಹಾಗಾದರೆ ನೀನೂ ಅಲ್ಲಿಗೆ ಹೋಗಬಹುದಲ್ಲ?"

"ಅಲ್ಲಿಗೆ ಹೋದರೆ ಅವರ ಜೊತೆ ಮಾತಾಡೋಕಾಗೋದಿಲ್ಲ. ಅವರು ಬರೀತಾ ಇರೋವಾಗ ಅವರ ಜೊತೆ ಯಾರೂ ಮಾತಾಡಕೂಡದು."

"ಮಾತಾಡಬೇಡ. ಅವರ ಹಾಗೇ ನೀನೂ ಗೋಡೆಯ ಮೇಲಿರೋ ಆ ಚಿತ್ರಗಳನ್ನು ನೋಡು. ಗಂಡನಿಗೆ ಏನು ಇಷ್ಟವಾಗುತ್ತೋ ಅದು ಹೆಂಡತಿಗೂ ಇಷ್ಟವಾಗಬೇಕು."

"ನಿಜ" ಎಂದುಬಿಟ್ಟಳು.

ನಾನು ಶುದ್ಧ ಮೂರ್ಖನ ಹಾಗೆ ಮಾತನ್ನು ಎಲ್ಲಿಗೋ ಎಳೆದಿದ್ದೆ. ಆದುದರಿಂದ ನನಗೂ ಸುಖವಿಲ್ಲ, ಅವಳಿಗೂ ಸುಖವಿಲ್ಲ. ಆದರೆ ನಾಟ್ಯ-ಕಲೆಯ ಬಗ್ಗೆ ಮಾತೆತ್ತಿದಾಗ ಅವಳ ಕಣ್ಣಿನಲ್ಲಿ ಹೊಸ ಬೆಳಕು ಮೂಡಿತು. ಎಷ್ಟೇ ಆದರೂ ನಾನು ಅವಳಲ್ಲಿ ಮೊದಲು ಮೋಹಿಸಿದ್ದು ಅವಳ ಕಲೆ-ಯನ್ನು. ಆದರೆ ನನ್ನ ಅವಳ ಪರಿಚಯ ಪ್ರೇಮದಲ್ಲಿ ಕೊನೆಗೊಂಡಾಗ ನನಗೆ ಅವಳ ನಾಟ್ಯದ ವಿಷಯ ಮರೆತುಹೋಗಿತ್ತು. ಆದರೆ ಒಂದು ದಿನ ಅವಳೇ ನೇರವಾಗಿ ಕೇಳಿದಳು :

"ನೀವೂ ಅವರ ಹಾಗೆ ಆಗುತ್ತ ಇದ್ದೀರಲ್ಲ?"

"ಯಾವ ವಿಧದಲ್ಲಿ?"

"ನಾನು ನಾಟ್ಯ ಮಾಡಿದರೆ ನಿಮಗೆ ಬೇಸರವೇ?"

"ಛೆ, ಛೆ ಎಲ್ಲಾದರೂ ಉಂಟೆ? ಹಾಗೆ ಯಾಕೆ ತಿಳಿದುಕೊಂಡೆ?"

"ಒಂದಾನೊಂದು ಕಾಲಕ್ಕೆ ಏನೋ ಮಹಾ ಕಲಾಪ್ರೇಮಿಗಳ ಹಾಗೆ ಮಾತಾಡುತ್ತಾ ಇದ್ದಿರಿ. ಬರುಬರುತ್ತ ಅದರ ವಿಷಯ ಮರತೇಹೋಗಿರೋ ಹಾಗಿದೆ."

ನಿಜ, ಈಚೆಗೆ ಅವಳ ನಾಟ್ಯದ ವಿಷಯ ಮರೆತುಹೋಗಿತ್ತು. ಆದರೆ ಈ ಸಮಯವನ್ನು ಕಳೆದುಕೊಳ್ಳಲು ನಾನು ಸಿದ್ಧನಿರಲಿಲ್ಲ. ಅವಳ ಕೈಹಿಡಿದು-ಕೊಂಡು, "ರೋಜಿ, ನಿನಗೋಸ್ಕರ ಏನು ಬೇಕಾದರೂ ಮಾಡೋದಕ್ಕೆ ಸಿದ್ಧವಾಗಿದೀನಿ. ಪ್ರಾಣ ಬೇಕಾದರೂ ಕೊಡುತ್ತೀನಿ. ಏನು ಬೇಕು ಹೇಳು. ನೀನು ನಾಟ್ಯವಿಶಾರದೆಯಾದರೆ ಅದನ್ನು ನೋಡೋ ಭಾಗ್ಯ ನನ್ನದಲ್ಲವೇ ಚಿನ್ನ.........ಏನು ಬೇಕೋ ಹೇಳು. ಈ ನಿಮಿಷ ಅದಕ್ಕೆ ಸಿದ್ಧ" ಎಂದೆ.

ರೋಜಿಯ ಮುಖದಲ್ಲಿ ಗೆಲುವು ಮೂಡಿತು. ನಾಟ್ಯದ ಹೆಸರು ಕೇಳಿದ ಕೂಡಲೆ ಅವಳ ಕಣ್ಣುಗಳಲ್ಲಿ ಕಾಂತಿಯ ಹೊಂಬೆಳಕು ಮೂಡಿತು. ಅವಳ ಪ್ರೇಮಕ್ಕೆ ಅರ್ಹವಾಗುವ ದಾರಿಯನ್ನು ಕಂಡುಹಿಡಿದಿದ್ದೆ. ಅದನ್ನು ಸಂಪೂರ್ಣ-ವಾಗಿ ಉಪಯೋಗಿಸಿಕೊಳ್ಳುವ ಮಾರ್ಗವನ್ನೂ ಪತ್ತೆಹಚ್ಚಿದೆ. ಅವಳ ಆ ಪುಟ್ಟ ತಲೆ ಕಲಾಪ್ರಪಂಚವನ್ನು, ಪತಿ ಪ್ರಪಂಚವನ್ನು ಎರಡನ್ನೂ ಅಡಗಿ-ಸಿಟ್ಟುಕೊಳ್ಳುವ ಸಾಮರ್ಥ್ಯ ಪಡೆದಿರಲಿಲ್ಲ. ಕಲೆ ತಲೆಯನ್ನು ತುಂಬಿದಾಗ

ಮಾರ್ಕೊವಿನ ನೆನಪು ತಾನೇ ತಾನಾಗಿ ಹಿಂದೆ ಸರಿಯಿತು.

ಅವಳಿಗೀಗ ಅವಳ ನಾಟ್ಯದ ಕಲ್ಪನೆಯೇ ಕಲ್ಪನೆ. ಭವಿಷ್ಯಜೀವನದ ರೂಪರೇಖೆ ಅವಳ ಕಣ್ಣುಮುಂದೆ ನರ್ತಿಸುತ್ತಿತ್ತು. ಬೆಳಿಗ್ಗೆ ಐದು ಘಂಟೆಗೇ ಎದ್ದು ಎಂಟು ಘಂಟೆಯ ವರೆಗೂ ಅಭ್ಯಾಸ ಮಾಡುವುದು. ನಾಟ್ಯಾಭ್ಯಾಸ-ಕ್ಕಾಗಿಯೇ ಒಂದು ರೂಮು. ಕೆಳಗೆ ಮೂಲೆಯಲ್ಲಿ ನೃತ್ಯರಾಜ ನಟರಾಜನ ಕಂಚಿನ ವಿಗ್ರಹ. ಇನ್ನೊಂದು ಕಡೆ ಸದಾ ಕಾಲವೂ ಘಮಘಮಿಸುವ ಧೂಪಕುಂಡ. ಎಂಟು ಘಂಟೆಯಾದ ಮೇಲೆ ಡ್ರೈವ್ಹರನಿಗೆ ಹೇಳಿಕಳುಹಿ-ಸುವುದು.

" ಕಾರು ಇಟ್ಟುಕೊಳ್ಳುತ್ತೀಯೋ ? " ಎಂದೆ ನಾನು.

" ಮತ್ತೆ ಬೇಡವೇ ? ಅಷ್ಟೊಂದು ಕಾರ್ಯಕ್ರಮಗಳು ಇರೋವಾಗ ಕಾರು ಇಲ್ಲದೆ ಹೋದರೆ ಹೇಗೆ? "

" ಹೌದು, ಹೌದು ಬೇಕೇ ಬೇಕು. "

ಆಮೇಲೆ ಮಧ್ಯಾಹ್ನ ಒಂದೆರಡು ಘಂಟೆಗಳ ಹೊತ್ತು ಪ್ರಾಚೀನ ಕಲಾಗ್ರಂಥಗಳನ್ನು ಓದುವುದು ಭರತಮುನಿಯ ಶಾಸ್ತ್ರದಂತಹ ಗ್ರಂಥ-ಗಳನ್ನು ಓದದೇ ಇದ್ದರೆ ಕಲಾಭಿವೃದ್ಧಿ ಸಾಧ್ಯವೇ ಇಲ್ಲ. ಪುಸ್ತಕಗಳೆಲ್ಲ ಅವಳ ಚಿಕ್ಕಪ್ಪನ ಮನೆಯಲ್ಲೇ ಇದ್ದುವಂತೆ. ತಾನು ಬರೆದು ತರಿಸಿ-ಕೊಳ್ಳುವುದಾಗಿ ಹೇಳಿದಳು ಇನ್ನು ತಾನೇ ಆ ಪುಸ್ತಕಗಳನ್ನೆಲ್ಲಾ ಓದಿ ಅರ್ಥಮಾಡಿಕೊಳ್ಳುವುದು ಸಾಧ್ಯವೆ? ಅದಕ್ಕೆ ಒಬ್ಬ ಪಂಡಿತರು ಬೇಡವೆ ?

" ಸಂಸ್ಕೃತ ಪಂಡಿತರು ಯಾರಾದರೂ ಇದ್ದಾರೆಯೇ ? " ಎಂದಳು.

" ಒಬ್ಬರಲ್ಲ, ಇಬ್ಬರಲ್ಲ ಹತ್ತು ಜನ ಬೇಕಾದರೂ ಇದ್ದಾರೆ " ಎಂದೆ.

ಬರೀ ನಾಟ್ಯಗ್ರಂಥಗಳನ್ನು ಓದಿದರೆ ಸಾಲದು. ರಾಮಾಯಣ, ಮಹಾಭಾರತಗಳಿಂದಲೂ ಓದಬೇಕು. ಅವೆಲ್ಲ ನಮಗೊಂದು ಅಪೂರ್ವ ನಿಧಿಯಿದ್ದ ಹಾಗೆ. ಅದೂ ಅಲ್ಲದೆ ಅವನ್ನು ಓದಿದರೆ ಹೊಸ-ಹೊಸ ನಾಟ್ಯಕ್ಕೆ ವಿಷಯ ಸಿಕ್ಕಿದ ಹಾಗಾಗುತ್ತೆ.

ಸ್ವಲ್ಪ ವಿಶ್ರಾಂತಿ, ಆಮೇಲೆ ಮೂರು ಘಂಟೆಯ ಹೊತ್ತಿಗೆ ಒಂದಿಷ್ಟು ಪೇಟೆಯ ಕಡೆ ಸವಾರಿ. ಸಂಜೆ ಏನಾದರೂ ಕಾರ್ಯಕ್ರಮವಿದ್ದರೆ ಹೋಯಿತು. ಇಲ್ಲದೆಹೋದರೆ ಸಂಜೆಗೆ ಸಿನಿಮಾ. ಕಾರ್ಯಕ್ರಮವಿದ್ದರೆ

ಮೂರು ಘಂಟೆಯ ವರೆಗೂ ವಿಶ್ರಾಂತಿ ಪಡೆದು ಆಮೇಲೆ ಇನ್ನೇನು ಕಾರ್ಯ-
ಕ್ರಮ ಆರಂಭವಾಗೋದಕ್ಕೆ ಅರ್ಧ ಘಂಟೆ ಇದೆ ಎನ್ನೋಹೊತ್ತಿಗೆ ಆ ಸ್ಥಳಕ್ಕೆ
ಹೋಗುವುದು. ಅಷ್ಟುಹೊತ್ತಿಗೆ ಹೋದರೆ ಸಾಕು ಮೇಕಪ್ ಡ್ರೆಸ್ಸಿಂಗ್
ಎಲ್ಲಾ ಮನೇಲಿ ಮುಗಿದಿರುತ್ತೆ.

ರೋಜಿ ಯಾವ ವಿವರವನ್ನೂ ಮರೆತಿರಲಿಲ್ಲ. ಹಗಲು–ರಾತ್ರಿ ಅವ-
ಳಿಗೆ ಇದೇ ಕನಸಾಯಿತು. ಮೊದಲು ಬೇಕಾಗಿದ್ದುದು ಪಕ್ಕವಾದ್ಯದವರು.
ಪಕ್ಕವಾದ್ಯವಿಲ್ಲದೆ ಹೋದರೆ ನಾಟ್ಯಾಭ್ಯಾಸ ಸಾಗೋಹಾಗಿಲ್ಲ. ಅಭ್ಯಾಸ-
ವೆಲ್ಲ ಮುಗಿದ ಮೇಲೆ ನನಗೆ ಹೇಳುವುದು. ನಾನು ಅವಳಿಗಾಗಿ ಅಲ್ಲಲ್ಲಿ
ಕಾರ್ಯಕ್ರಮಗಳನ್ನು ಏರ್ಪಡಿಸುವುದು. ಅವಳ ಉತ್ಸಾಹವನ್ನು ನೋಡಿ
ನನಗೆ ಒಮ್ಮೊಮ್ಮೆ ದಿಗ್ಭ್ರಮೆಯಾಗುತ್ತಿತ್ತು. ಅವಳ ನಾಟ್ಯಭಾಷೆಗೂ ನನ್ನ
ಪ್ರವಾಸಿ ಭಾಷೆಗೂ ಅಜಗಜಾಂತರ. ಅವಳು ಮಾತನಾಡುವಾಗ ಏನೂ
ಹೇಳದೆ ಸುಮ್ಮನೆ ಕುಳಿತಿರುವುದು ಅಸಾಧ್ಯವಾಗಿತ್ತು. ಆದರೂ ಬಾಯಿ-
ಬಿಟ್ಟರೆ ಬಣ್ಣಗೇಡು. ನನಗೆ ನೃತ್ಯದ ವಿಷಯ ಏನೂ ತಿಳಿಯದೆಂದು ಹೇಳಿ-
ಬಿಡುವುದೆ? ಹಾಗೆಂದರೆ ನನಗೆ ಕಲೆಯಲ್ಲಿ ಅಭಿಮಾನವಿಲ್ಲವೆಂದುಕೊಂಡು
ಅವಳು ಅವನ ಬಳಿಗೋಡುವುದು ಖಂಡಿತ. ಹೀಗಾಗಿ ಕೊನೆಗೊಂದು ದಿನ–

"ರೋಜಿ, ನನಗೆ ಈ ನಾಟ್ಯದ ಅಆ ಇಈ ತಿಳೀತು. ನೀನು ನಾಟ್ಯ-
ವಾಡಿದರೆ ನೋಡಿ ಆನಂದಪಡೋ ಭಾಗ್ಯವೇನೋ ನಂದು. ಆದರೆ ಅದನ್ನ
ಸರಿಯಾಗಿ ಅರ್ಥಮಾಡಿಕೊಳ್ಳೋಕೆ ಬೇಕಾದ ಒಂದಿಷ್ಟು ವಿಷಯ ತಿಳಿಸಿ-
ಕೊಡುತ್ತೀಯಾ?" ಎಂದೆ.

ರೋಜಿಗೆ ಆದ ಆನಂದ ಹೇಳಲಸಾಧ್ಯ. ಇದರಿಂದ ನಮ್ಮಿಬ್ಬರಲ್ಲಿನ
ಸಲಿಗೆ ಹೆಚ್ಚಿತು. ನಮ್ಮ ಪ್ರೇಮಕ್ಕೆ ಒಂದು ಹೊಸ ರೂಪ ಬಂತು ಎಲ್ಲೇ
ಇರಲಿ, ಯಾರೇ ಇರಲಿ ಮಗುವಿಗೆ ಪಾಠ ಹೇಳಿಕೊಡುವ ಹಾಗೆ ರೋಜಿ
ನನಗೆ ನಾಟ್ಯದ ವಿಷಯವನ್ನು ತಿಳಿಸಲಾರಂಭಿಸಿದಳು. ಗಫೂರನ ಕಾರಿನಲ್ಲಿ
ಕುಳಿತಾಗ—

"'ಪಲ್ಲವಿ' ಅಂದರೆ ಏನು ಅಂತ ತಿಳಿದಿದೆಯಾ? ಇಲ್ಲಿ ಎಲ್ಲದಕ್ಕಿಂತ
ತಾಳ ಮುಖ್ಯ. ಯಾವಾಗಲೂ ಒಂದೇ ತರಹ ಇರೋಲ್ಲ. ಎರಡೆರಡು
ಮಾತ್ರೇನೋ ಯಾವಾಗಲೂ ಬರೋಲ್ಲ. ಆದರೆ ಅದು ಸಾಮಾನ್ಯವಾಗಿ

ಬರೋದು ಹೀಗೆ— ತ-ಕ-ತ-ಕಿ-ಟ, ತ-ಕ." ನನಗೆ ತಮಾಷೆಯಾಗಿತ್ತು. "ಆ ಐದು ಅಥವಾ ಏಳು ಮಾತ್ರೆಯ ತಾಳಕ್ಕೆ ಸರಿಯಾಗಿ ಕಾಲುಹಾಕಬೇಕಾದರೆ ಅದಕ್ಕೆ ಎಷ್ಟು ಅಭ್ಯಾಸ ಬೇಕು ಗೊತ್ತೆ?"

ಇದನ್ನೆಲ್ಲ ಗಫೂರ್ ಧಾರಾಳವಾಗಿ ಕೇಳಬಹುದಾಗಿತ್ತು. ನನಗೆ ಯಾವ ಹೆದರಿಕೆಯೂ ಇರಲಿಲ್ಲ.

ಸಿನಿಮಾ ಮಂದಿರದಲ್ಲಿ ಕುಳಿತಾಗ ಒಂದು ದಿನ ಇದ್ದಕ್ಕಿದ್ದ ಹಾಗೆಯೇ ಹೇಳಿದಳು:

"ತಾಳೇ ಗರಿ ಮೇಲೆ ಬರೆದಿರೋ ಒಂದು ಹಳೇ ಹಾಡು ನಮ್ಮ ಸೋದರಮಾವನ ಹತ್ತಿರ ಇದೆ. ಅದನ್ನು ಯಾರೂ ನೋಡಿಲ್ಲ. ಆ ಹಾಡನ್ನು ಕಲಿತು ಅದಕ್ಕೆ ಸರಿಯಾಗಿ ನೃತ್ಯ ಮಾಡುತ್ತ ಇದ್ದೋಳು ಅಂದರೆ ಈ ದೇಶಕ್ಕೆಲ್ಲ ನಮ್ಮಮ್ಮ ಒಬ್ಬಳೆ. ಅದನ್ನು ಮಾವನಿಂದ ತರಿಸಿಕೋಬೇಕು. ಆ ನೃತ್ಯ ಹೇಗೆ ಮಾಡೋದು ಅಂತ ನಿಮಗೆ ತೋರಿಸುತ್ತೇನೆ. ರೂಮಿಗೆ ಹೋಗೋಣವೇ? ಈ ಸಿನಿಮಾ ಸ್ವಲ್ಪವೂ ಚೆನ್ನಾಗಿಲ್ಲ. ನನಗೆ ಬೇಜಾರಾಯಿತು."

ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ನಾವು ೨೮ನೇ ರೂಮಿನಲ್ಲಿದ್ದೆವು. ನನ್ನನ್ನು ಮಂಚದ ಮೇಲೆ ಕೂಡಿಸಿ ರೋಜಿ ಪಕ್ಕದ ಕೋಣೆಗೆ ಹೋಗಿ ಸೀರೆಯನ್ನು ನಾಟ್ಯಮಾಡುವುದಕ್ಕೆ ಸರಿಯಾಗುವ ಹಾಗೆ ಧರಿಸಿ ಒಳಗೆ ಬಂದಳು. "ನೋಡಿ, ಆ ಹಾಡು ಹೇಗೆ ಅಂತ ತೋರಿಸುತ್ತೀನಿ. ಆದರೆ ಪಕ್ಕವಾದ್ಯವಿಲ್ಲದೆ ಹೋದರೆ ಅಷ್ಟು ಶೋಭಿಸೋದಿಲ್ಲ. ಆದರೂ ಪರವಾಗಿಲ್ಲ."

ರೋಜಿ ರೂಮಿನ ಒಂದು ಅಂಚಿನಲ್ಲಿ ನಿಂತು ಮೆಲ್ಲನೆ ಹಾಡಲಾರಂಭಿಸಿದಳು. ಸಂಸ್ಕೃತ ಕವಿಯೊಬ್ಬನು ಬರೆದ ಹಾಡು. ಯಮುನೆಯ ದಡದಲ್ಲಿ ಪ್ರೇಮಿಗಳಿಬ್ಬರ ಪ್ರೇಮಗೀತೆ. ರೋಜಿ ಮೆಲ್ಲನೆ ಹಾಡುತ್ತ ನಾಟ್ಯವಾರಂಭಿಸಿದಾಗ ನನಗೆ ರೋಮಾಂಚನವಾಯಿತು. ಹಾಡಿನ ಅರ್ಥ ಸರಿಯಾಗಿ ತಿಳಿಯದೆ ಹೋದರೂ ರೋಜಿ ವ್ಯಕ್ತಪಡಿಸುತ್ತಿದ್ದ ಭಾವಗಳಿಗೆ ನಾನು ಮಾರುಹೋಗಿ ಮೈಮರೆತೆ. ಆಗಾಗ ರೋಜಿ ನಾಟ್ಯವನ್ನು ನಿಲ್ಲಿಸಿ ಹಾಡಿನ ಅರ್ಥ ಹೇಳತೊಡಗಿದಳು. 'ನಾರೀ' ಅಂದರೆ ಹೆಂಗಸು. 'ಮಣಿ' ಅಂದರೆ ಆಭ-

ರಣ. ಆ ಸಾಲಿನ ಅರ್ಥ ‘ ನೀನು ಹೊರಿಸುತ್ತಿರುವ ಈ ಪ್ರೇಮದ ಭಾರ-ವನ್ನು ನಾನು ತಾಳಲಾರೆ.’ ಆಗಾಗ ರೋಜಿ ನಿಲ್ಲುತ್ತಿದ್ದಳು. ಹಣೆಯ ಮೇಲೆ ಬೆವರಿನ ಹನಿಗಳು ಮೂಡುತ್ತಿದ್ದವು. ‘ ಪ್ರೇಮಿ ’ ಅಂದರೆ ಇಲ್ಲಿ ಯಾವಾ-ಗಲೂ ‘ ದೇವರು ’. ಅವಳ ನಾಟ್ಯಕ್ಕೆ ನೆಲ ಪ್ರತಿಧ್ವನಿಸುತ್ತಿತ್ತು. ಕೆಳಗಿರು-ವವರು ಎಲ್ಲಿ ಬಂದುಬಿಡುತ್ತಾರೋ ಎಂದು ನನಗೆ ಭಯ. ಆದರೆ ರೋಜಿಗೆ ಇದಾವುದರ ಅರಿವೂ ಇದ್ದಂತಿರಲಿಲ್ಲ. ರೋಜಿಯ ನಾಟ್ಯದಲ್ಲಿ ಆ ಹಾಡಿನ ಅರ್ಥ ಮೂರ್ತಿವೆತ್ತು ಬಂದಂತಿತ್ತು. ಚಿಕ್ಕಂದಿನ ಪ್ರೇಮ, ಮದುವೆಯಲ್ಲಿ ಅದರ ಸಾಫಲ್ಯ, ಅನಂತರದ ಮುಪ್ಪು. ಇಷ್ಟಾದರೂ ಪ್ರೇಮಿಯ ಹೃದಯ ಮಾತ್ರ ಚಿರಯೌವ್ವನವನ್ನು ಅನುಭವಿಸುತ್ತ ಕೊಳದಲ್ಲಿ ಕಮಲದ ಹಾಗಿತ್ತು. ರೋಜಿ ತನ್ನ ಕೈಬೆರಳುಗಳನ್ನು ಆಡಿಸುತ್ತ ಕಮಲವನ್ನು ತೋರಿಸಿದಾಗ-ಲಂತೂ ನನಗೆ ಕಣ್ಣೆದುರಿಗಿನ ಕೊಳದಲ್ಲಿ ಕಮಲವಿದ್ದ ಹಾಗೂ, ನೀರು ಜುಳು-ಜುಳು ಶಬ್ದಮಾಡುವ ಹಾಗೂ ಭಾಸವಾಯಿತು. ಒಂದು ಘಂಟೆಯ ಕಾಲ ನಡೆಯಿತು ರೋಜಿಯ ನರ್ತನ. ನನಗೆ ಅಂದಾದ ಆನಂದ ಅನಿ-ರ್ವಚನೀಯ. ಅವಳು ನೃತ್ಯಮಾಡುತ್ತಿರುವಷ್ಟು ಹೊತ್ತು ನನ್ನ ಮನಸ್ಸಿ-ನಲ್ಲಿ ಕಾಮದ ಛಾಯೆ ಲವಶೇಷವೂ ಇಲ್ಲದೆ ನಿರ್ಮಲವಾಗಿತ್ತು. ಯಾವ ಯೋಚನೆಯೂ ಇಲ್ಲದೆ ಪ್ರಶಾಂತವಾಗಿತ್ತು. ಆ ನಿಮಿಷಕ್ಕೆ ಅವಳು ರೋಜಿ-ಯಾಗಿರದೆ ಕಲಾದೇವತೆಯಾಗಿದ್ದಳು. ನಾನು ಅವಳ ಭಕ್ತನಾಗಿದ್ದೆ. ರೋಜಿ ಇದ್ದಕ್ಕಿದ್ದ ಹಾಗೆಯೇ ನಾಟ್ಯವನ್ನು ನಿಲ್ಲಿಸಿ ನನ್ನನ್ನು ಬಿಗಿದಪ್ಪಿದಳು.

“ ನನ್ನ ರಾಜ, ನನಗೆ ಸ್ವರ್ಗವನ್ನು ತಂದುಕೊಟ್ಟಿರಿ. ”

ಮಾರನೆಯ ದಿನ ಬೆಟ್ಟದ ಬಂಗಲೆಗೆ ಹೋಗುವುದಕ್ಕೆ ಮೊದಲು ಒಂದು ಯೋಚನೆಯನ್ನು ತಯಾರಿಸಿಯೇ ಹೊರಟೆವು. ಅವಳನ್ನು ಅಲ್ಲೇ ಬಿಟ್ಟು ನಾನು ಊರಿಗೆ ಹಿಂತಿರುಗುವುದು. ಅವಳು ಒಂದೆರಡು ದಿನ ಅವನ ನಿರ್ಲಕ್ಷ್ಯವನ್ನು ಬರವಣಿಗೆಯನ್ನು ಸಹಿಸಿಕೊಂಡಿದ್ದು, ಎರಡು ದಿನವಾದ ಮೇಲೆ ನಮ್ಮ ನಾಟ್ಯಯೋಜನೆಯನ್ನು ಅವನ ಒಪ್ಪಿಗೆಗಾಗಿ ಅವನ ಮುಂದಿಡುವುದು. ನಾವು ಮುಂದೆ ಹೆಜ್ಜೆ ಇಡುವುದಕ್ಕೆ ಮೊದಲು ಅವಳು ಅವಳ ಗಂಡನ ಒಪ್ಪಿಗೆಯನ್ನು ಪಡೆಯಬೇಕಾಗಿತ್ತು. ಆಮೇಲೆ ನಾನು ಬೆಟ್ಟಕ್ಕೆ ಹೋಗುವುದು. ಅಲ್ಲಿಂದ ಮುಂದೆ ನಮ್ಮ ಯೋಜನೆಯನ್ನು

ಕಾರ್ಯರೂಪಕ್ಕೆ ತರುವುದು. ಈ ಪ್ರಯತ್ನ ಇದ್ದಕ್ಕಿದ್ದ ಹಾಗೆ ರೋಜಿಗೆ ತನ್ನ ಗಂಡನಲ್ಲಿ ಅಪಾರವಾದ ನಂಬಿಕೆ ಹುಟ್ಟಿದಹಾಗಿತ್ತು.

"ನಾನು ನಾಟ್ಯ ಮಾಡೋದಕ್ಕೆ ಅವರು ಖಂಡಿತ ಒಪ್ಪುತ್ತಾರೆ. ಅವರೇನೂ ಅಂತಹ ಕಟುಕರಲ್ಲ. ಎಲ್ಲಾ ಬರಿ ನಟನೆ ಅಷ್ಟೆ. ನನಗೆ ಗೊತ್ತು. ನೀವು ಅವರ ಹತ್ತಿರ ಮಾತಾಡಲೇಬೇಡಿ. ಅವರನ್ನು ಹೇಗೆ ಮಾತಾಡಿಸಬೇಕೆಂಬುದು ನನಗೆ ಗೊತ್ತು." ರೋಜಿ ಮಾತಾಡುತ್ತಲೇ ಇದ್ದಳು. ಬೆಟ್ಟದ ಬಂಗಲೆ ಬಂದಿತು.

"ಓ! ಆ ಹಕ್ಕಿಗಳನ್ನು ನೋಡಿ, ನೂರು ವಿಧ, ನೂರು ಸ್ವರ. ಒಬ್ಬ ಹೆಂಗಸಿನ ಭುಜದ ಮೇಲೆ ಕೂತಿರೋ ಒಂದು ಗಿಣಿಯ ವಿಷಯವಾಗಿ ಒಂದು ಹಾಡಿದೆ. ಅದನ್ನು ಯಾವಾಗಲಾದರೂ ಹಾಡಿ ತೋರಿಸುತ್ತೇನೆ."

ಮಾರ್ಕೊವಿನ ಮುಖವನ್ನು ನೋಡಿದ ಕೂಡಲೇ ಇವತ್ತು ಸೂರ್ಯ ಪೂರ್ವದಲ್ಲಿ ಮುಳುಗಿರಬೇಕು ಎನಿಸಿತು. ನಗೆಯ ಬುಗ್ಗೆಯಾಗಿದ್ದ ಮಾರ್ಕೊ. ಎಂದೂ ಇಲ್ಲದಷ್ಟು ಪ್ರೀತಿಯಿಂದ ಹೆಂಡತಿಯನ್ನು ಸ್ವಾಗತಿಸಿದ. "ಬರಿ ಎರಡೇ ಗುಹೆ ಅಂತಿದ್ದೆ. ಮೂರನೇ ಗುಹೆ ಸಹ ಬಂದಿದೆ. ಎರಡನೇ ಗುಹೇಲಿ ಒಂದು ಕಡೆ ಬಣ್ಣಾನ ಸ್ವಲ್ಪ ಹೀಗಂದೆ. ಒಂದಿಷ್ಟು ಮಣ್ಣು ಬಿತ್ತು. ನೋಡಿದರೆ ಒಂದು ದೊಡ್ಡ ನೆಲಮಾಳಿಗೆ. ಆ ಗವೀ ತುಂಬ ಒಂದೇ ಒಂದು ಚಿತ್ರ ಸಂಗೀತಶಾಸ್ತ್ರವನ್ನೆಲ್ಲ ಪ್ರತಿಬಿಂಬಿಸಿದೆ. ಐದನೇ ಶತಮಾನದ್ದು. ಅಷ್ಟೊಂದು ವ್ಯತ್ಯಾಸ ಹೇಗೆ ಬಂತು ಅಂತ........" ವರಾಂಡದಲ್ಲಿ ಒಂದು ಕುರ್ಚಿಯನ್ನು ಹಾಕಿಕೊಂಡು ಮಾರ್ಕೊ ಕುಳಿತಿದ್ದ. ತೊಡೆಯ ಮೇಲೆ ಕಾಗದಗಳ ಕಂತೆ. ಮಾರ್ಕೊ ತನ್ನ ಹೊಸ ಸಂಶೋಧನೆಯ ವಿಷಯ ಹೇಳಿದ ಕೂಡಲೇ ರೋಜಿ—

"ಸಂಗೀತ ಶಾಸ್ತ್ರಾನಾ? ಓ ಎಷ್ಟು ಸೊಗಸಾಗಿರುತ್ತೆ, ನಾಳೆ ನನ್ನನ್ನು ಕರೆದುಕೊಂಡು ಹೋಗುತ್ತೀರಾ?"

"ಸರಿ, ಬೆಳಿಗ್ಗೆ ನನ್ನ ಜೊತೆ ಬಾ, ತೋರಿಸುತ್ತೇನೆ."

"ಓಹ್!........" ರೋಜಿ ಕುಣಿದಾಡಿದಳು.

"ಅದನ್ನು ನೋಡಿಕೊಂಡು ಬಂದು ಹಾಗೇ ಹಾಡಿತೋರಿಸುತ್ತೇನೆ."

"ಅದೇನೂ ನೀನು ತಿಳಿದುಕೊಂಡಿರುವಷ್ಟು ಸುಲಭವಲ್ಲ" ಎಂದು-

ಬಿಟ್ಟ ಮಾರ್ಕೊ.

ಆದರೂ ರೋಜಿ ಅವನನ್ನು ಎಲ್ಲದರಲ್ಲೂ ತೃಪ್ತಿಪಡಿಸಲು ಹೊರಟಂತಿತ್ತು. ಇದರಿಂದೇನೂ ನನಗೆ ಸಂತೋಷವಾಗಲಿಲ್ಲ. ಮಾರ್ಕೊ ನನ್ನ ಕಡೆ ತಿರುಗಿ ಕೇಳಿದ:

"ಏನು ರಾಜು, ನೀನೂ ಬರುತ್ತಿಯೇನು ?"

"ಬರೋಕೇನೋ ಇಷ್ಟವೇ ಸಾರ್. ಆದರೆ ಊರಲ್ಲಿ ಅರ್ಜಂಟ್ ಕೆಲಸ ಇದೆ. ಅಮ್ಮಾವರನ್ನು ಬಿಟ್ಟು ಹೋಗೋಣಾಂತ ಬಂದೆ. ಇಲ್ಲಿ ಎಲ್ಲಾ ಅನುಕೂಲವಾಗಿದೆಯೇ ಸಾರ್?"

"ಎಲ್ಲಾ ಸರಿಯಾಗಿದೆಯಪ್ಪ, ಯಾವುದಕ್ಕೂ ಯೋಚನೆಯಿಲ್ಲ. ಜೋಸೆಫ್ ಅಂತೂ ಫಸ್ಟ್‌ಕ್ಲಾಸ್ ಕೆಲಸಗಾರ. ಎಲ್ಲಿದ್ದಾನೆ, ಏನು ಮಾಡುತ್ತಾ ಇದ್ದಾನೆ ಅಂತ ಸಹ ಗೊತ್ತಾಗೋದಿಲ್ಲ. ಆದರೆ ಯಾವ ಹೊತ್ತಿಗೆ ಏನು ಬೇಕೋ ಅದು ರೆಡಿ. ಕೆಲಸ ಅಂದರೆ ಅದು. ಅಂತೂ ನಿನ್ನ ಋಣ ಹೇಗೆ ತೀರಿಸಬೇಕೋ ತಿಳಿಯದು. ಇರೋದಕ್ಕೆ ಇಂತಹ ಒಳ್ಳೇ ಸ್ಥಳವನ್ನು ಹುಡುಕಿಕೊಟ್ಟಿದ್ದೆ. ನೋಡಿಕೊಳ್ಳೋದಕ್ಕೆ ಅಂತಹ ಒಳ್ಳೆಯ ಮನುಷ್ಯ. ಅಲ್ಲಾ, ಎಲ್ಲಾ ಬಿಟ್ಟು ಅವನು ಈ ಬೆಟ್ಟದ ಮೇಲೆ ತನ್ನ ಬುದ್ಧಿಶಕ್ತಿಯನ್ನು ವ್ಯರ್ಥವಾಗಿ ಕಳೀತಿದಾನಲ್ಲ........"

"ನಿಮ್ಮ ಹೃದಯ ದೊಡ್ಡದು ಸಾರ್. ಅಂತೂ ನಿಮ್ಮ ಹೊಗಳಿಕೆ ಕೇಳಿದರೆ ಜೋಸೆಫ್‌ನಿಗೆ ಕೊಂಬು ಬರೋದೇ ನಿಜ."

"ನಾನೇ ಹೇಳಿಬಿಟ್ಟಿದ್ದೇನಯ್ಯಾ ಅವನಿಗೆ, ನಿನಗೆ ಯಾವಾಗ ಈ ಜಾಗ ಬೇಜಾರಾಗುತ್ತೆ ಆಗ ಬಾ. ನಮ್ಮ ಮನೇಲಿ ನಿನಗೆ ಕೆಲಸ ಕೊಡುತ್ತೀನಿ ಅಂತ."

ಮಾರ್ಕೊ ಮುಕ್ತಕಂಠದಿಂದ ಹೊಗಳುತ್ತಿದ್ದ. ಏಕಾಂತದಲ್ಲಿ ಗುಹೆಗಳ ನಡುವೆ ಇದ್ದು ಮಾರ್ಕೊವಿನ ಹೃದಯ ದೈವೀಕವಾದ ಹಾಗಿತ್ತು. ರೋಜಿಗೆ ಬದಲಾಗಿ ಜೋಸೆಫ್ ಮಾರ್ಕೊನ ಹೆಂಡತಿಯಾಗಿದ್ದರೆ?

ಮಾರ್ಕೊ ಏನೋ ಮಾತಾಡುತ್ತಿದ್ದ. ಆದರೆ ನಾನು ನನ್ನ ಯೋಚನೆಗಳಲ್ಲಿದ್ದೆ. ರೋಜಿ ಮಾತ್ರ ಸಾಧ್ವಿಯಂತೆ. "ಸದ್ಯ ಏನೂ ತೊಂದರೆ ಆಗಲಿಲ್ಲವಲ್ಲ. ನನಗೆ ಅದೇ ಯೋಚನೆಯಾಗಿತ್ತು. ತಾಳಿ, ಹಾಲಿದಿಯೇನೋ

ನೋಡುತ್ತೀನಿ. ಹಾಲಿದ್ದರೆ ಎಲ್ಲರಿಗೂ ಒಂದೊಂದು ಲೋಟ ಕಾಫಿ, ಐದು ನಿಮಿಷ ಅಷ್ಟೆ, ಆಗಿಹೋಗುತ್ತೆ" ಎಂದು ಒಳಗೋಡಿದಳು.

ನನಗೆ ಏನೋ ಕಳವಳ. ನಮ್ಮ ಯೋಜನೆ ಸಫಲವಾಗುವುದೇ? ಮಾರ್ಕೊನಿಗೆ ರೋಜಿಯ ನಾಟ್ಯದ ವಿಷಯ ತಿಳಿದರೆ ಏನು ಪರಿಣಾಮ-ವಾಗಬಹುದು? ಅವಳ ನಾಟ್ಯಾಭ್ಯಾಸಕ್ಕೆ ಅವನ ಒಪ್ಪಿಗೆ ದೊರೆಯುವುದೇ? ಅವಳ ಮನ ನೋಯಿಸುವಂತಹ ಮಾತಾಡಿದರೇ? ಅಥವಾ ಒಪ್ಪಿಕೊಂಡು-ಬಿಟ್ಟರೆ ರೋಜಿ ಅವನ ಮೇಲಿನ ಮೋಹದಿಂದ ನನ್ನನ್ನು ದೂರಮಾಡದೆ ಇರುವಳೇ? ಅವನು ಅವಳ ಮನಸ್ಸನ್ನು ನೋಯಿಸಬಾರದು. ಅವಳ ಯೋಜನೆಗೆ ಅಡ್ಡಬರಬಾರದು. ಆದರೆ ಮಾತ್ರ ಅವಳು ನನ್ನ ಬಾಹು-ಬಂಧನದಲ್ಲಿರಬೇಕು! ಇದು ಸಾಧ್ಯವೆ? ಎಂತಹ ಹುಚ್ಚು ಕಲ್ಪನೆ!

ರೋಜಿ ಒಳಗೆ ಬಂದು ಕಾಫಿ ಮಾಡುತ್ತಿದ್ದಾಗ ಮಾರ್ಕೊ ಒಳಗಡೆ ಯಿಂದ ನನಗಾಗಿ ಒಂದು ಕುರ್ಚಿಯನ್ನು ತಂದನು.

"ಈ ವರಾಂಡದಲ್ಲಿ ಕುಳಿತು ಕೆಲಸ ಆರಂಭಿಸಿದರೆ ಏಳೋದಕ್ಕೇ ಮನಸ್ಸು ಬರೋದಿಲ್ಲಾ" ಎಂದು ಅವನು ಕಾಗದಗಳನ್ನೂ ಹಲವು ಛಾಯಾ-ಚಿತ್ರಗಳನ್ನೂ ಹೊರತೆಗೆದನು. ಗುಹಾಂತರ ದೇವಾಲಯದ ಚಿತ್ರಕಲೆಯ ಮೇಲೆ ಪುಟಗಟ್ಟಲೆ ವಿವರಗಳನ್ನು ಬರೆದಿದ್ದನು. ಅವುಗಳಲ್ಲಿ ನನಗೆ ಸ್ವಲ್ಪವೂ ಆಸಕ್ತಿಯಿರಲಿಲ್ಲವಾದರೂ ಬಹಳ ಆಸಕ್ತಿಯಿದ್ದವನ ಹಾಗೆ ಅವನ್ನು ತಿರುವಿ ಹಾಕಿದೆ. ಅವುಗಳಿಂದ ಏನು ಪ್ರಯೋಜನ ಎಂದು ಕೇಳಬೇಕೆನಿಸಿತು. ಆದರೆ ಅದನ್ನು ಸರಿಯಾಗಿ ಕೇಳುವ ರೀತಿ ತಿಳಿದಿರಲಿಲ್ಲ. ಯಾರ ಯಾರ ಹತ್ತಿರ ಹೇಗೆ ಹೇಗೆ ಮಾತಾಡಬೇಕು ಎನ್ನುವುದನ್ನು ಶಾಲೆಗಳಲ್ಲಿ ಕಲಿಸಿಕೊಡ-ಬಾರದೇ? ಹಾಗಾದರೆ ಮಾತ್ರ ಅವರಿಗೆ ಸರಿಯಾಗಿ ನಾವೂ ಮಾತಾಡ-ಬಹುದು. ರೋಜಿಯ ಹಾಗೆ ಯಾರು ತಾನೇ ನನಗೆ ಪಾಠ ಹೇಳಿಕೊಡು-ವರು? ಅವನೇನು ನೂರಾರು ಅಂಕಿ-ಅಂಶಗಳನ್ನು ನನ್ನ ತಲೆಗೆ ತುಂಬು-ತ್ತಿದ್ದನು. ಆದರೆ ನನಗೆ ಮಾತ್ರ ಅದರಿಂದ ಯಾವ ದೇವರಿಗೆ ಪ್ರೀತಿಯೋ ತಿಳಿಯಲಾಗಲಿಲ್ಲ. ತಿಳಿದುಕೊಳ್ಳುವ ಧೈರ್ಯವೂ ಇರಲಿಲ್ಲ. ರೋಜಿ ಜೋಸೆಫ್‌ನನ್ನು ಮೀರಿಸಬೇಕೆಂತಲೇನೋ ಸದ್ದಾಗದೆ ವರಾಂಡದೊಳಗೆ ನುಸುಳಿ ಬಂದಿದ್ದಳು.

ಕಾಫಿಯ ಬಟ್ಟಲು ನನ್ನ ಕೈಗೆ ಬಂದಾಗ ನನಗೆ ಆಶ್ಚರ್ಯವಾಯಿತು. ಆದರೆ ಮಾರ್ಕೊ, " ಈ ಪುಸ್ತಕ ಪ್ರಕಟವಾದರೆ ಮಾನವ ಜನಾಂಗದ ಇತಿ-ಹಾಸದ ಬಗ್ಗೆ ಈಗಿರೋ ಭಾವನೆಗಳೆಲ್ಲ ತಲೆ ಕೆಳಕಾಗಬೇಕಾದ್ದೆ. ಈ ಸ್ಥಳ ತೋರಿಸಿಕೊಟ್ಟಿದ್ದಕ್ಕಾಗಿ ನಾನು ನಿನಗೆ ಎಷ್ಟು ಕೃತಜ್ಞನಾಗಿದ್ದೇನೆ ಅಂತ ಪುಸ್ತಕದಲ್ಲಿ ಬರೆಯೋದನ್ನು ಮರೆಯೋಲ್ಲ " ಎಂದನು.

ಎರಡು ದಿನ ಬಿಟ್ಟು ನಾನು ಬೆಟ್ಟದ ಬಂಗಲೆಗೆ ಹೋದೆ. ಹೋದಾಗ ಮಧ್ಯಾಹ್ನ. ಅಷ್ಟು ಹೊತ್ತಿನಲ್ಲಿ ಮಾರ್ಕೊ ಸಾಮಾನ್ಯವಾಗಿ ಗುಹೆಗೆ ಹೋಗುತ್ತಿದ್ದ. ಸರಿ, ರೋಜಿಯೊಬ್ಬಳೆ ಇರುತ್ತಾಳೆಂದುಕೊಂಡು ಹೋದೆ. ಆದರೆ ಅವರಿಬ್ಬರೂ ಇರಲಿಲ್ಲ. ಜೋಸೆಫ್ ಮಾತ್ರ ಮಧ್ಯಾಹ್ನದ ಊಟ-ವನ್ನು ತಯಾರುಮಾಡುತ್ತಿದ್ದ.

" ಕೆಳಗೆ ಹೋಗಿದ್ದಾರೆ, ಇನ್ನೂ ಬಂದಿಲ್ಲ."

ಅಲ್ಲಿನ ಸ್ಥಿತಿ-ಗತಿಗಳೇನಾದರೂ ತಿಳಿಯಲೆಂತೇನೋ ಎಂದು ನಾನು ಅವನ ಮುಖವನ್ನು ನೋಡಿ ವಿಶ್ವಾಸದ ನಗೆ ನಕ್ಕು ಕೇಳಿದೆ:

" ಎಲ್ಲಾ ಹ್ಯಾಗಿದೆ ಜೋಸೆಫ್ ? "

" ಎಲ್ಲಾ ಸರಿಯಾಗಿದೆ ಸಾರ್. "

" ಆ ಮನುಷ್ಯ ಅವತ್ತು ನಿನ್ನ ಬಹಳ ಮೆಚ್ಚಿಕೊಂಡನಯ್ಯ. "

" ಹೊಗಳಿದರೇನು, ಬಿಟ್ಟರೇನು ಸಾರ್. ನನ್ನ ಕರ್ತವ್ಯ ನಾನು ಮಾಡುತೀನಿ. ಕೆಲವರು ಹೊಗಳುತ್ತಾರೆ. ಕೆಲವರು ತೆಗಳುತ್ತಾರೆ. ಹೋದ-ಸಲ ನೋಡಿದರೋ ಇಲ್ಲವೋ, ಹುಡುಗೀರನ್ನ ಕರೆದುಕೊಂಡು ಬರಲಿಲ್ಲ ಅಂತ ಆ ಒಂದು ಗುಂಪು ನನ್ನ ಹೊಡೆಯೋಕೆ ಬಂದಿದ್ದರು ಆದರೆ ನಾನು ಜಗ್ಗಿದೆನೇ ? ಅವರೇ ಮಾರನೇ ದಿನ ಕಾಲಿಗೆ ಬುದ್ಧಿ ಹೇಳಿದರು. ಈ ಬಂಗಲೆ ಇರೋದು ವಾಸಮಾಡೋದಕ್ಕೆ. ಇಲ್ಲಿಗೆ ಬಂದವರಿಗೆ ಏನು ಸೌಕರ್ಯ ಬೇಕೋ ಅದನ್ನು ಮಾಡಿಕೊಡೋದು ನನ್ನ ಕರ್ತವ್ಯ. ಒಂದೊಂದು ಸಲ ಒಂದು ಬಕೀಟು ನೀರಿಗೆ ಎಂಟಾಣೆ ಕೊಡಬೇಕಾಗುವದಂತೆ. ಯಾವ ಬಸ್ಸು ಇರಲಿ, ಯಾವ ಲಾರಿ ಇರಲಿ, ಏನು ಪಾತ್ರೆ ಸಿಕ್ಕರೆ ಅದನ್ನು ಊರೊಳಕ್ಕೆ ಕಳಿಸಿ ವಾಪಸು ಬರೋದನ್ನ ಕಾಯಬೇಕು. ಆದರೆ ಬಂದವರಿಗೆ ಮಾತ್ರ. ಇದರ ಕಷ್ಟ ಗೊತ್ತಾಗೋದಿಲ್ಲ, ಗೊತ್ತಾಗಲೂಬಾರದು. ಕೇಳಿದ್ದನ್ನ ತಂದು

ಕೊಡೋದು ನನ್ನ ಕೆಲಸ. ಆದರೆ ನಾನು ಹುಡುಗೀರನ್ನ ಹುಡುಕಿಕೊಂಡು ಬರೋ ದಳ್ಳಾಳ ಎಂದು ತಿಳಕೊಂಡರೆ ಮಾತ್ರ ನನಗೆ ಸಹಿಸೋದಕ್ಕೆ ಆಗೋದಿಲ್ಲ."

"ಅಷ್ಟಲ್ಲದೆ ಮತ್ತೆ ?" ಎಂದು ನಾನು ಅವನ ಮಾತನ್ನು ಅಲ್ಲೆ ಮೊಟಕುಗೊಳಿಸಲು ನೀಡಿದೆ. ಆದರೆ ಒಂದು ಪ್ರಶ್ನೆಯನ್ನು ಕೇಳಬೇಕೆನಿಸಿತು.

"ಈ ಮನುಷ್ಯ ನಿನಗೆ ಯಾವ ತೊಂದರೆಯೂ ಕೋಡೋದಿಲ್ಲ ತಾನೆ ? "

"ಛೆ, ಛೆ ಇಲ್ಲವೇ ಇಲ್ಲ. ಅಪರಂಜಿಯಂತಹ ಮನುಷ್ಯ. ಆದರೆ ಅವಳಿದ್ದಾಳಲ್ಲ, ಅವನ ಹೆಂಡತಿ ಒಳ್ಳೆ ರಾಕ್ಷಸಿ. ಅವಳಿಲ್ಲದೆ ಹೋದರೆ ಪಾಪ ಎಷ್ಟೋ ನೆಮ್ಮದಿಯಿಂದ ಇರುತ್ತಾನೆ. ಅವಳನ್ನು ಯಾಕೆ ಕರಕೊಂಡು ಬಂದೆ? ಊರೊಳಗೇ ಇರಬಾರದಾಗಿತ್ತೆ ?"

"ಸರಿ, ಹಾಗಾದರೆ ಮತ್ತೆ ಕರಕೊಂಡು ಹೊರಟುಹೋಗುತ್ತೇನೆ" ಎಂದು ಗುಹೆಗಳ ಕಡೆ ಹೆಜ್ಜೆ ಹಾಕಿದೆ. ಮಾರ್ಕೊ ನಡೆದು-ನಡೆದು ಗುಹೆಗೆ ಹೋಗುವ ಹುಲ್ಲುದಾರಿ ಕಾಲುದಾರಿಯಾಗಿತ್ತು. ಅರ್ಧ ದೂರ ಹೋಗುವಷ್ಟರಲ್ಲಿ ಎದುರುಗಡೆ ಮಾರ್ಕೊ ಬರುತ್ತಾ ಇರುವುದು ಕಾಣಿಸಿತು. ಕೈಯಲ್ಲಿ ಕಾಗದಗಳ ಕಂತೆ, ಹೆಗಲಿನಲ್ಲಿ ಕ್ಯಾಮರಾ. ಅವನ ಹಿಂದೆ ಸ್ವಲ್ಪ ದೂರದಲ್ಲಿ ರೋಜಿ. ಅವರ ಮುಖದಲ್ಲಿ ಏನೂ ತಿಳಿಯುತ್ತಿರಲಿಲ್ಲ.

"ಹಲೋ" ಎಂದು ಅವನನ್ನು ಸ್ವಾಗತಿಸಲು ಹೋದೆ. ಅವನು ತಲೆ ಎತ್ತಿ ನನ್ನನ್ನು ನೋಡಿ ಏನೋ ಹೇಳಬೇಕೆಂದುಕೊಂಡವನು ಹೇಳದೆ ಒಂದು ಪಕ್ಕಕ್ಕೆ ತಿರುಗಿ ಮುಂದೆ ಹೆಜ್ಜೆ ಹಾಕಿದ. ರೋಜಿ ನನ್ನ ಕಡೆ ತಿರುಗಿಯೂ ನೋಡದೆ ನಿದ್ರೆಯಲ್ಲಿ ನಡೆಯುವವಳ ಹಾಗೆ ಮುಂದೆ ನಡೆದುಹೋದಳು. ನಾನು ಸ್ವಲ್ಪ ಹಿಂದೆ ಅವರನ್ನು ಹಿಂಬಾಲಿಸಿದೆ. ಒಬ್ಬರ ಹಿಂದೆ ಒಬ್ಬರು ಮೆರವಣಿಗೆಯಲ್ಲಿನ ಹಾಗೆ ಬಂಗಲೆಯನ್ನು ಸೇರಿದೆವು. ಮಾತಿಲ್ಲ, ಕತೆಯಿಲ್ಲ.

ವರಾಂಡವನ್ನು ಮೊದಲು ಸೇರಿದ ಮಾರ್ಕೊ ನಮ್ಮ ಕಡೆ ತಿರುಗಿ—

"ನೀನಾಗಲೀ, ಅವಳಾಗಲೀ ಒಳಗೆ ಬರಬೇಕಾದ ಆವಶ್ಯಕವಿಲ್ಲ" ಎಂದುಬಿಟ್ಟು ಅವನ ರೂಮಿನೊಳಗೆ ಹೋಗಿ ಬಾಗಿಲು ಹಾಕಿಕೊಂಡನು.

ಜೋಸೆಫ್ ಅಡಿಗೆಮನೆಯಿಂದ ಹೊರಬಂದು, " ತಟ್ಟೆ ಹಾಕಲೇ ? " ಎಂದನು.

ರೋಜಿ ಯಾವ ಮಾತೂ ಆಡದೆ ವರಾಂಡವನ್ನು ದಾಟಿ ಅವನ ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡಳು. ನನಗೆ ಏನು ಮಾಡಬೇಕೋ ತಿಳಿಯಲಿಲ್ಲ. ಇದಂತೂ ತೀರ ಅನಿರೀಕ್ಷಿತ. ಜಗಳವಾಡಬಹುದಾಗಿತ್ತು. ಆದರೆ ಇದೆಂತಹ ವರ್ತನೆ ? ಗಫೂರ್ ಬಾಯಲ್ಲೊಂದು ಹುಲ್ಲುಕಡ್ಡಿಯನ್ನು ಕಚ್ಚಿಕೊಂಡು ಬಂದ.

" ಏನು ರಾಜು ? ಎಷ್ಟು ಹೊತ್ತಿಗೆ ಹೊರಡೋದು ? "

ಅವನು ಇದನ್ನು ಕೇಳುವುದಕ್ಕಾಗಿ ಬಂದಿದ್ದಾನೆಂದು ನಾನು ನಂಬಲು ಸಿದ್ಧನಾಗಿರಲಿಲ್ಲ. ಇಲ್ಲಿ ನಡೆಯೋ ನಾಟಕ ನೋಡಲು ಬಂದಿದ್ದಾನೆ. ಇವನೂ ಜೋಸೆಫ್ ಇಬ್ಬರೂ ಸೇರಿ ಇರೋದು, ಇಲ್ಲದ್ದು ಎಲ್ಲಾ ಕತೆ ಕಟ್ಟಿರಬೇಕು. ನಾನು ಸ್ವಲ್ಪ ಕಹಿಯಾಗಿಯೇ ಕೇಳಿದೆ :

" ಏನವಸರ ಗಫೂರ್, ಚೆನ್ನಾಗಿ ನಡೆಯುತ್ತೆ ನಾಟಕ, ನೋಡಿ-ಕೊಂಡೇ ಹೋಗುವಿಯಂತೆ. "

ಗಫೂರ್ ನನ್ನ ಹತ್ತಿರ ಬಂದು ಕಿವಿಯಲ್ಲಿ ಉಸುರಿದ, " ರಾಜು, ನೀನು ಮಾಡುತ್ತ ಇರೋದು ಸರ್ವಥಾ ಸರಿಯಲ್ಲ. ನಾವು ಹೊರಟು-ಹೋಗೋಣ ಬಾ. ಅವರ ಪಾಡು ಅವರಿಗೆ. ಎಷ್ಟಾದರೂ ಅವನು ಗಂಡ, ಅವಳು ಹೆಂಡತಿ. ಅವರ ಮಧ್ಯೆ ನೀನು ತಲೆ ಹಾಕಬಾರದು. ನಿನ್ನ ಕೆಲಸಕ್ಕೆ ನೀನು ಹೋಗು. ಇಲ್ಲಿಗೆ ಬರೋವರೆಗೂ ನಿನಗೆ ಯಾವ ಯೋಚನೆಯೂ ಇರಲಿಲ್ಲ. ಸುಖವಾಗಿದ್ದೆ. "

ಗಫೂರ್ ಹೇಳುತ್ತಿದ್ದುದು ನಿಜ. ಹಿತೈಷಿಯಂತೆ ಬುದ್ಧಿವಾದ ಹೇಳಿದ. ಆಗಲಾದರೂ ಅವನ ಮಾತು ಕೇಳಿ ಹಿಂದಕ್ಕೆ ಹೋಗಿದ್ದರೆ ನನ್ನ ಕತೆ ಬೇರೆಯಾಗುತ್ತಿತ್ತು. ಹಾಗೆ ಮಾಡಿದ್ದರೆ ಎಷ್ಟೋ ಕೆಲಸಗಳಿಗೆ, ಕಷ್ಟಕ್ಕೆ ನಾನು ಸಿಗುತ್ತಲೇ ಇರಲಿಲ್ಲ. ಆದರೆ ಹಾಗೆ ಮಾಡದೆ ಗಫೂರನಿಗೆ ಮೃದು-ವಾಗಿಯೇ ಹೇಳಿದೆ :

" ಕಾರಿನ ಹತ್ತಿರ ಇರು, ಬರುತ್ತೇನೆ. "

ಗಫೂರ್ ಗೊಣಗುತ್ತ ಹೊರಟುಹೋದ. ಆದರೆ ಸ್ವಲ್ಪಹೊತ್ತಿನಲ್ಲೇ

ಗಫೂರ್ ಹಾರನ್ ಮಾಡುವ ಸದ್ದು ಕೇಳಿಸಿತು. ಆದರೆ ನಾನು ಲಕ್ಷಿಸಲೇ ಇಲ್ಲ. ಅಷ್ಟರಲ್ಲೇ ಮಾರ್ಕೊ ಹೊರಗಡೆ ವರಾಂಡದಲ್ಲಿ ಕಾಣಿಸಿಕೊಂಡನು.

"ಡ್ರೈವ್ಹರ್, ಹೊರಡೋಣವೇ?"

"ಆಗಲಿ, ಸಾರ್."

ಮಾರ್ಕೊ ತನ್ನ ಕೈಚೀಲವನ್ನು ತೆಗೆದುಕೊಂಡು ಕಾರಿಗೆ ಹೋಗುವುದನ್ನು ನಾನು ಹಾಲಿನ ಕಿಟಕಿಯಿಂದ ನೋಡಿದೆ. ಮೆಟ್ಟಿಲಿಳಿದು ಧಡಧಡ ಕಾರಿಗೋಡಿದೆ. ಮಾರ್ಕೊ ಆಗಲೇ ಒಳಗೆ ಕುಳಿತಿದ್ದ. ಗಫೂರ್ ಕಾರನ್ನು ಇನ್ನೂ ಸ್ಟಾರ್ಟ್ ಮಾಡಿರಲಿಲ್ಲ. ಬೇರೆ ಯಾರಾದರೂ ಬರುತ್ತಾರೋ ಇಲ್ಲವೋ ಹೇಗೆ ಕೇಳುವುದೆಂದು ಅವನಿಗೆ ತಿಳಿದಿರಲಿಲ್ಲ. ಹಾರನ್ ಯಾಕಾದರೂ ಮಾಡಿದನೋ ಎನ್ನಿಸಿರಬೇಕು. ಬೇಕೆಂದು ಮಾಡಿರಲಾರ. ಸರಿಯಾಗಿದೆಯೋ ಇಲ್ಲವೋ ನೋಡಲು ಮಾಡಿರಬೇಕು.

ನಾನು ಧೈರ್ಯ ತಂದುಕೊಂಡು ಕಾರಿನ ಕಿಟಕಿಯಲ್ಲಿ ತಲೆ ಹಾಕಿ—

"ಎಲ್ಲಿಗೆ ಹೋಗುತ್ತಿದ್ದೀರಿ?" ಎಂದೆ.

"ಊರೊಳಗೆ ಹೋಗಿ ಹೋಟೆಲಿನ ರೂಮು ಖಾಲಿಮಾಡಿ ಲೆಕ್ಕ ಕೊಟ್ಟು ಬರುತ್ತೇನೆ."

"ನೀವು ಮಾಡೋದು ಅರ್ಥವಾಗಲಿಲ್ಲ."

"ಅರ್ಥವಾಗಬೇಕಾದ್ದೇನೂ ಇಲ್ಲ. ರೂಮು ಬಾಡಿಗೆಗೆ ತೆಗೆದುಕೊಂಡಿದ್ದೆ. ಈಗ ಬಾಡಿಗೆ ಕೊಟ್ಟು ರೂಮು ಖಾಲಿಮಾಡಿ ಬರುತ್ತೇನೆ. ಡ್ರೈವ್ಹರ್, ನಿನ್ನ ಬಿಲ್ಲು ಏನಾಗಿದೆಯೋ ನನಗೆ ಹೇಳು. ದುಡ್ಡು ಕೊಟ್ಟದ್ದಕ್ಕೆ ರಸೀತಿ ಸಿದ್ಧಮಾಡಿಕೋ."

ಬಂಗಲೆಯ ಕಡೆ ನೋಡುತ್ತ ಗಫೂರ್—

"ಇನ್ನು ಯಾರೂ ಬರೋದಿಲ್ಲವೇ?" ಎಂದ.

"ಇಲ್ಲ, ಇನ್ನು ಯಾರಾದರೂ ಬಂದರೆ ನಾನು ಇಳಿದುಹೋಗುತ್ತೇನೆ ಅಷ್ಟೆ."

"ಡ್ರೈವ್ಹರ್.........." ನಾನು ಗಫೂರನನ್ನು ಡ್ರೈವ್ಹರ್ ಎಂದು ಕೂಗಿದ್ದು ಕೇಳಿ ಅವನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. "ಆ ಮನುಷ್ಯನಿಗೆ ಎಲ್ಲಿಗೆ ಬೇಕೋ ಅಲ್ಲಿಗೆ ಕರೆದುಕೊಂಡು ಹೋಗಿ ನಾಳೆ ಬೆಳಗ್ಗೆ ಕಾರು

ತೆಗೆದುಕೊಂಡು ಬಾ. ಅವರು ಹೋಗಿದಕ್ಕೆಲ್ಲಾ ಅವರ ಹತ್ತಿರ ಬಿಲ್ ಕೊಡು."

ಇನ್ನೂ ಏನೋ ಹೇಳಬೇಕೆಂದಿದ್ದೆ, ಆದರೆ ನನಗೆ ಅಷ್ಟರಲ್ಲಿ ಏನೆನಿಸಿತೋ ಈಗ ಹೇಳಲಾರೆ. ಅಂತೂ ಮಾತಾಡದೆ ಸುಮ್ಮನೆ ಕಾರಿನ ಬಾಗಿಲು ತೆರೆದು ಅವನನ್ನು ಹೊರಗೆಳೆದೆ.

"ಏ! ಏನು ಹೊಡೆದುಹಾಕಿಬಿಡುತ್ತೀಯೇನು?" ಎಂದು ಕೂಗಿದ ಮಾರ್ಕೊ. ತಲೆಯ ಮೇಲೆ ಭಾರವಾದ ಉಕ್ಕಿನ ಟೋಪಿ ಕಣ್ಣಿಗೆ ನೋಡುವುದಕ್ಕೆ ಭಯಂಕರವಾದ ಕಪ್ಪು ಕನ್ನಡಕವಿದ್ದರೂ ಮಾರ್ಕೊ ಗಟ್ಟಿಮುಟ್ಟಾಗಿರಲಿಲ್ಲ.

"ನನಗೆ ನಿಮ್ಮ ಹತ್ತಿರ ಮಾತಾಡಬೇಕಾಗಿದೆ. ಹೀಗೆ ಇದ್ದದ್ದನ್ನು ಇದ್ದಲ್ಲೇ ಬಿಟ್ಟು ಹೊರಟುಹೋಗೋ ಹಾಗಿಲ್ಲ." ಮಾರ್ಕೊ ಮೇಲುಸಿರುಬಿಡುತ್ತಿದ್ದ. ನಾನು ನನ್ನ ಗಡಸಿನ ಧ್ವನಿಯನ್ನು ಬದಲಾಯಿಸಿ, "ಮೊದಲು ಒಳಗೆ ಬಂದು ಊಟಮಾಡಿ, ಆಮೇಲೆ ನಿಧಾನವಾಗಿ ಮಾತಾಡೋಣ" ಎಂದೆ.

ಗಫೂರನ ಕಡೆ ತಿರುಗಿ :

"ಈಗಲೇ ಹೋಗಬೇಕೇನು?" ಎಂದೆ.

"ಇಲ್ಲ, ಇಲ್ಲ ನೀವು ನಿಧಾನವಾಗಿ ಊಟಮಾಡಿ ಬನ್ನಿ. ಬೇಕಾದಷ್ಟು ಹೊತ್ತಿದೆ" ಎಂದ.

"ಜೋಸೆಫ್‌ನಿಗೆ ಊಟಮಾಡಿ, ಬಡಿಸಲು ಹೇಳುತ್ತೇನೆ."

"ಅದನ್ನೆಲ್ಲಾ ಹೇಳೋಕೆ ನೀನು ಯಾರು? ನನಗೂ ನಿನಗೂ ಏನು ಸಂಬಂಧ?"

"ಸಂಬಂಧ ಇಲ್ಲ ಎಂದರೆ ಹ್ಯಾಗೆ? ನಿಮಗೆ ಇರೋಕೆ ಒಳ್ಳೇ ಸ್ಥಳ ನೋಡಿಕೊಟ್ಟೆ. ನೋಡಿಕೊಳ್ಳೋಕೆ ಒಳ್ಳೇ ಅಡುಗೆಯವನನ್ನು ಕೊಟ್ಟೆ. ನನ್ನ ಕಾಲವನ್ನೆಲ್ಲ ನಿಮ್ಮ ಹತ್ತಿರ ಕಳೆದೆ. ಇಷ್ಟು ದಿನ ಬೇಕಾದಷ್ಟು ಜವಾಬ್ದಾರಿ ಹೊತ್ತೆ."

"ಸರಿ, ಇನತ್ತಿನಿಂದ ನಿನ್ನ ಜವಾಬ್ದಾರಿ ನನಗೆ ಬೇಕಾಗಿಲ್ಲ. ನಿನ್ನ ಬಿಲ್ ಏನಿದೆಯೋ ತೆಗೆದುಕೊಂಡು ರಸೀತಿ ಕೊಟ್ಟು ಹೋಗು."

ಇಂತಹ ವಿಷನಿಮಿಷದಲ್ಲಿ ಅವನು ಮಾತ್ರ ತನ್ನ ರಸೀತಿಯನ್ನು ಮರೆತಹಾಗಿರಲಿಲ್ಲ.

"ಒಳಗೆ ಹೋಗಿ ನಿಧಾನವಾಗಿ ಕೂತು ಲೆಕ್ಕಾಚಾರ ಹಾಕಿದರೆ ಆಗೋದಿಲ್ಲವೆ? ಹಿಂದೆ ನೀವು ಕೊಟ್ಟಿದ್ದ ಒಂದಿಷ್ಟು ದುಡ್ಡು ನನ್ನ ಹತ್ತಿ-ರಾನೇ ಇದೆ."

"ಸರಿ, ಏನು ಲೆಕ್ಕಾಚಾರವೋ ಅದನ್ನು ಮುಗಿಸಿಬಿಟ್ಟು ನನ್ನ ಕಣ್ಣ ಮುಂದೆ ನಿಲ್ಲದೆ ತೊಲಗಿ ಹೋಗು."

"ಆಗಬಹುದು ರಾಯರೆ, ಆದರೆ ಈ ಬಂಗಲೇಲಿ ಎರಡು ಸೆಟ್ ರೂಮುಗಳಿವೆ. ಒಂದನ್ನು ನಾನು ತೆಗೆದುಕೊಂಡು ಇಲ್ಲೇ ಇರಬಹುದು."

ಬಾಗಿಲಿನಲ್ಲಿ ಜೋಸೆಫ್ ಕಾಣಿಸಿಕೊಂಡ. "ಇವತ್ತು ರಾತ್ರಿಗೆ ಊಟ ಬೇಕೇ ಸಾರ್?"

"ನನಗೆ ಬೇಡ" ಎಂದ ಮಾರ್ಕೊ.

"ನನಗೆ ಬೇಕಾಗಬಹುದು. ಆ ಇನ್ನೊಂದು ಕಡೆ ರೂಮಿನ ಬಾಗಿಲು ತೆರೆದು ಅದನ್ನು ಲೆಕ್ಕದಲ್ಲಿ ಬರೆದುಕೊ. ನೀನು ಬೇಕಾದರೆ ಹೋಗು ಜೋಸೆಫ್. ರಾತ್ರಿಗೆ ನಾನಿಲ್ಲೇ ಇರೋಹಾಗಿದ್ದರೆ ಹೇಳಿಕಳುಹಿಸುತ್ತೇವೆ" ಎಂದೆ ನಾನು.

ಜೋಸೆಫ್ ಹಾಗೇ ಆಗಲೆಂದು ತಲೆಯಾಡಿಸಿ ನನ್ನ ರೂಮಿನ ಬಾಗಿಲು ತೆಗೆಯಲು ಹೋದ. ನಾನು ಒಳಗೆ ಹೋದೆ. ಆದರೆ ಬಾಗಿಲು ಮುಚ್ಚಲಿಲ್ಲ. ಸೂರ್ಯನಾಗಲೇ ಪಶ್ಚಿಮಕ್ಕೆ ಹೊರಟಿದ್ದ. ಮರ–ಬಳ್ಳಿಗಳೆಲ್ಲ ಹೊಂಬಣ್ಣಕ್ಕೆ ತಿರುಗಿದ್ದವು. ರೋಜಿ ಈಗ ಹೊರಗೆ ನೋಡಬಾರದೆ ಎನಿಸಿತು. ಆದರೆ ರೋಜಿ ಒಳಗಿದ್ದಳು. ಅವರ ರೂಮಿನೊಳಗೆ ಹೋಗುವ ಅವಕಾಶವನ್ನು ಕಳೆದುಕೊಂಡಿದ್ದೆ. ಮರದ ಕುರ್ಚಿಯಲ್ಲಿ ಕುಳಿತು ಛಾವಣಿಯನ್ನು ನೋಡ-ತೊಡಗಿದೆ. ಈಗ ನಾನು ಸಾಧಿಸಿದ್ದಾದರೂ ಏನು? ಮುಂದಕ್ಕೆ ಏನು ಮಾಡುವುದು? ಆದರೆ ಈಗ? ಅವನು ಹೋಗಿ ತನ್ನ ರೂಮಿನೊಳಗೆ ಅಗಳಿ ಹಾಕಿಕೊಂಡಿದ್ದ. ನಾನು ನನ್ನ ರೂಮಿನಲ್ಲಿದ್ದೆ. ಅವನನ್ನು ಹೋಗಲು ಬಿಟ್ಟಿದ್ದರೆ ರೋಜಿಯನ್ನಾದರೂ ಮಾತಾಡಿಸಬಹುದಾಗಿತ್ತು. ಈಗ ಶುದ್ಧ ಮೂರ್ಖತನದ ಕೆಲಸವಾಗಿತ್ತು. ಹೊರಗೆ ಹೋಗಿ ಗಫೂರನಿಗೆ ಕಾರಿನ

ಹಾರನ್ ಸದ್ದುಮಾಡೆಂದು ಹೇಳಬಹುದೇ? ಹಾಗೆ ಮಾಡಿದರೆ ಅವನು ಹೊರಗೆ ಬಂದಾದರೂ ಬರಬಹುದು.

ಸುಮಾರು ಅರ್ಧ ಘಂಟೆ ಕಳೆದಿರಬಹುದು. ಅವರಲ್ಲಿ ಒಬ್ಬರಾದರೂ ಹೊರಗೆ ಬರುವ ಚಿಹ್ನೆಯೇ ಕಾಣಲಿಲ್ಲ ನಾನು ಮೆಲ್ಲನೆ ರೂಮಿನಿಂದ ಎದ್ದು ಹೊರಗೆ ಹೋದೆ. ಅಡುಗೆ ಮನೆಯಲ್ಲಿ ಮಾಡಿದ ಅಡುಗೆಯೆಲ್ಲ ಹಾಗೇ ಇತ್ತು. ಯಾರೊಬ್ಬರೂ ಮುಟ್ಟಿರಲಿಲ್ಲ. ಊಟಮಾಡದೆ ಯಾಕೆ ಉಪವಾಸ ಸಾಯುತ್ತಿದ್ದಾರೆ? ಪಾಪ ಎನಿಸಿತು. ರೋಜಿ ಇಷ್ಟುಹೊತ್ತಿಗೆ ಬಾಡಿ ಬತ್ತಿ-ಹೋಗಿರಬೇಕು. ಸುಮಾರು ಎರಡು ಘಂಟೆಗೊಂದು ಸಲ ಏನಾದರೂ ತಿನ್ನುವುದು ಅವಳ ಪದ್ಧತಿ. ಹೋಟೆಲಿನಲ್ಲಿದ್ದರೆ ಏನಾದರೂ ತರಿಸುತ್ತಲೇ ಇದ್ದೆ. ಹೊರಗೆ ಹೋದರೆ ದಾರಿಯಲ್ಲಿ ಎಲ್ಲಾದರೂ ಕಾರು ನಿಲ್ಲಿಸಿ ಏನಾ-ದರೂ ತಿನ್ನಲು ಕೊಂಡುಕೊಳ್ಳುತ್ತಿದ್ದೆ. ಆದರೆ ಈಗ? ಎಷ್ಟು ಹಸಿವಾಗಿ-ದೆಯೋ ಅವಳಿಗೆ? ಏನಾಗಿದೆ ಅಂತ ಬಾಯಿಬಿಟ್ಟು ಹೇಳಿದರೆ ಏನು ಮುಳುಗಿ ಹೋಗುತ್ತೆ? ಮಾತು ಬರದ ಮೂಕಿಯ ಹಾಗೆ ಆಡುತ್ತಿದ್ದಾಳಲ್ಲ! ಆ ರಾಕ್ಷಸನೇನಾದರೂ ಅವಳ ನಾಲಿಗೆ ಕತ್ತರಿಸಿ ಹಾಕಿಬಿಟ್ಟಾನೇನೋ ! ಊಟ-ವನ್ನು ತಟ್ಟೆಗಳಲ್ಲಿ ಹಾಕಿ ಸಿದ್ಧಪಡಿಸಿ ಅದನ್ನು ತೆಗೆದುಕೊಂಡು ಅವರ ರೂಮಿನ ಹತ್ತಿರ ಹೋದೆ. ಒಳಗೆ ಹೋಗಲೋ ಬೇಡವೋ ಎಂದು ಮನಸ್ಸು. ಒಂದು ನಿಮಿಷ ಕಾಲಿನಿಂದ ಬಾಗಿಲನ್ನು ತಳ್ಳಿ ಒಳಗೆ ಹೋದೆ. ರೋಜಿ ಹಾಸಿಗೆಯಲ್ಲಿ ಕಣ್ಣು ಮುಚ್ಚಿಕೊಂಡು ಬಂದು ಬಿದ್ದುಕೊಂಡಿದ್ದಳು. ಅವನು ಕುರ್ಚಿಯಲ್ಲಿ ಗಲ್ಲಕ್ಕೆ ಕೈಯೂರಿ ಕುಳಿತಿದ್ದ. ಅವರನ್ನು ಅಂತಹ ಸ್ಥಿತಿಯಲ್ಲಿ ನಾನೆಂದೂ ನೋಡಿರಲಿಲ್ಲ. ಇದಕ್ಕೆಲ್ಲ ಕಾರಣ ನಾನು. ನನ್ನ ಪಾಡಿಗೆ ನಾನಿರದೆ ಅವರನ್ನು ಈ ಸ್ಥಿತಿಗೆ ತಂದು ನನ್ನನ್ನು ಇಂತಹ ಇಕ್ಕಟ್ಟಿಗೆ ಸಿಕ್ಕಿಸಿಕೊಂಡಿದ್ದೆ. ಊಟದ ತಟ್ಟೆಗಳನ್ನು ಅವರ ಮುಂದಿಟ್ಟೆ.

"ಇವತ್ತು ಅಡುಗೆ ಮಾಡಿದೆ ಅನ್ನೋದೇ ಮರೆತುಹೋಗಿರೋ ಹಾಗಿದೆ. ಮನಸ್ಸಿಗೆ ಚಿಂತೆಯಾದರೆ ಹೊಟ್ಟೆಯೇನು ಪಾಪ ಮಾಡಿತು. ಊಟ ಮಾಡಬಾರದೆ?"

ರೋಜಿ ಕಣ್ಣು ತೆರೆದಳು. ಅತ್ತು-ಅತ್ತು ಅವು ಊದಿದ್ದವು. ಹಾಸಿಗೆ-ಯಲ್ಲೇ ಎದ್ದುಕುಳಿತು, "ಇನ್ನು ಇಲ್ಲಿ ನಿಮಗೇನೂ ಕೆಲಸವಿಲ್ಲ. ದಯ-

ವಿಟ್ಟು ಹೊರಟುಹೋಗಿ" ಎಂದಳು.

ಇವಳಿಗೇನಾಗಿದೆ? ಗಂಡನ ಜೊತೆ ಸೇರಿ ಏನೋ ಪಿತೂರಿ ನಡೆಸಿದ ಹಾಗೆ ಕಾಣುತ್ತೆ. ಆದರೆ ನನ್ನನ್ನು ಹೊರಗೆ ಕಳುಹಿಸುವುದಕ್ಕೆ ಬೇಕಾದ ಎಲ್ಲಾ ಅಧಿಕಾರವೂ ಅವಳಲ್ಲಿತ್ತು. ನನ್ನನ್ನು ಇಷ್ಟು ಮುಂದುವರಿಯಲು ಬಿಟ್ಟದ್ದಕ್ಕೆ ಈಗ ಪಶ್ಚಾತ್ತಾಪ ಪಡುತ್ತಿದ್ದಾಳೋ?

"ಆಮೇಲಾಗಲಿ ಮಾತು, ಮೊದಲು ಊಟಮಾಡಿ. ಉಪವಾಸ ಮಾಡೋಕೆ ಕಾರಣವೇನು?"

"ನೀವು ದಯವಿಟ್ಟು ಹೊರಟುಹೋಗಿ."

ನಾನು ಮಾರ್ಕೊವಿನ ಕಡೆ ತಿರುಗಿ ಕೇಳಿದೆ:

"ಊರೊಳಗೆ ಬರೋದಿಲ್ಲವೇ?" ಮಾರ್ಕೊ ಮಾತಾಡಲಿಲ್ಲ. ನನ್ನ ಮಾತು ಕೇಳಿಸದಿದ್ದವನ ಹಾಗಿದ್ದ. ಆದರೆ ರೋಜಿ—

"ಹೊರಟುಹೋಗಿ ಅಂತ ಹೇಳಿದೆನಲ್ಲ, ಅರ್ಥವಾಗೋದಿಲ್ಲವೇ?" ಎಂದಳು.

ನನಗೆ ಸಿಟ್ಟುಬಂದಿತು. ಎರಡು ದಿನ ತಾನೆ ನನ್ನ ಅಪ್ಪುಗೆಯ ಸುಖ-ವನ್ನು ಅನುಭವಿಸಿದ ಹೆಂಗಸು ಮಾತಾಡುವ ರೀತಿಯೇ ಇದು? ಸಿಕ್ಕಾಪಟ್ಟೆ ಬೈದುಬಿಡಬೇಕೆನಿಸಿತು. ಇನ್ನು ಹೆಚ್ಚು ಹೊತ್ತು ಅಲ್ಲಿ ನಿಂತರೆ ಏನಾದರೂ ಅನಾಹುತವಾಗಬಹುದೆಂದುಕೊಂಡು ಅಲ್ಲಿಂದ ನಿಮಿಷದಲ್ಲಿ ಕಾರಿಗೆ ಹಿಂತಿ-ರುಗಿ ಗಫೂರನಿಗೆ—

"ನಡೆ ಹೋಗೋಣ" ಎಂದೆ.

"ಒಬ್ಬರೇನೆ?"

"ಹೌದು, ಒಬ್ಬನೆ" ಎಂದು ಕಾರಿನೊಳಗೆ ಕುಳಿತು ಧಡಾರನೆ ಬಾಗಿಲು ಹಾಕಿಕೊಂಡೆ.

"ಅವರು ಏನು ಮಾಡುತ್ತಾರೆ?"

"ನನಗೆ ತಿಳೀದು. ಆಮೇಲೆ ಬಂದು ಮಾತಾಡಿಕೊ."

"ಆಮೇಲೆ ಬಂದರೆ ಆ ಟ್ರಿಪ್ಪಿಗೆ ದುಡ್ಡು ಯಾರು ಕೊಡುತ್ತಾರೆ?"

"ಮೊದಲು ಇಲ್ಲಿಂದ ಹೊರಡುತ್ತೀಯೋ ಇಲ್ಲವೋ? ಲೆಕ್ಕ-ಪಕ್ಕ ಎಲ್ಲಾ ಆಮೇಲೆ."

ಗಫೂರ್ ಕಾರಿನಲ್ಲಿ ಬಂದು ಕುಳಿತು ಸ್ಟಾರ್ಟ್ ಮಾಡಿದ ನಿಮಿಷದಲ್ಲಿ ನಾವು ಬೆಟ್ಟವನ್ನು ಇಳಿಯತೊಡಗಿದೆವು.

ಗಫೂರ್, "ನಿಮ್ಮ ತಾಯಿ ನಿನಗೊಂದು ಹೆಣ್ಣು ಹುಡುಕಿ ಮದುವೆ-ಮಾಡಿದರೆ ಒಳ್ಳೇದು" ಎಂದ.

ನಾನದಕ್ಕೆ ಗಮನ ಕೊಡಲಿಲ್ಲ. ಕತ್ತಲೆ ಕವಿದುಕೊಂಡು ಬರುತ್ತಿತ್ತು. ಗಫೂರ್ ತಾನೇ ಮಾತಿಗಾರಂಭಿಸಿದ :

"ರಾಜು, ಎಷ್ಟಾದರೂ ನಾನು ನಿನಗಿಂತ ವಯಸ್ಸಿನಲ್ಲಿ ದೊಡ್ಡವನು. ಇವತ್ತು ನೀನು ಮಾಡಿರೊ ಅಂತಹ ಒಳ್ಳೇ ಕೆಲಸ ನೀನು ಯಾವತ್ತು ಮಾಡಿರಲಿಲ್ಲ. ಇನ್ನುಮೇಲೆ ನಿನ್ನ ಮನಸ್ಸಿಗೆ ನೆಮ್ಮದಿಯಾಗುತ್ತೆ, ಭಯ-ವಿಲ್ಲ."

ಆದರೆ ಗಫೂರ್ ಹೇಳಿದ ಹಾಗೆ ನನ್ನ ಮನಸ್ಸು ಶಾಂತವಾಗಲಿಲ್ಲ. ನನ್ನ ಜೀವನದಲ್ಲೇ ಇಷ್ಟು ಯಾತನೆಯನ್ನು ನಾನು ಯಾವಾಗಲೂ ಅನು-ಭವಿಸಿರಲಿಲ್ಲ. ಊಟ ರುಚಿಸದು, ನಿದ್ದೆ ಬರದು. ಒಂದು ಕಡೆ ಕೂಡುವು-ದಕ್ಕೆ ಆಗದು, ಏನೋ ಏನೋ ಕಳವಳ. ಒಟ್ಟಿನಲ್ಲಿ ಜೀವನದಲ್ಲೇ ಜಿಗುಪ್ಸೆ. ನಾನೇನೋ ನನ್ನ ಹಳೆಯ ಜೀವನರಂಗಕ್ಕಿಳಿದೆ. ಆದರೆ ಅದರಲ್ಲಿ ಸ್ವಲ್ಪವೂ ಆಸಕ್ತಿಯಿರಲಿಲ್ಲ. ಎಲ್ಲವೂ ಕೃತಕವಾಗಿ ತೋರುತ್ತಿತ್ತು. ಅಂಗಡಿಯಲ್ಲಿದ್ದ ಹುಡುಗನನ್ನು ಕಳಿಸಿಬಿಟ್ಟು ನಾನೇ ವ್ಯಾಪಾರಕ್ಕೆ ಕುಳಿತೆ. ಆದರೆ ಅದು ತಲೆಬೇಸರ ಹಿಡಿಯಿತು. ರೈಲು ಬಂದಾಗಲೆಲ್ಲ ನಿಲ್ದಾಣದಲ್ಲಿ ಪ್ರವಾಸಿಗಳು ಇರುತ್ತಲೇ ಇದ್ದರು.

"ನೀನೇ ಏನು ರೈಲ್ವೇ ರಾಜು?"

"ಹೌದು."

ನೋಡಪ್ಪ, ನಾವು ಅಲ್ಲಿಂದ ಬಂದಿದ್ದೇವೆ..........ನಿನ್ನ ಹತ್ತಿರ ಹೋದರೆ ಕೆಲಸವಾಗುತ್ತೆ ಅಂತ ಹೇಳಿದರು. ನನ್ನ ಹೆಂಡತಿ ಸರಯೂ ಮೂಲದಲ್ಲಿ ಸ್ನಾನಮಾಡಬೇಕಂತೆ. ನಾನು ಸ್ವಲ್ಪ ಖೆಡ್ಡ ನೋಡಬೇಕು. ಇನ್ನು ಏನೇನು ನೋಡೋದಿದೆಯೋ ಎಲ್ಲಾ ತೋರಿಸಿಬಿಡು, ಆದರೆ ರಜೆ ಇರೋದು ಮೂರೇ ದಿವಸ. ಒಂದು ಘಂಟೆ ಕೂಡ ಹೆಚ್ಚು ರಜೆ ಸಿಕ್ಕೊಲ್ಲ. ಆಹೊತ್ತಿನ ದಿನ ನಾನು ಆಫೀಸಿನಲ್ಲಿ ಇರಲೇಬೇಕು."

ಅವರು ಹೇಳುವುದಕ್ಕೆ ಮೊದಲೇ ನನಗೆ ತಿಳಿದಿರುತ್ತಿತ್ತು. ಅದೂ ಅಲ್ಲದೆ ನನಗೆ ಮುಖ್ಯವಾಗಿ ಬೇಕಾದುದು ಅವರು ಎಷ್ಟು ದಿನ ಇರುತ್ತಾರೆ ಎಂಬುದು ಒಂದು. ಅವರು ಎಷ್ಟು ಹಣ ಖರ್ಚುಮಾಡೋಕೆ ಸಿದ್ಧವಾಗಿ-ದ್ದಾರೆ ಎಂಬುದು ಮತ್ತೊಂದು. ಗಫೂರನಿಗೆ ಹೇಳಿ ಕಾರು ತರಿಸಿ ನಾನು ಮುಂದುಗಡೆ ಸೀಟಿನಲ್ಲಿ ಕುಳಿತು ಹೊರಡುತ್ತಿದ್ದೆವು. ನ್ಯೂ ಎಕ್ಸ್‌ಟೆನ್‌ಷನ್‌ಗೆ ಬಂದಾಗ ನನ್ನ ಮುಖವನ್ನು ತಿರುಗಿಸದೆಯೇ, 'ಸರ್ ಫ್ರೆಡರಿಕ್ ಲಾಲೆ' ಎನ್ನುತ್ತಿದ್ದೆ. ಅವನ ಪ್ರತಿಮೆಯ ಹತ್ತಿರ ಬಂದಾಗ ಅವರು ಕೇಳುವುದಕ್ಕೆ ಮೊದಲೇ 'ರಾಬರ್ಟ್ ಕ್ಲೈವ್' ಈ ಪ್ರಾಂತವನ್ನು ನೋಡಿಕೊಳ್ಳೋಕೆ ನಿಯಮಿಸಿ ಹೋದ ದೊರೆ. ಬೇಕಾದಷ್ಟು ಕೆರೆಗಳನ್ನು ಆಣೆಕಟ್ಟುಗಳನ್ನು ಕಟ್ಟಿಸಿ ಊರನ್ನು ಬೆಳೆಸಿದ ಮಹಾನುಭಾವ. ಅದಕ್ಕೇ ಪ್ರತಿಮೆ ಮಾಡಿಟ್ಟಿ-ದ್ದಾರೆ. ವಿನಾಯಕ ರಸ್ತೆಯ ಹತ್ತಿರವಿದ್ದ ಈಶ್ವರ ದೇವಸ್ಥಾನ ಬರುತ್ತಲೇ 'ಆ ಗೋಡೆ ಮೇಲೆ ಕೆತ್ತಿರುವ ವಿಗ್ರಹಗಳನ್ನು ನೋಡಿದರೆ ರಾಮಾಯಣ ಪೂರ್ತಿ ತಿಳಿಯುತ್ತೆ' ಎನ್ನುತ್ತಿದ್ದೆ. ಮಾರನೆಯ ದಿನ ಸರಯೂ ಮೂಲದಲ್ಲಿ ಸ್ನಾನ. ಮೊದಲು ಹೆಂಗಸು ಮುಳುಗುಹಾಕುತ್ತಿದ್ದಳು. ಅವನು ಮಾತ್ರ ತನಗೆ ಅದರಲ್ಲೆಲ್ಲಾ ನಂಬಿಕೆಯಿಲ್ಲವೆಂದರೂ ಆಮೇಲೆ ಅವಳ ದಾರಿಯನ್ನೇ ಅನುಸರಿಸುತ್ತಿದ್ದನು. ಆಮೇಲೆ ಮೂಲ ದೇವಸ್ಥಾನದಲ್ಲಿ ಗಂಗಾಧರನ ದರ್ಶನ.

ಅವರಿಂದ ಬರಬೇಕಾದ ದುಡ್ಡನ್ನೂ, ಗಫೂರ್ ಕೊಡಬೇಕಾದ ಕಮಿ-ಷನ್ನೂ ಸಂಗ್ರಹಿಸಿಕೊಂಡು ಮಾರನೆಯ ದಿನ ಅವರನ್ನು ರೈಲು ಹತ್ತಿಸು-ತ್ತಿದ್ದೆ. ಆದರೆ ಕೆಲಸ ಮಾತ್ರ ಯಂತ್ರದಂತೆ ನಡೆಯುತ್ತಿತ್ತು. ನನ್ನ ಕಣ್ಣು-ಮುಂದೆ ರೋಜಿಯೇ ನರ್ತಿಸುತ್ತಿದ್ದಳು. ಮೂರುಹೊತ್ತು ಅವಳ ಧ್ಯಾನವೇ. ಅವಳನ್ನು ಹಾಗೆ ಉಪವಾಸ ಹಾಕಿ ಕೊಂದುಬಿಟ್ಟಿದ್ದರೆ? ಅಥವಾ ರೋಜಿಗೆ ಹುಚ್ಚುಹಿಡಿದುಬಿಟ್ಟಿದೆಯೇ? ಹುಲಿ-ಕರಡಿಗಳ ಪಾಲುಮಾಡಿ ಹೊರಟು-ಹೋಗಿದ್ದರೆ? ನನ್ನ ಚಿಂತೆ ನನ್ನ ತಾಯಿಯನ್ನು ಕಾಡಿತು. 'ಏನಾಗಿದೆ ನಿನಗೆ?' ಎನ್ನುತ್ತಿದ್ದಳು. 'ಏನೂ ಇಲ್ಲ' ಎಂದುಬಿಡುತ್ತಿದ್ದೆ. ಮನೆಯನ್ನೇ ಸೇರದಿರುತ್ತಿದ್ದ ನಾನು ಈಗ ಮೂರುಹೊತ್ತು ಮನೆಯಲ್ಲೇ ಕೊರಗುತ್ತ ಕೂಡುವುದನ್ನು ನನ್ನ ತಾಯಿ ಸಹಿಸದಾದಳು. ಆದರೆ ಮಾತಾಡಿಸುವುದಕ್ಕೆ

ಬಂದರೆ ರೇಗಿಬೀಳುತ್ತಿದ್ದೆ. ಹೀಗಾಗಿ ಅಮ್ಮ ನನ್ನನ್ನು ನನ್ನ ಪಾಡಿಗೆ ಬಿಟ್ಟು-ಬಿಡುತ್ತಿದ್ದಳು. ಸೇರದಿದ್ದರೂ ಊಟಮಾಡುತ್ತಿದ್ದೆ. ನಿದ್ದೆ ಬರದಿದ್ದರೂ ಹಾಸಿಗೆಯಲ್ಲಿ ಮಲಗಿ ಹೊರಳಾಡುತ್ತಿದ್ದೆ. ರೈಲ್ವೆ ನಿಲ್ದಾಣದಲ್ಲಿ ಅಡ್ಡಾಡುತ್ತ ಪ್ರವಾಸಿಗಳ ಮಾರ್ಗದರ್ಶಿಯಾಗಿ ಕೆಲಸವನ್ನೂ ಮಾಡುತ್ತಿದ್ದೆ. ಆದರೆ ಮನಸ್ಸಿಗೆ ಮಾತ್ರ ಶಾಂತಿಯಿರಲಿಲ್ಲ. ಗಫೂರನ ಭವಿಷ್ಯ ನಿಜವಾಗಿರಲಿಲ್ಲ. ನಾನು ಏನೇನೆಲ್ಲ ಕನಸು ಕಟ್ಟಿದ್ದೆ! ಮಾರ್ಕೊ ತನ್ನ ಹೆಂಡತಿಯನ್ನು ನನ-ಗೊಪ್ಪಿಸಿ ಅವಳನ್ನೂ ಅವಳ ಕಲೆಯನ್ನೂ ರಕ್ಷಿಸಲು ನಾನೇ ಸಮರ್ಥನೆಂದೂ ಅವನಿಗೆ ಅವನ ಏಕಾಂತವೇ ಮಡದಿಯೆಂದೂ ಹೇಳುವನೆಂದು ನಂಬಿದ್ದೆ. ಇಲ್ಲದೆ ಹೋದರೆ ಹೋರಾಟಕ್ಕೆ ಸಿದ್ಧವಾಗಿ ಬಂದಿದ್ದರೆ ಅದೊಂದು ರೀತಿ-ಯಾಗುತ್ತಿತ್ತು. ಆದರೆ ಅದೆಂತಹ ವರ್ತನೆ? ಅದೂ ಅಲ್ಲದೆ ನನ್ನ ಜೊತೆ-ಯಲ್ಲಿ ತಿಂದು ತಿರುಗುತ್ತಾ ಇದ್ದ ಅವಳೂ ಅವನ ಪರಹಿಡಿದು ನನ್ನನ್ನು ಹೊರಗೆ ಕಳುಹಿಸುವುದೇ? ಛೆ, ಅವಳ ಬುದ್ಧಿಗಿಷ್ಟು ಮಣ್ಣುಹಾಕ. ಶುದ್ಧ ಚಂಚಲ ಮನಸ್ಸು. ಗಫೂರನ ಹತ್ತಿರ ಇದರ ಮಾತೆತ್ತಲಿಲ್ಲ. ಅವನಾಗಿಯೇ ಅವರ ವಿಚಾರ ಏನಾದರೂ ಹೇಳುತ್ತಾನೋ ಎಂದಿದ್ದರೆ ಅವನಂತೂ ಬಾಯಿ-ಬಿಡುವ ಹಾಗೆ ಕಾಣಲಿಲ್ಲ. ಒಂದೊಂದು ದಿನ ನನಗೆ ಕಾರು ಬೇಕಾದಾಗ ಗಫೂರನ ಕಾರು ಸಿಗುತ್ತಿರಲಿಲ್ಲ. ಬೆಟ್ಟದ ಬಂಗಲೆಗೆ ಹೋಗಿದ್ದಾನೆಂದು ಹೇಳಿಕೊಳ್ಳುತ್ತಿದ್ದೆ. ಆ ಆನಂದಭವನದ ಕಡೆ ತಿರುಗಿ ಸಹ ನೋಡುತ್ತಿರ-ಲಿಲ್ಲ. ಪ್ರವಾಸಿಗಳಿಗೆ ಜಾಗ ಬೇಕಾದರೆ 'ತಾಜ್' ಹೋಟೆಲಿಗೆ ಕಳುಹಿಸು ತ್ತಿದ್ದೆ. ಆನಂದಭವನದ ಲೆಕ್ಕವನ್ನು ಮಾರ್ಕೊ ಕೊಟ್ಟುಬಿಡುವುದರಲ್ಲಿ ಸಂದೇಹವೇ ಇರಲಿಲ್ಲ. ಇನ್ನು ನನಗೆ ಕೊಡಬೇಕಾದ ದುಡ್ಡು? ಈಗ ಕೊಟ್ಟಿರೋ ದುಃಖವೇ ಸಾಕಾಗಿದೆ. ಇನ್ನು ಅವನ ದುಡ್ಡು ಯಾರಿಗೆ ಬೇಕು?

ರೋಜಿಯ ಜೊತೆ ಸ್ವೇಚ್ಛೆಯಾಗಿ ತಿರುಗಿ ಅಭ್ಯಾಸವಾಗಿದ್ದ ನನಗೆ ಈ ಜೀವನ ಬೇಸರವಾಗತೊಡಗಿತು. ಪ್ರವಾಸಿಗಳ ಜೊತೆ ತಿರುಗುವದಂತೂ ಅಸಾಧ್ಯವಾಗಿ ತೋರಿತು. ಬರುಬರುತ್ತಾ ನಿಲ್ದಾಣಕ್ಕೆ ಹೋಗುವುದನ್ನು ಬಿಡುತ್ತಾ ಬಂದೆ. ಪೋರ್ಟರನ ಮಗ ಅಂಗಡಿ ನೋಡಿಕೊಳ್ಳುವುದರ ಜೊತೆಗೆ ಈಚೀಚೆಗೆ ಪ್ರವಾಸಿಗಳ ಮಾರ್ಗದರ್ಶಿಯಾಗಿಯೂ ಹೋಗುತ್ತಿದ್ದ. ರೈಲ್ವೆ ರಾಜುವಿಲ್ಲದೆ ಪ್ರವಾಸಿಗಳು ಬೇಸರಪಡಬಹುದು. ಆದರೆ ಈಗಿನ ನನ್ನ ಸ್ಥಿತಿ-

ಯಲ್ಲಿ ನನ್ನಿಂದ ಅವರಿಗೆ ಯಾವ ರೀತಿಯಲ್ಲೂ ಉಪಯೋಗವಾಗುವ ಹಾಗಿರಲಿಲ್ಲ. ನನಗಿಂತ ಆ ಹುಡುಗನೆ ವಾಸಿ. ರೈಲ್ವೆರಾಜು ಯಾರೆಂದರೆ ನಾನೇ ಅಂತ ಹೇಳಿಬಿಡುತ್ತಾ ಇದ್ದಾನೋ ಏನೋ?

ಈ ರೀತಿಯಾಗಿ ದಿನಗಳು ಕಳೆದವು ಬಹಳ ದಿನಗಳೇನಲ್ಲ, ಮೂವತ್ತು ದಿನಗಳು ಮಾತ್ರ. ಆದರೆ ನನಗೆ ಮಾತ್ರ ಒಂದೊಂದು ನಿಮಿಷವೂ ಒಂದೊಂದು ಯುಗವಾಗಿ ಕಾಣತೊಡಗಿತು. ಒಂದು ದಿನ ಮಧ್ಯಾಹ್ನ ಮನೆ-ಯಲ್ಲೇ ನೆಲದ ಮೇಲೆ ಮಲಗಿದ್ದೆ. ನಾಲ್ಕೂವರೆಯ ಮದರಾಸು ಮೇಲು ಆಗ ತಾನೇ ಹೊರಟುಹೋಗಿತ್ತು. ರೈಲಿನ ಶಬ್ದ ಎಚ್ಚರಗೊಳಿಸುತ್ತಿತ್ತು. ಅಮ್ಮ ಹೊರಗಿನಿಂದ ಬಂದು, "ನಿನ್ನ ಹುಡುಕಿಕೊಂಡು ಯಾರೋ ಬಂದಿ-ದ್ದಾರೆ" ಎಂದುಬಿಟ್ಟು ಒಳಗೆ ಹೊರಟುಹೋದಳು.

ನಾನು ಎದ್ದು ಬಾಗಿಲಿಗೆ ಹೋದೆ. ಎದುರುಗಡೆ ಮೆಟ್ಟಿಲ ಮೇಲೆ ರೋಜಿ ನಿಂತಿದ್ದಳು. ಕಾಲಬಳಿ ಪೆಟ್ಟಿಗೆ, ಕಂಕುಳಲ್ಲಿ ಕೈಚೀಲ.

"ರೋಜಿ, ಬರುತ್ತೇನೆ ಅಂತ ಒಂದು ಮಾತು ಹೇಳಬಾರದಾಗಿತ್ತೆ? ಬಾ, ಬಾ ಒಳಗೆ ಬಾ. ಅವರು ಯಾರೂ ಅಲ್ಲ, ನಮ್ಮ ತಾಯಿ" ಎಂದು ರೋಜಿಯ ಪೆಟ್ಟಿಗೆಯನ್ನು ತೆಗೆದುಕೊಂಡು ಒಳಗೆ ಹೋದೆ. ರೋಜಿ ಹಿಂಬಾಲಿಸಿದಳು. ನನಗಂತೂ ಹುಚ್ಚುಹಿಡಿದ ಹಾಗಾಗಿತ್ತು.

"ಅಮ್ಮಾ, ರೋಜಿ ಬಂದಿದ್ದಾಳೆ, ನಮ್ಮ ಅತಿಥಿಯಾಗಿ."

ಅಮ್ಮ ಅಡುಗೆಯ ಮನೆಯಿಂದ ಹೊರಗೆ ಬಂದು ರೋಜಿಯನ್ನು ಸ್ವಾಗತಿಸಿದಳು.

"ಆ ಚಾಪೆಯ ಮೇಲೆ ಕೂತುಕೋಮ್ಮಾ. ಏನು ತಾಯಿ ನಿನ್ನ ಹೆಸರು?"

ಕಮಲೆಯೆಂದೋ, ಸರೋಜಳೆಂದೋ ಹೇಳುತ್ತಾಳೆಂದುಕೊಂಡಿರ-ಬೇಕು ಅಮ್ಮ. ಆದರೆ 'ರೋಜಿ' ಎನ್ನುವ ಹೆಸರು ಕೇಳಿ ಒಂದು ನಿಮಿಷ ದಿಗ್ಭ್ರಮೆಯಾಯಿತು. ಈ ರೋಜಿಯನ್ನು ಹೇಗೆ ತನ್ನ ಮನೆಯಲ್ಲಿಟ್ಟು-ಕೊಳ್ಳುವುದು? ನನಗೆ ಏನು ಮಾಡಬೇಕೋ ತಿಳಿಯಲಿಲ್ಲ. ಬೆಳಿಗ್ಗೆ ಮುಖ ಕ್ಷೌರ ಮಾಡಿಸಿಕೊಂಡಿರಲಿಲ್ಲ, ತಲೆ ಬಾಚಿಕೊಂಡಿರಲಿಲ್ಲ. ಪಂಚೆ ಕೊಳೆ-ಕೊಳೆ. ನೆಟ್ಟು ಬನಿಯನ್ನಿಗೆ ನೂರು ತೂತುಗಳು. ತೂತು ಕಾಣಿಸದಿರಲೆಂದು

ಕೈಯಿಂದ ಎದೆಯನ್ನು ಮುಚ್ಚಿಕೊಂಡೆ. ಆ ಹರಕಲು ಚಾಪೆಯನ್ನು ನೋಡಿ ನನಗೆ ನಾಚಿಕೆಯಾಯಿತು. ಮನೆಯೋ ಹೊಗೆಯಿಂದ ಕಪ್ಪಾದ ಗೋಡೆಗಳು, ಮೇಲಕ್ಕೆ ಹಂಚುಗಳು. ಇಷ್ಟು ದಿನ ನನ್ನ ವಿಚಾರವಾಗಿ ಅವಳಲ್ಲಿ ಉಂಟುಮಾಡಿದ್ದ ಭಾವನೆ ಎಲ್ಲ ಒಂದು ನಿಮಿಷದಲ್ಲಿ ಮಾಯವಾಗುವ ಸ್ಥಿತಿ ಬಂದಿತ್ತು. ನನ್ನ ಬೇಳೆ-ಕಾಳು ಇಷ್ಟೆ? ಎಂದು ತಿಳಿದರೆ ರೋಜಿ ಏನು ಮಾಡುವಳೋ? ಸದ್ಯ ಹರಕು ನೆಟ್ಟ ಬನಿಯನ್ನಾದರೂ ಹಾಕಿಕೊಂಡಿದ್ದೆನಲ್ಲ. ಅಷ್ಟೇ ಪುಣ್ಯ. ನನ್ನ ತಾಯಿ ಅದನ್ನು ಗಮನಿಸುತ್ತಿರಲಿಲ್ಲ. ಆದರೆ ರೋಜಿ, ಓಹ್........!

ಅಮ್ಮನಿಗೆ ಅಡುಗೆಮನೆಯಲ್ಲಿ ಕೆಲಸವಿತ್ತು. ಆದರೆ ಅತಿಥಿಯನ್ನು ಸ್ವಾಗತಿಸುವುದಕ್ಕಾಗಿ ಒಂದು ನಿಮಿಷ ಹೊರಕ್ಕೆ ಬಂದಿದ್ದಳು. ರೋಜಿ-ಆದರೇನಂತೆ? ಅತಿಥಿ ಅತಿಥಿಯೇ. ಅಮ್ಮ ಮತ್ತೆ ಅಡುಗೆಯ ಮನೆಯೊಳಗೆ ಹೋಗದೆ ರೋಜಿಯ ಮಗ್ಗುಲಲ್ಲಿ ಬಂದು ಕುಳಿತಳು. ಅವಳು ಕೇಳಿದ ಮೊದಲ ಪ್ರಶ್ನೆ:

"ನಿನ್ನ ಜೊತೆಗೆ ಯಾರು ಬಂದಿದ್ದಾರೆ ರೋಜಿ?" ರೋಜಿ ನಾಚುತ್ತ, ಅಳುಕುತ್ತ ನನ್ನ ಕಡೆ ನೋಡಿದಳು. ನಾನು ಒಂದೆರಡು ಹೆಜ್ಜೆ ಹಿಂದೆ ಹೋದೆ. ರೋಜಿಗೆ ನನ್ನ ಅವಲಕ್ಷಣದ ದರ್ಶನವಾಗದಿರಲೆಂದು—

"ಒಬ್ಬಳೇ ಬಂದಿದಾಳೇ ಅಂತ ಕಾಣುತ್ತಮ್ಮಾ."
ಅಮ್ಮನಿಗೆ ಆಶ್ಚರ್ಯವಾಯಿತು.

"ಅಂತೂ ಪರವಾಗಿಲ್ಲಮ್ಮ, ಈಗಿನ ಕಾಲದ ಹುಡುಗಿಯರು ಎಷ್ಟು ಧೈರ್ಯ ಆದರೂ! ನಮ್ಮ ಕಾಲದಲ್ಲಿ ಜೊತೆಗೊಬ್ಬರಿಲ್ಲದೆ ಬೀದಿಗೆ ಸಹ ಹೋಗುತ್ತಿರಲಿಲ್ಲ. ನನ್ನ ಜೀವಮಾನದಲ್ಲೇ ಒಂದೇ ಒಂದು ಸಲ, ನಮ್ಮ ರಾಜು ತಂದೆಯವರಿದ್ದಾಗ ಮಾರ್ಕೆಟ್ಟಿಗೆ ಹೋಗಿಬಂದಿದ್ದೇನೆ."

ರೋಜಿ ಈ ಮಾತಿಗೆ ಏನು ಉತ್ತರ ಕೊಡಬೇಕೆಂಬುದನ್ನು ಅರಿಯದೆ ಹೋದಳು. ನಾನು ಅವಳನ್ನೇ ನೋಡುತ್ತಿದ್ದೆ. ಅವಳ ಮುಖದಲ್ಲಿ ಚಿಂತೆಯ ಗೆರೆ ಮೂಡಿತ್ತು. ಸ್ವಲ್ಪ ಬಿಳಿಚಿಕೊಂಡಿದ್ದಳು. ಆದರೆ ಆ ಹೊತ್ತು ಬೆಟ್ಟದ ಬಂಗಲೆಯಲ್ಲಿ ಕಣ್ಣನ್ನು ಕೆಂಪಗೆ ಮಾಡಿಕೊಂಡು ನನ್ನನ್ನು ಹೊರಟು-

ಹೋಗಲು ಹೇಳಿದ ರಾಕ್ಷಸಿಯಾಗಿರಲಿಲ್ಲ. ಅವಳ ಧ್ವನಿ ಎಂದಿನಂತೆಯೇ ಅತಿ ಮಧುರ, ಸ್ವಲ್ಪ ನಿಶ್ಶಕ್ತಳಾದ ಹಾಗಿತ್ತು.

"ಕಾಫಿಗೆ ನೀರು ಮರಳುತ್ತಾ ಇದೆ. ನಿನಗೆ ಕಾಫಿ ಸೇರುತ್ತೆ ತಾನೆ?"

ಸದ್ಯ ಬದುಕಿದೆನೆಂದು ನಾನು ಉಸಿರಾಡಿಸಿದೆ. ಅಮ್ಮ ಪ್ರಶ್ನೆ ಕೇಳ-ದಿದ್ದರೆ ಸಾಕಾಗಿತ್ತು. ಆದರೆ ಅಮ್ಮ ಸುಮ್ಮನಾಗಲಿಲ್ಲ.

"ಎಲ್ಲಿಂದ ಬಂದೆ?"

"ಮದರಾಸಿನಿಂದ" ಎಂದೆ ನಾನು.

"ಇಲ್ಲಿಗೆ ಯಾಕೆ ಬಂದೆ?"

"ಯಾರೋ ಸ್ನೇಹಿತರನ್ನ ನೋಡೋಕೆ ಬಂದಿದ್ದಾಳೆ."

"ನಿನಗೆ ಮದುವೆಯಾಗಿದೆಯೇ?"

"ಇಲ್ಲ" ಇದು ನನ್ನ ಉತ್ತರ.

ಅಮ್ಮ ನನ್ನನ್ನು ಒಂದು ಕ್ಷಣ ತೀಕ್ಷ್ಣವಾಗಿ ನೋಡಿ ರೋಜಿಯ ಕಡೆ ತಿರುಗಿದಳು.

"ನಿನಗೆ ತಮಿಳು ಬರುತ್ತೆಯೇ?"

ಈಗ ನಾನು ಮಾತನಾಡುವುದನ್ನು ಬಿಟ್ಟು ರೋಜಿಯನ್ನೇ ಮಾತಾ-ಡಲು ಬಿಟ್ಟೆ. ರೋಜಿ ತಮಿಳಿನಲ್ಲೇ ಉತ್ತರಿಸಿದಳು :

"ನಾವು ಮನೇಲಿ ಮಾತಾಡೋದೇ ತಮಿಳು."

"ಮನೇಲಿ ಬೇರೆ ಯಾರಿದ್ದಾರೆ?"

"ನನ್ನ ಸೋದರಮಾವ, ಸೋದರತ್ತೆ........" ಅಮ್ಮನಿಂದ ಈಗ ಬಂದ ಪ್ರಶ್ನೆಯನ್ನು ಮಾತ್ರ ರೋಜಿ ಎದುರಿಸಲಾರದೆ ಹೋದಳು.

"ನಿಮ್ಮ ತಂದೆಯ ಹೆಸರೇನು?"

ರೋಜಿಗೆ ತನ್ನ ತಾಯಿಯ ವಿಷಯ ಗೊತ್ತಿತ್ತೇ ವಿನಃ ತಂದೆ ಯಾರು ಎಂದು ತಿಳಿದಿರಲಿಲ್ಲ. ನಾನು ಆ ವಿಚಾರವಾಗಿ ಅವಳನ್ನು ಕೇಳಿರಲಿಲ್ಲ. ರೋಜಿ ಒಂದು ಕ್ಷಣ ಸುಮ್ಮನಿದ್ದು—

"ನನಗೆ ತಂದೆಯಿಲ್ಲ" ಎಂದಳು.

ಅಮ್ಮನಿಗೆ ಇದ್ದಕ್ಕಿದ್ದ ಹಾಗೆ ಕರುಣೆ ಉಕ್ಕಿಬಂತು. "ತಂದೆ-ತಾಯಿ

ಇಬ್ಬರೂ ಇಲ್ಲವೇ? ಮಾವ ಚೆನ್ನಾಗಿ ನೋಡಿಕೊಳ್ಳುತ್ತಾ ಇದ್ದಾನೋ ಏನು? ನೀನು ಬಿ. ಎ. ಗೀಯೆ ಮಾಡಿದಿಯೇನು?"

"ಬಿ. ಎ. ಅಲ್ಲ, ಎಂ. ಎ. ಮಾಡಿದ್ದಾಳೆ" ಎಂದು ಅಮ್ಮನನ್ನು ತಿದ್ದಿದೆ.

"ಹಾಗಾದ ಮೇಲೆ ಸರಿ, ಧೈರ್ಯವಂತೆ. ಇನ್ನುಮೇಲೆ ನಿನಗೆ ಈ ಪ್ರಪಂಚದಲ್ಲಿ ಯಾವುದೂ ಕಷ್ಟವಾಗೋದಿಲ್ಲ. ನಮ್ಮ ಹಾಗೆ ಒಂದೂ ತಿಳೀದ ಹಳ್ಳಿಮುಕ್ಕರಲ್ಲ ನೀವು. ಎಲ್ಲಿಗೆ ಬೇಕು ಎಂದರೆ ಅಲ್ಲಿಗೆ ಹೋಗೋ ಸಾಮರ್ಥ್ಯವಿದೆ. ರೈಲಿನಲ್ಲಿ ಹೋಗುತ್ತಾ ಯಾವನಾದರೂ ಒಬ್ಬ ಪೋಕರಿ ಗಾಡಿಗೆ ಹತ್ತಿದರೆ ರೈಲು ನಿಲ್ಲಿಸಿ ಪೋಲೀಸಿನವನನ್ನು ಕರೆಯೋ ಛಾತಿಯಿದೆ. ಮುಂದಕ್ಕೆ ಏನು ಮಾಡಬೇಕೂಂತ ಇದೀಯಾ? ಕೆಲಸಕ್ಕೆ ಸೇರಿ ಸಂಪಾದಿಸುತ್ತೀಯಾ? ಜಾಣೆ. ನಮ್ಮ ತಾಯಿ ರೋಜಿಯನ್ನು ಮುಕ್ತಕಂಠದಿಂದ ಹೊಗಳುತ್ತಿದ್ದಳು. ಒಳಗೆ ಹೋಗಿ ಕಾಫಿಯನ್ನು ತಂದುಕೊಟ್ಟಾಯಿತು. ರೋಜಿ ಮನಸ್ಸಿನಲ್ಲಿ ನಮ್ಮ ತಾಯಿಗೆ ಕೃತಜ್ಞತೆಯನ್ನರ್ಪಿಸಿ ಕಾಫಿ ಕುಡಿದು ಮುಗಿಸಿದಳು. ನಾನಾದರೋ ಅಲ್ಲಿಂದ ಕಾಲ್ತೆಗೆದು ಮುಖ ತೊಳೆದುಕೊಂಡು ಬೇರೆ ಬಟ್ಟೆ ಹಾಕಿಕೊಂಡು ಬರುವ ಸಮಯವನ್ನೇ ಕಾಯುತ್ತಿದ್ದೆ. ಆದರೆ ಹೋಗುವುದು ಹೇಗೆ? ಅಪ್ಪ ತನಗಿದ್ದ ಬುದ್ಧಿಯನ್ನೆಲ್ಲಾ ಖರ್ಚುಮಾಡಿ ಒಂದು ದೊಡ್ಡ ಅಂಗಳ, ಒಂದು ಅಡುಗೆಮನೆ ಕಟ್ಟಿಸಿಬಿಟ್ಟಿದ್ದ. ಹೊರಗಿನ ಜಗುಲಿಯ ಮೇಲೆ ಬಂದವರು ಕೂಡುತ್ತಿದ್ದರು. ಆದರೆ ನಾನು ರೋಜಿಯನ್ನು ಅಲ್ಲಿಗೆ ಹೇಗೆ ಕಳುಹಿಸಲಿ? ಅಲ್ಲಿ ಹೋಗಿ ಅವಳು ಕುಳಿತರೆ ಅಂಗಡಿಯ ಹುಡುಗನಿಂದ ಹಿಡಿದು ಅಲ್ಲಿದ್ದವರೆಲ್ಲ ಬಂದು ಅವಳಿಗೆ ಮದುವೆಯಾಗಿದೆಯೆ? ಎಂದು ಕೇಳುವುದರಲ್ಲಿ ಸಂದೇಹವೇ ಇಲ್ಲ. ಆದರೆ ರೋಜಿಯ ಎದುರಿನಲ್ಲೇ ಹೇಗೆ ಬಟ್ಟೆ ಬದಲಾಯಿಸುವುದು? ಇಷ್ಟು ದಿನ ನನ್ನ ಹಾಳು ಬುದ್ಧಿಗೆ ಇದು ತೋಚೇ ಇರಲಿಲ್ಲ. ಅಪ್ಪನಿಗೆ ಅಂಗಡಿ. ನನಗೆ ಹುಣಸೇಮರದ ನೆರಳು. ಅಮ್ಮನಿಗೆ ಅಡುಗೇಮನೆ. ಮನೆಗೆ ಯಾರಾದರೂ ಗಂಡಸರು ಬಂದರೆ ಹೊರಗಿನ ಜಗುಲಿ. ಹೆಂಗಸರು ಬಂದರೆ ಒಳಗಿನ ಹಜಾರ. ಸಮಸ್ತ ವೈಭವವೂ ಆ ಹಜಾರದಲ್ಲಿಯೇ. ನನ್ನ ಕ್ಷೌರದ ಕನ್ನಡಿಯೂ ಅಲ್ಲೇ ಇತ್ತು. ನನ್ನ ಹೊಸ-ಹೊಸ ಉಡುಪೂ ಗೂಟಕ್ಕೆ ನೇತುಹಾಕಲ್ಪಟ್ಟಿದ್ದವು. ಮನೆಯ

ಹಿಂದೆ ಇದ್ದ ಒಂದು ಕೊಟ್ಟಗೆಯೇ ಬಚ್ಚಲುಮನೆ. ಭಾವಿಯಿಂದ ನೀರೆತ್ತಿ ತಲೆಯ ಮೇಲೆ ಹುಯ್ದುಕೊಳ್ಳುವುದೇ ಸ್ನಾನ. ಅಮ್ಮ ಹಾಲಿನಲ್ಲೇ, ಅಡುಗೆ ಮನೆಯಲ್ಲೇ ಇದ್ದರೆ ನಾನು ಬಚ್ಚಲು ಮನೆಯಿಂದ ಹಾಲಿಗೋ, ಹಾಲಿನಿಂದ ಬಚ್ಚಲು ಮನೆಗೋ ಓಡಾಡುತ್ತ ನನ್ನ ಮುಖಾಲಂಕಾರ ಮುಗಿಸುತ್ತಿದ್ದೆ. ಆದರೆ ಈಗ ರೋಜಿಯ ಮುಂದೆ ಇದೆಲ್ಲ ಸಾಧ್ಯವೇ ?

ನನ್ನ ತಾಯಿ ನನ್ನ ಕಷ್ಟವನ್ನು ಅರ್ಥಮಾಡಿಕೊಂಡಳೋ ಏನೋ. ರೋಜಿಯನ್ನು—

" ನಾನು ಭಾವಿಗೆ ನೀರು ತರೋಕೆ ಹೋಗುತ್ತೇನೆ. ನೀನು ಬರುತ್ತೀಯಾ ? " ಎಂದು ಕೇಳಿದಳು.

ಭಾವಿಯ ಹತ್ತಿರ ಅವಳು ಯಾವ ವಿಚಾರಣೆಗೂ ಗುರಿಯಾಗದಿದ್ದರೆ ಸಾಕೆಂದು ನಾನು ಪ್ರಾರ್ಥಿಸಿದೆ. ರೋಜಿ ಮಾತಾಡದೆ ಎದ್ದು ಅಮ್ಮನ ಹಿಂದೆ ಹೋದಳು. ಅವರು ಹೊರಟಕೂಡಲೇ ನಾನು ನನ್ನ ಕೆಲಸದಲ್ಲಿ ನಿರತನಾದೆ. ಅವಸರ ಅವಸರವಾಗಿ ಕ್ಷೌರ ಮಾಡಿಕೊಳ್ಳುವುದರಲ್ಲಿ ಬ್ಲೇಡು ತಗುಲಿ ಒಂದಿಷ್ಟು ರಕ್ತ ಬಂತು. ಬೇಗ ಬೇಗ ಸ್ನಾನಮಾಡಿ ತಲೆ ಬಾಚಿಕೊಂಡು ಶುಭ್ರವಾದ ಬಟ್ಟೆಗಳನ್ನು ಹಾಕಿಕೊಂಡೆ. ಅವರು ಭಾವಿಯ ಕಟ್ಟೆಯಿಂದ ಹಿಂತಿರುಗುವ ಹೊತ್ತಿಗೆ ರಾಣಿಯ ದರ್ಶನಕ್ಕೆ ಸಿದ್ಧನಾಗಿದ್ದೆ. ಅಂಗಡಿಯ ಹತ್ತಿರ ಹೋಗಿ ಗಫೂರನನ್ನು ಕರೆತರಲು ಹುಡುಗನನ್ನು ಕಳುಹಿಸಿಯೂ ಆಯಿತು.

" ರೋಜಿ, ತಲೆ-ಗಿಲೆ ಬಾಚಿಕೊಳ್ಳಬೇಕಾದರೆ ಬಾಚಿಕೋ, ನಾನು ಹೊರಗೆ ಇರುತ್ತೇನೆ. ಆಮೇಲೆ ಆಚೆ ಹೋಗೋಣ. "

ಗಫೂರನ ಕಾರನ್ನು ಗೊತ್ತುಮಾಡಿಕೊಂಡು ನಾನು ತಿರುಗಾಟಕ್ಕೆ ಹೊರಡುವುದು ನನ್ನ ಯೋಗ್ಯತೆಗೆ ಮೀರಿದ್ದೇ ಆಯಿತು. ಆದರೆ ಬೇರೆ ದಾರಿ ಇರಲಿಲ್ಲ. ನನ್ನ ಮನೆಯಲ್ಲಿ ಅವಳ ಹತ್ತಿರ ಮಾತನಾಡುವಹಾಗಿರಲಿಲ್ಲ. ಬೀದಿಯಲ್ಲಿ ಅವಳನ್ನು ನಡೆಸಿಕೊಂಡು ಹೋಗುವ ಹಾಗೂ ಇರಲಿಲ್ಲ. ಮಾರ್ಗದರ್ಶಿಯಾಗಿ ಅವಳ ಜೊತೆ ಬೀದಿ-ಬೀದಿ ತಿರುಗಿದ ವಿಷಯ ಬೇರೆ.

ಆದರೆ ಇಂದು ? ಗಫೂರ್ ಬಂದಾಗ ನಾನು ಹೇಳಿದೆ:

" ಅವಳು ಬಂದುಬಿಟ್ಟಿದ್ದಾಳೆ. "

"ನನಗೆ ಗೊತ್ತು. ಇಲ್ಲಿ ಹೋಟೆಲಿಗೆ ಬಂದಿದ್ದರು. ಅವನು ಮದ-ರಾಸು ರೈಲಿನಲ್ಲಿ ಹೊರಟುಹೋದ."

"ನೀನು ಹೇಳಲೇ ಇಲ್ಲವಲ್ಲ?"

"ನಿನಗೇ ತಿಳಿಯುವಾಗ ನಾನು ಯಾಕೆ ಹೇಳಬೇಕು?"

"ಏನು ಏನಾಯಿತು?"

"ಅವಳನ್ನು ಕೇಳು. ಇನ್ನೇನು ನಿನ್ನ ಬುಟ್ಟಿಗೆ ಬಿದ್ದಿದ್ದಾಳಲ್ಲ."

"ಸರಿ........ನನಗೆ ಸಾಯಂಕಾಲ ಕಾರು ಬೇಕು."

"ಅಪ್ಪಣೆ ಸ್ವಾಮಿ, ನೀವು ಅಪ್ಪಣೆ ಮಾಡಿದಾಗ ಬಂದು ನಿಮ್ಮನ್ನು ಎಲ್ಲಿಗೆ ಬೇಕೋ ಅಲ್ಲಿಗೆ ಕರೆದುಕೊಂಡು ಹೋಗದಿದ್ದರೆ ನನ್ನ ಟ್ಯಾಕ್ಸಿ ಇದ್ದು ಏನು ಪ್ರಯೋಜನ?"

ಗಫೂರ್ ಕಣ್ಣು ಮಿಟುಕಿಸಿದ.

ರೋಜಿ ಸಿದ್ಧಳಾಗಿ ಬಾಗಿಲಿಗೆ ಬಂದಳು. ನಾನು ಒಳಗೆ ಹೋಗಿ ಅಮ್ಮನಿಗೆ, "ಅಮ್ಮಾ, ನಾವು ಸ್ವಲ್ಪ ಹೊರಗೆ ಹೋಗಿ ಬರುತ್ತೇವೆ" ಎಂದು ಹೇಳಿ ಬಂದೆ.

"ಎಲ್ಲಿಗೆ?" ಗಫೂರ್ ಕನ್ನಡಿಯಲ್ಲಿ ನಮ್ಮನ್ನು ನೋಡುತ್ತಾ ಕೇಳಿದ. ನಾವು ಬೇಗ ಉತ್ತರಿಸಲಿಲ್ಲ.

"ಬೆಟ್ಟದ ಬಂಗಲೆಗೆ ಹೋಗಲೇ?"

"ಇಲ್ಲ, ಇಲ್ಲ. ಅಲ್ಲಿಗೆ ಬೇಡ" ರೋಜಿ ಚೀರಿದಳು.

"ಸಾಕಪ್ಪಾ ಸಾಕು, ಅದರ ಸಹವಾಸ. ಅಲ್ಲಿಗೆ ಬೇಡ" ನಾನು ಅದನ್ನು ಹೆಚ್ಚು ಬೆಳೆಸಲಿಲ್ಲ.

ಹೋಟೆಲ್ ತಾಜ್ ಹತ್ತಿರ ಬಂದಾಗ ನಾನು—

"ಏನಾದರೂ ತೆಗೆದುಕೊಳ್ಳುತ್ತೀಯಾ?" ಎಂದೆ.

"ಇಲ್ಲ, ಬೇಡ. ನಿಮ್ಮ ತಾಯಿ ಕಾಫಿ ಕೊಟ್ಟರು. ಅಷ್ಟೇ ಸಾಕು. ನಿಮ್ಮ ತಾಯಿ ಎಷ್ಟು ಒಳ್ಳೇಯೋರು."

"ಅದೇನೋ ಸರಿ ಆದರೆ ನಿನಗೆ ಮದುವೆಯಾಗಿದೆಯೇ?" ಅಂತ ಕೇಳುತ್ತಾಳಲ್ಲ, ಅದೇ ಕಷ್ಟ ನಾವು ನಕ್ಕೆವು.

"ಗಫೂರ್ ನದೀ ಹತ್ತಿರ ಬಿಡು" ಎಂದೆ ನಾನು. ಮಾರ್ಕೆಟ್

ರೋಡು ಜನ ನಿಬಿಡವಾಗಿತ್ತು. ಗಫೂರ್ ಕಾರಿನ ಹಾರ್ನನ್ನು ಪೊಂಯ್-ಪೊಂಯ್‌ಗುಟ್ಟಿಸುತ್ತಾ ಹೊರಟ. ಸಂಜೆಯಹೊತ್ತು. ಗಲಾಟೆಯೋ ಗಲಾಟೆ. ಬೀದಿಯ ದೀಪಗಳು ಬೆಳಗತೊಡಗಿದ್ದವು. ಅಂಗಡಿಗಳೆಲ್ಲ ದೀಪದ ಬೆಳಕಿನಲ್ಲಿ ನಿಗಿನಿಗಿಸುತ್ತಿದ್ದವು. ಎಲ್ಲಮ್ಮನ ಬೀದಿಯಲ್ಲಿ ಕಾರು ತಿರುಗಿತು. ಊರಿಗೇ ಅತಿ ಹಳೆಯದಾದ ಆ ಬೀದಿಯಲ್ಲಿ ಎಣ್ಣೆ ವ್ಯಾಪಾರಿಗಳು ತಲಾಂತರದಿಂದ ನೆಲೆಸಿದ್ದರು. ಮೊದಲೇ ಸಣ್ಣ ಬೀದಿ. ಜೊತೆಗೆ ಬೀದಿಯಲ್ಲಿ ಮಕ್ಕಳು ಆಡುತ್ತಿದ್ದರು. ರಸ್ತೆಯ ಮಧ್ಯದಲ್ಲಿ ಹಸುಗಳು ಮೆಲುಕುಹಾಕುತ್ತಾ ಮಲಗಿದ್ದವು. ಕತ್ತೆಗಳೂ, ನಾಯಿಗಳೂ ಅಲ್ಲಲ್ಲಿ ವಿಹರಿಸುತ್ತಿದ್ದವು. ಇವನ್ನೆಲ್ಲ ತಪ್ಪಿಸಿಕೊಂಡು ಕಾರು ಹೋಗಬೇಕಾದರೆ ಮಹಾ ಪ್ರಯಾಸ. ಎಷ್ಟೋ ವೇಳೆ ಮನೆಗಳ ಗೋಡೆಗಳಿಗೆ ತಾಗಿಕೊಂಡೇ ವಾಹನಗಳು ಓಡಾಡಬೇಕಾಗುತ್ತಿದ್ದವು. ನದೀತೀರಕ್ಕೆ ಹೋಗಲು ಬೇರೆ ದಾರಿಗಳಿದ್ದರೂ ಗಫೂರ್ ಆರಿಸುತ್ತಿದ್ದುದು ಈ ದಾರಿಯನ್ನೇ. ಆ ಜನಗಳ ಮಧ್ಯೆ ತನ್ನ ಹಾರ್ನನ್ನು ಪೊಂಯ್-ಗುಟ್ಟಿಸುವುದೆಂದರೆ ಅವನಿಗೆ ಬಲು ಇಷ್ಟ. ರಸ್ತೆಯ ಕೊನೆಯಲ್ಲಿದ್ದ ದೀಪದ ಕೆಳಗೆ ಕಾರು ನಿಂತಿತು. ಗಫೂರ್ ಬ್ರೆಕ್ ಹಾಕಿದ ಜೋರಿಗೆ ನಾವು ಕಾರಿನಿಂದ ಕೆಳಗೆ ಬೀಳಬೇಕಾಗಿತ್ತು. ಅವನೇನೋ ಇವತ್ತು ಬಹಳ ಖುಷಿಯಾಗಿದ್ದ. ಯಾವ ನಿಮಿಷಕ್ಕೆ ಅವನ ಬುದ್ಧಿ ಹ್ಯಾಗೆ ಇರುತ್ತದೆಂದು ಹೇಳುವುದೇ ಕಷ್ಟ. ಅಂತೂ ಕಾರು ನದಿಯ ತೀರವನ್ನು ಮುಟ್ಟಿತ್ತು. ಕಾರನ್ನು ಅಲ್ಲೇ ಬಿಟ್ಟು ನಾವು ತಿರುಗಾಡಲು ಹೊರಟೆವು. ಗಫೂರ್ ತುಂಟತನದ ನಗೆ ಬೀರಿ ಕಣ್ಣು ಮಿಟುಕಿಸಿದ.

ಸಂಜೆ ಸರಿದು ಕತ್ತಲಾಗುತ್ತಿತ್ತು. ಮರಳಿನ ಮೇಲೆ ಅಲ್ಲಲ್ಲಿ ಇನ್ನೂ ಜನ ಕುಳಿತಿದ್ದರು. ಮಕ್ಕಳು ಮಣ್ಣಲ್ಲಿ ಗುಬ್ಬಚ್ಚಿಗೂಡು ಕಟ್ಟುತ್ತಿದ್ದರು. ನದಿಯಲ್ಲಿ ಕೆಲವರು ಮುಳುಗುಹಾಕುತ್ತಿದ್ದರು. ದೂರದಲ್ಲಿ ನಲ್ಲಪ್ಪನ ತೋಟದ ಹತ್ತಿರ ಹಸುಗಳು ನದಿಯನ್ನು ದಾಟುತ್ತಿದ್ದವು. ತಾರೆಗಳು ಬಾನಿನಲ್ಲಿ ಮಿನುಗುತ್ತಿದ್ದವು. ತಾಲೂಕು ಆಫೀಸಿನ ಗಡಿಯಾರ ಏಳು ಹೊಡೆಯಿತು. ಸಂಜೆಯಹೊತ್ತು ದಿನವೂ ಇದೇ ನೋಟ. ನಾನೂ ಎಷ್ಟೋ ಸಲ ಇದನ್ನು ನೋಡುತ್ತಾ ಬಂದಿದ್ದೆ. ಆ ಮಕ್ಕಳು ಬೆಳೆದೇ ಇರಲಿಲ್ಲವೇ ?

ನಾನು ಕವಿಯಾಗತೊಡಗಿದ್ದೆ. ಪಕ್ಕದಲ್ಲಿದ್ದ ಸಂಗಾತಿಯ ಪ್ರಭಾವ

ಇರಬೇಕು.

"ಸಂಜೆ ಸೊಗಸಾಗಿದೆ" ಎಂದೆ.

"ಹೌದು" ಎಂದು ಮಾತ್ರ ಹೇಳಿದಳು ರೋಜಿ.

ಆಡ್ದಾಡಲು ಬಂದಿದ್ದ ಹುಡುಗರ ನೆಲೆಯನ್ನು ಬಿಟ್ಟು ದೂರಹೋಗಿ ಒಂದು ಏಕಾಂತ ಸ್ಥಳದಲ್ಲಿ ಕುಳಿತೆವು.

ಕತ್ತಲೆಯ ಹಿನ್ನೆಲೆ ನಮಗೆ ತುಂಬಾ ಒಪ್ಪಿಗೆಯಾಗಿತ್ತು. ನಾನು ಹಾಸಿದ ಕರವಸ್ತ್ರವನ್ನು ಕೈಲಿ ತೆಗೆದುಕೊಂಡು ರೋಜಿ ಮರಳಿನ ಮೇಲೆ ಕುಳಿತಿದ್ದಳು. ನಾನು ಅವಳ ಹತ್ತಿರ ಸರಿದು ಕೇಳಿದೆ.

"ಎಲ್ಲಿ, ಈಗ ಮೊದಲಿನಿಂದ ಏನೇನಾಯಿತು? ಅಂತ ಸರಿಯಾಗಿ ಹೇಳು."

ರೋಜಿ ಒಂದು ನಿಮಿಷ ಮಾತಾಡದೆ ಮೌನವಾಗಿದ್ದಳು. ಆಮೇಲೆ—

"ಅವರು ಇವೊತ್ತು ಮಧ್ಯಾಹ್ನದ ರೈಲಿನಲ್ಲಿ ಮದರಾಸಿಗೆ ಹೊರಟು-ಹೋದರು."

"ನೀನು ಯಾಕೆ ಹೋಗಲಿಲ್ಲ?"

"ಹೋಗೋದಕ್ಕೆಂತಲೇ ಬಂದೆ. ಆದರೆ ಹೋಗೋಕಾಗಲಿಲ್ಲ. ನಾವಿ-ಬ್ಬರೂ ಒಟ್ಟಾಗಿರೋದು ವಿಧಿಗೆ ಇಷ್ಟವಿಲ್ಲಂತ ಕಾಣುತ್ತೆ."

"ಏನಾಯಿತು ಹೇಳಬಾರದೇ? ಅವತ್ತು ಯಾಕೆ ಅಷ್ಟು ಕಠಿಣ-ವಾಗಿ ಮಾತಾಡಿದೆ?"

"ನಾವು ಒಬ್ಬರನ್ನೊಬ್ಬರು ಮರೆತುಬಿಟ್ಟು ನಾನು ಅವರ ಹತ್ತಿರ ಇರ-ಬೇಕಾದದ್ದೇ ಧರ್ಮವೆಂದು ತಿಳಿದು ಹಾಗೆ ಮಾತಾಡಿದೆ."

ಏನಾಯಿತು ಎನ್ನುವುದು ಹೇಗೆ ತಿಳಿದುಕೊಳ್ಳುವುದು? ಅವಳು ಅವ-ಳಾಗಿಯೇ ಹೇಳುವ ಹಾಗಿರಲಿಲ್ಲ. ನನಗೆ ಏನಾಯಿತೆನ್ನುವುದು ಮೊದಲಿನಿಂದ ಕೊನೆಯ ವರೆಗೂ ಒಂದು ಕಥೆ ಹೇಳಿದ ಹಾಗೆ ಬೇಕಾಗಿತ್ತು. ಆದರೆ ಅದನ್ನು ಹೇಳಲು ಅವಳು ಸಿದ್ಧಳಾಗಿರಲಿಲ್ಲ. ನಾನು ಅಲ್ಲಿಗೇ ಬಿಡದೆ ಮತ್ತೆ ಆರಂಭಿಸಿದೆ: "ನೋಡು ರೋಜಿ, ಈಗ ಕೇಳೋ ಪ್ರಶ್ನೆಗಳಿಗೆಲ್ಲ ಒಂದೊಂ-ದಾಗಿ ಸರಿಯಾಗಿ ಉತ್ತರ ಹೇಳು. ಆ ಹೊತ್ತು ಹೋಟೆಲಿನಿಂದ ಬೆಟ್ಟದ ಮೇಲಕ್ಕೆ ಹೋದೆವು. ನಿನ್ನನ್ನು ಅಲ್ಲಿ ಬಿಟ್ಟು ನಾನು ವಾಪಸು ಬಂದೆ.

ನಾಟ್ಯಾಭ್ಯಾಸದ ವಿಷಯ ಅವನಿಗೆ ಹೇಳಿದೆಯಾ ? ”

“ ಹೌದು, ಹೇಳಿದೆ. ಅದನ್ನು ಹೇಳೋವರೆಗೂ ಅವರು ಸಂತೋಷವಾಗಿಯೇ ಇದ್ದರು. ಆವೊತ್ತಿನ ದಿನವಾಗಲೀ ಅಥವಾ ಮಾರನೆಯ ದಿನ ಸಾಯಂಕಾಲದ ವರೆಗಾಗಲೀ ಆ ಮಾತೇ ಎತ್ತಲಿಲ್ಲ. ಅವರು ಕಂಡುಹಿಡಿದಿದ್ದ ಗುಹೆಯ ವಿಷಯಾನೇ ಹೇಳುತ್ತಿದ್ದರು. ಅವರು ಬರೆದುಕೊಂಡಿದ್ದ ಚಿತ್ರಗಳನ್ನೆಲ್ಲ ತೋರಿಸಿದರು. ಚರಿತ್ರೆಯನ್ನು ಬೇರೆ ರೀತಿ ಬರೆಯುವುದಾಗಿ ಹೇಳಿದರು. ಬರೆದುಕೊಂಡಿದ್ದ ವಿವರಗಳನ್ನೆಲ್ಲಾ ತಮ್ಮ ಪುಸ್ತಕಕ್ಕೆ ಸೇರಿಸಿ ಪ್ರಕಟಿಸುತ್ತೇನೆಂದರು. ಇಲ್ಲೀ ಕೆಲಸ ಮುಗಿದ ಮೇಲೆ ಮೆಕ್ಸಿಕೋಗೆ ಹಾಗೇ ದೂರ ಪ್ರಾಚ್ಯ ದೇಶಗಳಿಗೆ ಹೋಗಿ ಇದೇ ತರಹದ ಸಂಶೋಧನೆ ಮಾಡಿ ಆ ವಿವರಗಳನ್ನು ತಮ್ಮ ಪುಸ್ತಕಕ್ಕೆ ಸೇರಿಸುವುದಾಗಿ ಹೇಳಿದರು. ಅವರು ಹೇಳಿದ್ದೆಲ್ಲ ಅರ್ಥವಾಗದಿದ್ದರೂ ನನಗೆ ಅವರು ಮಾಡುತ್ತಿದ್ದ ಕೆಲಸದಲ್ಲಿ ಏನೋ ಉತ್ಸಾಹ ತುಂಬಿಬಂತು. ನಮ್ಮಿಬ್ಬರ ಮಧ್ಯೆ ಎದ್ದಿದ್ದ ಅಪಾರ್ಥದ ಗೋಡೆ ಕುಸಿದುಬೀಳುತ್ತಿದೆಂದು ಅನಿಸಿತು. ರಾತ್ರಿಯ ಆ ಅಂಧಕಾರದಲ್ಲಿ ನನಗೆ ಆಶಾಜ್ಯೋತಿಯ ಹೊಳಪು ಕಾಣಿಸಿತು. ಮಾರನೆಯ ದಿನ ಬೆಳಿಗ್ಗೆ ಅವರು ಕಂಡುಹಿಡಿದಿದ್ದ ಗವಿಯನ್ನು ನೋಡಿಕೊಂಡು ಬರೋದಕ್ಕೆ ಹೋದೆ. ಅಬ್ಬ! ನಿಜವಾಗಿ ಎಷ್ಟು ಭಯಂಕರವಾಗಿತ್ತು ಆ ಪ್ರದೇಶ.

“ ಇಲ್ಲಿ ಹಾವುಗಳಿರಬಹುದು ” ಎಂದೆ.

“ ಹಾಗಾದರೆ ನಿನಗೆ ಇನ್ನೂ ಸಂತೋಷವೇ ಆಗಬೇಕು ” ಎಂದರು. ನಾವು ನಕ್ಕೆವು. ಆ ಗವಿಯೊಳಗೆ ಅದೇ ಹಿಂದಿನ ಕಾಲದ ಚಿತ್ರವಿಚಿತ್ರ ರೇಖೆಗಳು. ಅವು ಸಂಗೀತಶಾಸ್ತ್ರದ ಕುರುಹು ಎಂದು ಅವರು ಏನೇನೋ ಬರೆದುಕೊಂಡರು. ನನಗೆ ಅದರ ತಲೆ-ಬಾಲ ತಿಳಿಯಲಿಲ್ಲ. ಯಾವುದೋ ರಾಯನ ಕಾಲದ ಸಂಗೀತ ವಿದ್ಯೆಯ ವಿಷಯವಿರಬೇಕು.

“ ಸಂಗೀತವಿಲ್ಲದೆ ನಾಟ್ಯದ ವಿಷಯವಾಗಿದ್ದರೆ ನಾನೂ ಪ್ರಯತ್ನಮಾಡುತ್ತ ಇದ್ದೆ ” ಎಂದೆ. ಅವರು ತಲೆಯೆತ್ತಿ ದುರುಗುಟ್ಟಿಕೊಂಡು ನೋಡಿದರು. ‘ ನಾಟ್ಯ ’ ಎಂಬ ಪದ ಕಿವಿಗೆ ಬಿದ್ದರೆ ಉರಿದುಬೀಳುತ್ತಿದ್ದರು. ನನಗೆ ಆ ವಿಷಯವನ್ನು ಮತ್ತೆ ಕೇಳುವುದಕ್ಕೆ ಭಯವಾಯಿತು. ಆದರೆ ಪುರಾತನ ಗವಿಯ ನೆಲದ ಮೇಲೆ ಕುಳಿತು ಆ ಕತ್ತಲನ್ನು ದೃಷ್ಟಿಸಿ ನೋಡಿದಾಗ

ಎಷ್ಟು ಆಸೆಯ ಹೊಂಬೆಳಕು ಮೂಡಿದ ಹಾಗಾಯಿತು. ನಾನು ಧೈರ್ಯ ಮಾಡಿ ಕೇಳಿದೆ "ನಾನು ನೃತ್ಯಮಾಡೋದಕ್ಕೆ ಒಪ್ಪಿಗೆ ಕೊಡುತ್ತೀರಾ?" ಅವರ ನಗೆಮುಖ ಮಾಯವಾಯಿತು. ಹೆಚ್ಚು ನಿಧಾನ ಮಾಡದೆ—

"ಯಾಕೆ?" ಎಂದರು.

"ನೃತ್ಯ ಮಾಡಿದರೆ ನನ್ನ ಮನಸ್ಸಿಗಾಗೋ ಆನಂದ ಅಷ್ಟಿಷ್ಟಲ್ಲ. ನೀವು ಮಾಡುತ್ತಾ ಇರೋಹಾಗೆ ನಾನೂ ಏನಾದರೂ........"

"ಓಹೋ ನನ್ನನ್ನು ಮೀರಿಸಬೇಕೂಂತಿದಿಯಾ. ಆದರೆ ಇದು ಜ್ಞಾನ-ಸಾಮ್ರಾಜ್ಯ, ಬೀದಿ ಕುಣಿತವಲ್ಲ."

"ನಾಟ್ಯ ಅಂದರೆ ಬೀದಿ ಕುಣಿತವೆಂದು ತಿಳಿದಿರೇನು?"

"ಅದೆಲ್ಲ ಚರ್ಚಿಸೋಕೆ ನಾನು ಸಿದ್ಧವಾಗಿಲ್ಲ. ನಾಟ್ಯವಂತೆ ನಾಟ್ಯ. ಅದರಲ್ಲಿ ಕಲೆಯಿದೆಯೇ, ಮಣ್ಣಿದೆಯೇ, ಬದುಕಿರುವಷ್ಟು ದಿನವೂ ಒಂದೇ ತರಹದ ಕೈ-ಕಾಲು ಬಡಿತ. ನಾವೂ ಕೋತಿಯಾಟಾನ ನೋಡುತ್ತೀವೆ ಆದರೆ ಆಟ ನೋಡೋದು ನಮಗೆ ಮುಖ್ಯವಲ್ಲ. ಕೋತೀನೇ ಮುಖ್ಯ."

ಈ ಅವಮಾನವನ್ನೆಲ್ಲ ಸಹಿಸಿಕೊಂಡೆ. ಆದರೆ ನನಗೆ ಇನ್ನೂ ಆಸೆ-ಯಿತ್ತು. ನಾನು ಮುಂದಕ್ಕೆ ಮಾತಾಡದೆ ಅವರನ್ನು ಅವರ ಕೆಲಸಮಾಡಲು ಬಿಟ್ಟೆ. ನಾಟ್ಯದ ವಿಷಯವನ್ನು ಅಲ್ಲಿಗೇ ಬಿಟ್ಟು ಬೇರೆ ವಿಷಯವೆತ್ತಿದೆ. ಅವರು ಎಂದಿನಂತೆ ಊಟವಾದ ಮೇಲೆ ರಾತ್ರೆ ಅವರು ತಮ್ಮ ಓದಿನಲ್ಲಿ ಮಗ್ನರಾದರು. ನಾನು ವರಾಂಡದಲ್ಲಿ ಪ್ರಾಣಿಗಳನ್ನು ನೋಡುತ್ತ ಕುಳಿತೆ. ಆದರೆ ಮನಸ್ಸು ಮಾತ್ರ ಬೆಳಿಗ್ಗೆ ನಡೆದ ಸಂಭಾಷಣೆ ಮೆಲುಕು ಹಾಕು-ತ್ತಿತ್ತು. ಎಷ್ಟೇ ಅವಮಾನವಾದರೂ ಕೊನೆಗೆ ಒಪ್ಪಿಬಿಟ್ಟರೆ ಎಲ್ಲಾ ಸರಿ-ಹೋಗುತ್ತದೆಂದು ಯೋಚಿಸುತ್ತಿದ್ದೆ. ನಾನು ಅಲ್ಲೇ ಕೂತಿದ್ದೆ. ಅವರು ಹಿಂದಿನಿಂದ ಬಂದು ನನ್ನ ಹೆಗಲಮೇಲೆ ಕೈಹಾಕಿದರು.

"ನಾವು ಆಗಲೇ ಒಂದು ನಿರ್ಧಾರಕ್ಕೆ ಬಂದಿದ್ದೆವು ಅಂದುಕೊಂಡಿದ್ದೆ. ಆ ವಿಷಯದ ಹೆಸರೆತ್ತೋಲ್ಲ ಎಂದು ಅಂದಿರಲಿಲ್ಲವೆ?"

ತಾಲೂಕ ಆಫೀಸಿನ ಗಡಿಯಾರ ಎಂಟು ಹೊಡೆಯಿತು. ನದಿಯ ತೀರ ಖಾಲಿಯಾಗಿತ್ತು. ಅಲ್ಲಿ ಈಗ ನಾವಿಬ್ಬರೆ. ಗಫೂರ್ ಹಾರನ್ ಸದ್ದು-ಮಾಡಿದ, ಹೊತ್ತೇನೋ ಆಗಿತ್ತು. ಆದರೆ ಮನೆಗೆ ಹೋದರೆ ರೋಜಿಗೆ

ಮಾತಾಡೋಕಾಗೋದಿಲ್ಲ. ಹೀಗಾಗಿ, "ಇವತ್ತು ರಾತ್ರಿ ಹೋಟೆಲಿನಲ್ಲಿರೋಣವೇ?" ಎಂದೆ.

"ಬೇಡ, ಮನೆಗೆ ಹೋಗೋಣ. ನಿಮ್ಮ ತಾಯಿಗೆ ವಾಪಸ್ಸು ಮನೆಗೆ ಬರುತ್ತೇವೆಂದು ಹೇಳಿದೀನಿ."

ಕೈಯಲ್ಲಿ ಹೆಚ್ಚು ಹಣವು ಇಲ್ಲದಿದ್ದುದರಿಂದ ನಾನೂ ಹೆಚ್ಚು ಬಲವಂತ ಮಾಡಲಿಲ್ಲ.

"ಸರಿ, ಹಾಗಾದರೆ ಇನ್ನೊಂದು ಅರ್ಧಗಂಟೆ ಇದ್ದು ಬಿಟ್ಟು ಹೋಗೋಣ. ಆಮೇಲೆ?"

"ಅವರು ಬಂದುನಿಂತು ಮಾತಾಡಿದಾಗ ಅವರ ಧ್ವನಿ ಅಷ್ಟು ಮೃದುವಾಗಿರುವುದನ್ನು ನೋಡಿ ನಾನು ಧೈರ್ಯವಾಗಿ ಹೆಜ್ಜೆ ಮುಂದಿಡಬಹುದೆಂದುಕೊಂಡೆ."

"ಒಂದೇ ಒಂದು ಸಣ್ಣ ನಾಟ್ಯ. ನೋಡಿಬನ್ನಿ. ಸಾಮಾನ್ಯವಾಗಿ ನಾನು ಅದನ್ನು ನನ್ನ ತಾಯಿಯ ಜ್ಞಾಪಕಾರ್ಥವಾಗಿ ಮಾಡುತ್ತೇನೆ" ಎಂದು ಅವರ ಕೈಹಿಡಿದುಕೊಂಡು ರೂಮಿಗೆ ಹೋದೆ. ದಾರಿಯಲ್ಲಿದ್ದ ಕುರ್ಚಿಯನ್ನು ಪಕ್ಕಕ್ಕೆ ಸರಿಸಿ ಅವರನ್ನು ಮಂಚದ ಮೇಲೆ ಕೂಡಿಸಿದೆ. ಅವತ್ತು ನಿಮ್ಮೆದುರಿಗೆ ಮಾಡಿದ ನೃತ್ಯವನ್ನೇ ಮಾಡಿದೆ. ನಿಮ್ಮ ಹಾಗೆಯೇ ಅವರೂ ಆ ಹಾಡಿಗೆ ಮಾರುಹೋಗುವವರೆಂದಿದ್ದೆ. ಆದರೆ ಇನ್ನೂ ಐದನೇ ಸಾಲಿನಲ್ಲಿರೋವಾಗಲೇ ಅವರು—

"ಸಾಕು ನಿಲ್ಲಿಸು ರೋಜಿ, ನಿನಗೆ ಸರಿಯಾಗಿ ಬರೋದಿಲ್ಲ-ಮಾಡೋದಿಲ್ಲ. ಆ ನಾಟ್ಯಾನ ಅಲ್ಲಿಗೇ ನಿಲ್ಲಿಸಿಬಿಡು" ಎಂದರು.

ಆದರೆ ನಾನು ಇಲ್ಲಿ ಮಾಡಬಾರದಂತಹ ತಪ್ಪು ಮಾಡಿಬಿಟ್ಟೆ. ಸುಮ್ಮನಿರದೆ—

"ನಿಮ್ಮೊಬ್ಬರಿಗೆ ಮಾತ್ರ ಹಿಡಿಸೋಲ್ಲ, ಬಾಕಿ ಎಲ್ಲಾರಿಗೂ ಹಿಡಿಸುತ್ತೆ" ಎಂದೆ.

"ಬಾಕಿ ಎಲ್ಲಾರಿಗೂ ಅಂದರೆ?"

"ಎಲ್ಲಾರೂ ಅಂದರೆ ಅದರಲ್ಲಿ ರಾಜೂನೂ ಒಬ್ಬರು."

"ರಾಜು ಅವನಿಗೋಸ್ಕರ ನಾಟ್ಯವಾಡಿದೆಯಾ?"

“ ಹೌದು. ”

“ ಎಲ್ಲಿ ? ”

“ ಈ ಹೋಟೆಲಿನಲ್ಲಿ. ”

“ ಈ ಕುರ್ಚಿಯ ಮೇಲೆ ಬಂದು ಕುಳಿತುಕೋ. ”

ನಾನು ಅಲ್ಲಿ ಕುಳಿತೆ. ರೋಗಿಯ ಪರೀಕ್ಷೆ ನಡೆಸುವ ವೈದ್ಯನ ಹಾಗೆ ನನ್ನ ಪರೀಕ್ಷೆ ನಡೆಯಿತು. ಅವರು ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರ ಹೇಳ-ಬೇಕಾಯಿತು. ನೀವು ಎಷ್ಟುಹೊತ್ತಿಗೆ ಹೋಟೆಲಿಗೆ ಬರುತ್ತಿದ್ದಿರಿ, ಎಷ್ಟು ಹೊತ್ತು ಇರುತ್ತಿದ್ದಿರಿ, ಏನು ಮಾಡುತ್ತಿದ್ದಿರಿ ಅಂತೆಲ್ಲಾ ಕೇಳಿದರು. ಎಲ್ಲಾ ಹೇಳಿಬಿಟ್ಟು ಕೊನೆಗೆ ಅತ್ತುಬಿಟ್ಟೆ. ಅಂತೂ ನಮ್ಮ ಜೀವನದ ರಹಸ್ಯ ಅವ-ರಿಗೆ ತಿಳಿಯಿತು. ಕೊನೆಗೆ ಅವರು—

“ ಆ ಹೋಟೆಲು ಇಂತಹ ಉದ್ರಿಕ್ತ ಕಲಾಪ್ರೇಮಿಗಳ ತವರುಮನೆ ಅಂತ ತಿಳಿದಿರಲಿಲ್ಲ. ಜನಕ್ಕೆ ಮಾನ–ಮರ್ಯಾದೆ ಇರುತ್ತೆ ಅಂತ ತಿಳ-ಕೊಂಡಿದ್ದು ನಂದೇ ತಪ್ಪಾಯಿತು ” ಎಂದರು. ರಾತ್ರಿಯೆಲ್ಲಾ ಹಾಗೆ ಕುಳಿ-ತಿದ್ದೆವು. ಹಾಸಿಗೆಯ ಮೇಲೆ ಅವರು, ಕುರ್ಚಿಯ ಮೇಲೆ ನಾನು. ನನಗೆ ತುಂಬಾ ನಿದ್ದೆ ಬಂತು. ಹಾಗೆ ಕುರ್ಚಿಯ ಮಗ್ಗುಲಲ್ಲಿದ್ದ ಟೇಬಲ್ಲಿನ ಮೇಲೆ ತಲೆಯಿಟ್ಟುಕೊಂಡು ನಿದ್ದೆಹೋದೆ. ಬೆಳಿಗ್ಗೆ ಎದ್ದಾಗ ಅವರು ಗುಹೆಗೆ ಹೊರಟುಹೋಗಿದ್ದರು.

ಜೋಸೆಫ್ ನನಗೋಸ್ಕರ ಒಂದಿಷ್ಟು ಕಾಫಿ ಇಟ್ಟುಹೋಗಿದ್ದ. ಅದನ್ನು ಕುಡಿದು ಬಟ್ಟೆ ಬದಲಾಯಿಸಿ ಅವರನ್ನು ಹುಡುಕಿಕೊಂಡು ಹೋದೆ. ನನ್ನ ಜೀವನದಲ್ಲೇ ಅತಿ ದೊಡ್ಡದಾದ ತಪ್ಪು ಆಡಿಬಿಟ್ಟಿದ್ದೆ. ಧರ್ಮದ ದಾರಿಯಿಂದ ಸರಿದಿದ್ದೆ. ಕನಸಿನಲ್ಲಿದ್ದವಳ ಹಾಗೆ ಬೆಟ್ಟವಿಳಿದು ಗುಹೆಯ ಹತ್ತಿರ ಹೋದೆ. ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಅವರ ಕ್ಷಮೆಯೊಂದು ಬಿಟ್ಟು ನನಗೆ ಬೇರೆ ಯಾವುದೂ ಬೇಕಾಗಿರಲಿಲ್ಲ. ನನಗೆ ಹೆದರಿಕೆಯಾಗುತ್ತಿತ್ತು. ಹಾಸಿಗೆಯ ಮೇಲೆ ಕೂತಿದ್ದನ್ನು ನೆನೆಸಿಕೊಂಡರೆ ಈಗಲೂ ಅಯ್ಯೋ ಪಾಪ ಎನ್ನಿಸುತ್ತೆ. ಆ ಸ್ಥಿತಿಯಲ್ಲಿ ನನ್ನೆದುರಿಗೆ ಹುಲಿಯೇ ಬಂದಿದ್ದರೂ ನನಗೆ ಗೊತ್ತಾಗುತ್ತಿರಲಿಲ್ಲ. ಗುಹೆಯಲ್ಲಿ ಎಂದಿನ ಹಾಗೆ ಸ್ಟೂಲಿನ ಮೇಲೆ ಕುಳಿತು ಚಿತ್ರಗಳನ್ನು ಬರೆದು-ಕೊಳ್ಳುತ್ತಾ ಇದ್ದರು ನಾನು ಗುಹೆಯ ಬಾಗಿಲ ಹತ್ತಿರ ನಿಂತುಕೊಂಡಾಗ

ಬೆಳಕು ಒಳಗೆ ಬರುವುದಕ್ಕಾಗದೆ ಕತ್ತಲೆಯಾಯಿತು. ಅವರು ಹಿಂದೆ ತಿರುಗಿ ನನ್ನನ್ನು ನೋಡಿದರು. ನಾನು ಜೈಲಿನ ಕಟಕಟೆಯ ಹಿಂದೆ ನಿಲ್ಲುವ ಖೈದಿಯ ಹಾಗೆ ಅಲ್ಲಿ ನಿಂತು—

"ತಪ್ಪುಮಾಡಿದೆ, ಕ್ಷಮಿಸಲಾರದಂತಹ ತಪ್ಪುಮಾಡಿದ್ದೀನಿ. ಆದರೂ ನನ್ನನ್ನು ಕ್ಷಮಿಸಿಬಿಡಿ. ನಿಮ್ಮ ಕಾಲು ಹಿಡಿದು ಬೇಡಿಕೊಳ್ಳುತ್ತೇನೆ" ಎಂದೆ.

"ಆದರೆ ಅವರು ಒಂದು ಮಾತೂ ಆಡದೆ ಚಿತ್ರಗಳನ್ನು ಮತ್ತೆ ಬರೆದು-ಕೊಳ್ಳಲಾರಂಭಿಸಿದರು. ಕೆಲಸ ಮುಗಿದ ಮೇಲೆ ತಮ್ಮ ಸಾಮಾನುಗಳನ್ನು ತೆಗೆದುಕೊಂಡು ಹೊರಟುಬಿಟ್ಟರು. ತಾವು ಒಬ್ಬರೇ ಇದ್ದಹಾಗೆ ಮುಂದೆ ನಡೆದರು. ನಾನು ಅಲ್ಲಿ ಸುಮಾರು ಮೂರು ಘಂಟೆ ನಿಂತಿದ್ದೆ. ಗೋಡೆಯ ಮೇಲಿದ್ದ ಚಿತ್ರಗಳ ಅಳತೆ ಮಾಡಿದರು, ಬರೆದುಕೊಂಡರು. ಟಾರ್ಚ ತೆಗೆದುಕೊಂಡು ಮತ್ತೆ ಮತ್ತೆ ಪರೀಕ್ಷಿಸಿ ನೋಡಿದರು. ಆದರೆ ನನ್ನ ಕಡೆ ತಿರುಗಿ ಸಹ ನೋಡಲಿಲ್ಲ. ಕೆಲಸ ಮುಗಿದ ಮೇಲೆ ಬಂಗಲೆಗೆ ಹಿಂತಿರುಗಿ-ದಾಗ ನಾನು ಅವರನ್ನು ಹಿಂಬಾಲಿಸಿದೆ. ಅವರು ಮುಂದೆ, ನಾನು ಹಿಂದೆ. ಆಗಲೇ ಎದುರಿಗೆ ನೀವು ಬಂದಿರಿ. ನಾನು ಅವರ ರೂಮಿಗೆ ಹೋಗಿ ಮಂಚದ ಮೇಲೆ ಕುಳಿತೆ. ಕುರ್ಚಿಯಲ್ಲಿ ಅವರು ಮಾತಿಲ್ಲ, ಕತೆಯಿಲ್ಲ. ನೀವು ಮತ್ತೆ ರೂಮಿಗೆ ಬಂದಿರಿ. ನೀವು ಹೊರಟುಹೋಗಿ ಎಂದದ್ವರಲ್ಲಿ ನಾವು ಮತ್ತೆ ಒಂದಾಗಬೇಕೆಂಬುದೇ ನನ್ನ ಮನಸ್ಸಿನ ಆಶಯವಾಗಿತ್ತು....ದಿನಬೆಳಗಾದರೆ ಇದೇ ಪುರಾಣ. ಆದರೂ ನನಗಿನ್ನೂ ನಿರಾಸೆಯಾಗಿರಲಿಲ್ಲ. ನಾನು ಮುಟ್ಟಿದ ಅಡುಗೆಯನ್ನು ಊಟಮಾಡುತ್ತಿರಲಿಲ್ಲ. ಅದರಿಂದ ಜೋಸೆಫ್‌ನನ್ನೇ ಬಡಿಸೋ-ದಕ್ಕೆ ಹೇಳುತ್ತಿದ್ದೆ. ನಾನೊಬ್ಬಳೇ ಅಡುಗೆಮನೆಯಲ್ಲಿ ಕುಳಿತು ಊಟ-ಮಾಡುತ್ತಿದ್ದೆ. ನಾನು ಹಾಸಿಗೆಯ ಮೇಲೆ ಮಲಗಿದರೆ, ಅವರು ಕೆಳಗೆ ಮಲಗುತ್ತಿದ್ದರು. ಅದಕ್ಕೋಸ್ಕರ ನಾನೇ ಕೆಳಗೆ ಮಲಗಿಕೊಂಡೆ. ಅವರು ನನ್ನ ಕಡೆ ನೋಡುತ್ತಲೂ ಇರಲಿಲ್ಲ. ಮಾತಂತೂ ಮೊದಲೇ ಇಲ್ಲ. ಜೋಸೆಫ್‌ನ ಜೊತೆ ಏನೋ ಏರ್ಪಾಟು ಮಾಡಿಕೊಂಡು ಒಂದೆರಡು ಸಲ ಊರಿಗೆ ಹೋಗಿಬಂದರು. ಸರಿ ಬಾಕಿ ಎಲ್ಲಾ ಯಥಾಪ್ರಕಾರ. ನಾನು ಇರು-ವುದೇ ಅವರಿಗೆ ಮರೆತುಹೋಯಿತು. ಆದರೆ ನಾನು ಮಾತ್ರ ಅವರ ಹಿಂದೆ ನಾಯಿಯ ಹಾಗೆ ಹೋಗುತ್ತಿದ್ದೆ. ಕ್ಷಮಿಸಿದರೆ ಸಾಕು ಎನಿಸಿತ್ತು. ಆದರೆ

ನನ್ನನ್ನು ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ. ಹಾಗೇ ಇರೋದಕ್ಕೆ ಹೇಗೆ ಸಾಧ್ಯವಾಯಿತೋ ದೇವರೇ ಬಲ್ಲ. ಅಂತೂ ನನ್ನ ಆತ್ಮಾಭಿಮಾನವನ್ನೆಲ್ಲಾ ಮೂಲೆಗೊತ್ತಿ ನಾನು ಅವರನ್ನು ನೆರಳಿನ ಹಾಗೆ ಹಿಂಬಾಲಿಸುತ್ತಿದ್ದೆ. ಕೊನೆ-ಗಾದರೂ ಕ್ಷಮಿಸುತ್ತಾರೆಂದುಕೊಂಡಿದ್ದೆ. ರೂಮಿನಲ್ಲಾಗಲೀ, ಗುಹೆಗಳ-ಲ್ಲಾಗಲೀ ಒಂದು ನಿಮಿಷವೂ ಅವರನ್ನು ಬಿಟ್ಟಿರುತ್ತಿರಲಿಲ್ಲ. ಆ ಕತ್ತಲ ಗವಿಯಲ್ಲಿ ಮಾತೇ ಇಲ್ಲದೆ ದಿನ ಕಳೆಯುವುದಕ್ಕಿಂತ ಬೇರೆ ಶಿಕ್ಷೆ ಬೇಕೇ? ನಾನು ಮೂಕೆಯಾಗಿಹೋಗಿದ್ದೆನೇನೋ ಎನ್ನಿಸಿತ್ತು. ಜೋಸೆಫ್ ಸಿಕ್ಕಿ-ದಾಗ ಮಾತ್ರ ಒಂದೊಂದು ಮಾತಾಡುತ್ತಿದ್ದೆ. ಆದರೆ ಅವನೂ ಹೆಚ್ಚು ಮಾತಾಡುತ್ತಿರಲಿಲ್ಲ. ಮೂರು ವಾರ ಕಳೆಯಿತು. ಇನ್ನು ತಡೆಯೋದಕ್ಕೆ ನನ್ನಿಂದ ಸಾಧ್ಯವೇ ಇರಲಿಲ್ಲ. ಒಂದು ದಿನ ಅವರು ಊಟಮಾಡುತ್ತಿರು-ವಾಗ ನಾನೇ ಕೇಳಿದೆ :

"ಈಗ ಕೊಟ್ಟಿರೋ ಶಿಕ್ಷೆ ಸಾಲದೆ?"

ನನ್ನ ಧ್ವನಿಯನ್ನು ಕೇಳಿ ಅವರು ಬೆಚ್ಚಿದರು.

"ಇದೇ ಕೊನೆಯ ಸಲ ಹೇಳುತ್ತಾ ಇದೀನಿ. ನನ್ನ ಹತ್ತಿರ ಮಾತಾಡ-ಬೇಡ. ಏನು ಬೇಕೋ ಮಾಡು, ಎಲ್ಲಿಗೆ ಬೇಕೋ ಹೋಗು."

"ನಿಮ್ಮ ಜೊತೆ ಇರೋದು ಬಿಟ್ಟು ನನಗಿನ್ನೇನೂ ಬೇಡ. ಈಗ ಆಗಿರೋದನ್ನೆಲ್ಲ ಮರೆತುಬಿಡಿ."

"ಓಹೋ, ಮರೆತುಬಿಟ್ಟಿದ್ದೇನೆ. ನನಗೆ ಹೆಂಡತಿ ಇದ್ದಾಳೆ ಅನ್ನೋ ವಿಷಯಾನ ಸಹ ಮರೆತುಬಿಟ್ಟಿದ್ದೇನೆ. ಈ ಸ್ಥಳಾನೂ ಮರೆತುಬಿಡಬೇಕು ಅಂತಿದ್ದೇನೆ. ಆದರೆ ನನ್ನ ಕೆಲಸ ಮುಗಿಯೋತನಕ ಇಲ್ಲಿರಬೇಕು. ವಿಧಿ-ಯಿಲ್ಲ. ಆದರೆ ನಿನಗೇನೂ ಅಂತಹ ಕಟ್ಟುಪಾಡು ಇಲ್ಲವಲ್ಲ. ಎಲ್ಲಿಗೆ ಬೇಕೋ ಅಲ್ಲಿಗೆ ಹೋಗು."

"ನಾನು ನಿಮ್ಮ ಹೆಂಡತಿ ನಿಮ್ಮ ಜೊತೆ ಇದೀನಿ."

"ನಾನು ಸಭ್ಯ ಮನುಷ್ಯನಾಗಿರೋ ಹೊತ್ತಿಗೆ ಇದೀಯಾ. ಆದರೆ ನೀನು ನನ್ನ ಹೆಂಡತಿಯಲ್ಲ. ನಿನ್ನ ಬೀದಿ ಕುಣಿತಾನ ಯಾರು ಹೊಗಳಿದರೆ ಅವರ ಜೊತೆ ಮಲಗೋಳು ನೀನು. ನೀನು ಇಲ್ಲಿರೋದು ಖಂಡಿತ ನನಗೆ ಬೇಕಾಗಿಲ್ಲ. ಆದರೆ ನೀನು ಇಲ್ಲಿ ಇರೋಹಾಗಿದ್ದರೆ ನನ್ನ ಹತ್ತಿರ ಮಾತಾಡ-ಬೇಡ."

“ ನನಗೆ ದುಃಖ ಉಕ್ಕಿಬಂತು. ಡೆಸ್ಡಿಮೋನಳ ( Desdimona ) ವಿಚಾರದಲ್ಲಿ ಓಥೇಲೋ ಬೇಕಾದರೂ ಇನ್ನೂ ಸ್ವಲ್ಪ ಕರುಣೆಯಿಂದ ನಡ-ಕೊಂಡನೇನೋ. ಆದರೂ ನಾನು ಅದನ್ನೆಲ್ಲಾ ಸಹಿಸಿಕೊಂಡೆ. ಕೊನೆಗೆ ಎಲ್ಲಾ ಸರಿಹೋಗುತ್ತೆಂಬ ಹುಚ್ಚು ಆಸೆಯಿಂದ ಸಹಿಸಿಕೊಂಡೆ ಕೊನೆಗೆ ಅವರು ನನ್ನನ್ನು ಕ್ಷಮಿಸುತ್ತಾರೆಂಬ ನಂಬಿಕೆಯಿಂದ ಸಹಿಸಿಕೊಂಡೆ. ಈ ಸ್ಥಳವನ್ನು ಬಿಟ್ಟು ಹೊರಟುಹೋದರೆ ಎಲ್ಲಾ ಸರಿಯಾಗಬಹುದೆಂದು-ಕೊಂಡೆ

ಒಂದು ದಿನ ಅವರು ಪೆಟ್ಟಿಗೆಗೆ ಬಟ್ಟೆ–ಬರೆ ತುಂಬುವುದಕ್ಕೆ ಆರಂಭಿ-ಸಿದ್ದರು. ನಾನೂ ಸಹಾಯ ಮಾಡೋಣವೆಂದು ಹೋದೆ. ಆದರೆ ಅವರು ನನ್ನನ್ನು ಹತ್ತಿರ ಕೂಡ ಸೇರಿಸಲಿಲ್ಲ, ತಾವೇ ಎಲ್ಲ ಕಟ್ಟಿದರು. ನಾನು ನನ್ನ ಸಾಮಾನು ಕಟ್ಟಿದೆ. ಗಫೂರನ ಕಾರು ಬಂತು. ನಾವಿಬ್ಬರೂ ಹೋಟೆಲಿಗೆ ಬಂದೆವು. ಅದೇ ಇಪ್ಪತ್ತೆಂಟನೆಯ ರೂಮು. ಆ ರೂಮು ವಿಷಮಯವಾಗಿ ಕಂಡಿತು. ಒಂದು ದಿನವಿದ್ದು ಲೆಕ್ಕಾಚಾರವನ್ನು ತೀರಿಸಿದರು. ಮಧ್ಯಾಹ್ನದ ರೈಲಿನ ಹೊತ್ತಿಗೆ ತಮ್ಮ ಸಾಮಾನು ತೆಗೆದುಕೊಂಡು ಸ್ಟೇಷನ್ನಿಗೆ ಹೋದರು. ನಾನೂ ಅವರ ಹಿಂದೆ ಹೋದೆ. ಸದ್ಯ ಮತ್ತೆ ಊರಿಗೆ ಹೋಗೋ ದಿನ ಬಂತಲ್ಲ ಕೂಲಿಯವನು ನಮ್ಮ ಸಾಮಾನು ಹೊತ್ತುಕೊಂಡು ನಡೆದ. ಆದರೆ ಅವರು ನನ್ನ ಸಾಮಾನಿನ ಕಡೆಗೆ ಕೈತೋರಿಸಿ ‘ ಅವು ನನ್ನವಲ್ಲ ’ ಎಂದರು. ಕೂಲಿಯವನು ಒಂದು ನಿಮಿಷ ನೋಡಿ ನನ್ನ ಪೆಟ್ಟಿಗೆಯನ್ನು ಕೆಳ-ಗಿಟ್ಟುಬಿಟ್ಟ. ರೈಲು ಬಂದಿತು. ಕೂಲಿಯವನ ಕೈಲಿ ತಮ್ಮ ಪೆಟ್ಟಿಗೆಯನ್ನು ಹೊರಿಸಿಕೊಂಡು ಅವರು ರೈಲು ಹತ್ತಿದರು. ನನಗೆ ಏನು ಮಾಡುವುದಕ್ಕೂ ತೋಚಲಿಲ್ಲ. ನನ್ನ ಪೆಟ್ಟಿಗೆಯನ್ನು ತೆಗೆದುಕೊಂಡು ಅವರ ಹಿಂದೆ ಹೋದೆ. ಅವರು ಕೂತಿದ್ದ ಕಂಪಾರ್ಟ್‌ಮೆಂಟ್ ಹತ್ತಬೇಕೆಂದುಕೊಂಡಿರುವಾಗ ಅವರು—

‘ ನಾನು ನಿನಗೆ ಟಿಕೇಟು ತೆಗೆದುಕೊಂಡಿಲ್ಲ ’ ಎಂದು ಬಾಗಿಲು ಅಗಳಿ ಹಾಕಿಕೊಂಡುಬಿಟ್ಟರು. ರೈಲು ಹೊರಟಿತು. ನಾನು ನಿಮ್ಮ ಮನೆಗೆ ಬಂದೆ. ”

ರೋಜಿ ಸ್ವಲ್ಪ ಹೊತ್ತು ಅತ್ತಳು. ನಾನು ಅವಳ ಬೆನ್ನು ಸವರಿ

ಸಮಾಧಾನ ಮಾಡಿದೆ.

"ಅಳೋದಕ್ಕೇನಾಗಿದೆ? ನಿನಗೆ ತಕ್ಕಂತಹ ಸ್ಥಳದಲ್ಲಿದ್ದೀಯೇ. ಹಿಂದೆ ಆಗಿರೋದನ್ನೆಲ್ಲಾ ಮರೆತುಬಿಡು. ಆ ಮೃಗಕ್ಕೆ ಬುದ್ಧಿ ಕಲಿಸೋ ಕಾಲಾನೂ ಬರುತ್ತೆ. ಜನ ನಿನ್ನಂತಹ ಭರತನಾಟ್ಯ ವಿಶಾರದೆ ಪ್ರಪಂಚದಲ್ಲೇ ಇಲ್ಲ ಅಂತ ಹೇಳೋ ಹಾಗೆ ಮಾಡುತ್ತೀನಿ; ನೋಡುತ್ತಾ ಇರು."

ಅಮ್ಮನಿಗೆ ನಮ್ಮ ಕತೆ ಅರ್ಥವಾಗೋದಕ್ಕೆ ಬಹಳ ದಿನ ಹಿಡಿಯಲಿಲ್ಲ. ಒಂದು ದಿನ ರೋಜಿ ಸ್ನಾನಮಾಡೋದಕ್ಕೆ ಹೋಗಿರುವಾಗ ನನ್ನನ್ನು ಕರೆದಳು.

"ರಾಜು, ಇದು ಹೀಗೇ ನಡೆಯೋದು ಸಾಧ್ಯವಿಲ್ಲ. ನೀನಿದನ್ನು ನಿಲ್ಲಿಸಲೇಬೇಕು."

"ಅಮ್ಮಾ, ನೀನು ಇದಕ್ಕೆಲ್ಲಾ ತಲೆ ಹಾಕಬೇಡ. ನನಗೂ ಕತ್ತೆಗೆ ಬಂದಹಾಗೆ ವಯಸ್ಸು ಬಂದಿದೆಯೆಂದು ತಿಳಿದುಕೊಂಡಿದಿಯಾ? ಏನು ಮಾಡಬೇಕು, ಏನು ಮಾಡಬಾರದು ಅಂತ ನನಗೆ ಗೊತ್ತು."

"ಕುಣಿಯೋ ಹೆಂಗಸನ್ನು ಕರೆದುಕೊಂಡು ಬಂದು ಮನೇಲಿ ಇಟ್ಟು-ಕೊಂಡಿದ್ದೀಯಲ್ಲ! ಬೆಳಗಿನಿಂದ ಸಂಜೇತನಕ ಹೀಗೆ ಧಬಧಬ ಕುಣೀತಾ ಇದ್ದರೆ ಮನೆ ಉದ್ಧಾರವಾದ ಹಾಗೇ ಇದೆ."

ನನ್ನ ಪ್ರೋತ್ಸಾಹವನ್ನೇ ಅವಲಂಬಿಸಿ ರೋಜಿ ಮನೆಯಲ್ಲೇ ನಾಟ್ಯಾ-ಭ್ಯಾಸ ಪ್ರಾರಂಭಿಸಿದ್ದಳು. ಬೆಳಿಗ್ಗೆ ಐದು ಘಂಟೆಗೆ ಎದ್ದು, ಸ್ನಾನಮಾಡಿ ಗೂಡಿನಲ್ಲಿದ್ದ ದೇವರಿಗೆ ನಮಸ್ಕಾರವೊಂದು ಹಾಕಿ ಅಭ್ಯಾಸಕ್ಕೆ ಪ್ರಾರಂಭಿ ಸುತ್ತಿದ್ದಳು. ಐದೂವರೆ ಆರು ಘಂಟೆಗೆ ಆರಂಭಿಸಿದಳೆಂದರೆ ಮೂರು ಘಂಟೆ ಹೊತ್ತು ಅವ್ಯಾಹತವಾಗಿ ಸಾಗುತ್ತಿತ್ತು. ಅವಳ ಕಾಲಿನ ಝುಣಝುಣವನ್ನು ಮನೆಗೆ ಮನೆಯೇ ಪ್ರತಿಧ್ವನಿಸುತ್ತಿತ್ತು. ನಾಟ್ಯ ಮಾಡಲಾರಂಭಿಸಿದಾಗ ಅವಳಿಗೆ ಸುತ್ತಲಿನ ಪ್ರಪಂಚದ ಅರಿವೇ ಇರುತ್ತಿರಲಿಲ್ಲ. ಆಮೇಲೆ ನಮ್ಮ ಅಮ್ಮನಿಗೆ ಕೆಲಸದ ಸಹಾಯ ಮಾಡುತ್ತಿದ್ದಳು. ಗುಡಿಸುವುದು, ಸಾರಿ-ಸುವುದು, ಮನೆಯನ್ನು ಓರಣವಾಗಿಡುವುದು ಇತ್ಯಾದಿ ಇತ್ಯಾದಿ. ಅಮ್ಮ-ನಿಗೂ, ರೋಜಿಗೂ ಹೊಂದಿಕೊಂಡು ಹೋಗಿದೆಯೆಂದೇ ನಾನು ತಿಳಿದು-ಕೊಂಡಿದ್ದೆ. ಆದರೆ ಅಮ್ಮ ನನ್ನೆದುರಿಗೊಂದು ಸಮಸ್ಯೆಯನ್ನು ತಂದಿಡುವ-

ಳಿಂದುಕೊಂಡಿರಲಿಲ್ಲ. ಅಮ್ಮನ ಮಾತನ್ನು ಕೇಳಿ ನನಗೆ ಆಶ್ಚರ್ಯವಾಯಿತು.

"ಅಮ್ಮಾ, ಇದೇನಮ್ಮಾ ಹೀಗೆ ಮಾತನಾಡುತ್ತಾ ಇದೀಯಾ ?"

"ನಿನಗೆ ಬುದ್ಧಿ ಬರುತ್ತೇನೋ ಅಂತ ಇಷ್ಟು ದಿನಾನೂ ಕಾದೆ. ಆದರೆ ನೀನೇನೂ ಇದನ್ನ ಮನಸ್ಸಿಗೆ ಹಚ್ಚಿಕೊಂಡಿರೋ ಹಾಗೆ ಕಾಣೋಲ್ಲ. ಹೀಗೆ ಆದರೆ ಜನ ಏನೆಂದಾರು?"

"ಜನ ಅಂದರೆ ಯಾರು?"

"ಯಾರು ಅಂದರೆ ನಮ್ಮಣ್ಣ, ಅವನ ಮಕ್ಕಳು, ಅವನಿಗೆ ತಿಳಿದಿರೋರು."

"ಸರಿ, ಸರಿ ಅವರು ಹೇಳಿದರು. ನೀನು ಕೇಳಿದೆ. ಅದಕ್ಕೆಲ್ಲಾ ನಾನು ಮೂರು ಕಾಸಿನ ಬೆಲೇನೂ ಕೊಡೋದಿಲ್ಲ ತಿಳೀತೇ?"

"ವಿಚಿತ್ರವಾಗಿದೆಯಪ್ಪ ನೀನು ಹೇಳೋದು. ಆದರೆ ನನಗಿದನ್ನು ಹೆಚ್ಚು ದಿನ ಸಹಿಸುವುದಕ್ಕೆ ಆಗೋದಿಲ್ಲ."

ಬಚ್ಚಲು ಮನೆಯಿಂದ ತೇಲಿಬರುತ್ತಿದ್ದ ಸಂಗೀತ ಮೆಲ್ಲನೆ ನಿಂತಿತು. ಅಮ್ಮನ ಮಾತೂ ನಿಂತಿತು. ಆಗ ತಾನೇ ಸ್ನಾನಮಾಡಿ ಅರಳಿರುವ ಕಮಲದ ಮೊಗ್ಗಿನ ಹಾಗೆ ಹೊರಗೆ ಬಂದಳು. ಅವಳನ್ನು ನೋಡಿದವರು ಯಾರೂ ಅವಳಿಗೆ ಚಿಂತೆಯೆಂದರೇನೆಂದೇ ತಿಳಿದಿಲ್ಲವೆನ್ನಬಹುದಾಗಿತ್ತು. ಅವಳಿಗೆ ತನ್ನ ಹಿಂದಿನ ಜೀವನದ ನೆನಪು ಸಂಪೂರ್ಣವಾಗಿ ಮರೆತುಹೋಗಿತ್ತು. ಅವಳ ಕಣ್ಣು ಮುಂದೆ ಕುಣಿಯುತ್ತಿದ್ದುದೆಲ್ಲ ಭವಿಷ್ಯದ ನಾಟ್ಯಜೀವನ. ಅಮ್ಮನೆಂದರೆ ಅವಳಿಗೆ ಅಚ್ಚುಮೆಚ್ಚು.

ಆದರೆ ಅಮ್ಮ ಮೇಲುನೋಟಕ್ಕೆ ಮೃದುವಾಗಿದ್ದರೂ ಒಳಗೆ ಕಲ್ಲಿನಂತಾಗಿದ್ದಳು. ಅವರಿವರ ಬಾಯಿಮಾತಿಗೆ ಸಿಕ್ಕಿ ಹೊಸಲುದಾಟದ ಹೆಣ್ಣಿನ ಕೂಡ ಸಂಸಾರ ಮಾಡುವುದು ಅವಳಿಗೆ ಅಸಹ್ಯವಾಗತೊಡಗಿತ್ತು. ಆದರೆ ನಾನು ಒಬ್ಬನೇ ಸಿಕ್ಕಿದಾಗಲೆಲ್ಲ ಅಮ್ಮ "ನಿಜವಾಗಿಯೂ ಅವಳು ಹಾವಾಡಗಿತ್ತಿಯೇ. ಇಲ್ಲದೆಹೋದರೆ ನಿನ್ನ ಮುಖಕ್ಕೆ ಮಂಕುಬೂದಿ ಎರಚೋ ಈ ಮಂತ್ರವಿದ್ಯೆ ಎಲ್ಲಿ ಬರುತ್ತಿತ್ತು? ನಾನು ಮೊದಲೇ ಹೇಳಿದೆ" ಎನ್ನದೆ ಬಿಡುತ್ತಿರಲಿಲ್ಲ.

ನನಗೆ ಅಮ್ಮನ ನಡೆ-ನುಡಿಯಿಂದ ಭಯವಾಗುತ್ತಿತ್ತು. ರೋಜಿ-

ಯೇನೋ ನಿಶ್ಚಿಂತೆಯಾಗಿದ್ದಳು. ಆದರೆ ಅಮ್ಮ ರೋಜಿಗೆ ನೇರವಾಗಿ ಮನೆ ಬಿಟ್ಟುಹೋಗು ಎಂದು ಹೇಳಿದರೆ? ನಾನು ಅಮ್ಮನಿಗೆ ಎದುರು ಉತ್ತರ ಹೇಳುವುದನ್ನು ಬಿಟ್ಟು ಸ್ವಲ್ಪ ನಯವಾದ ಮಾರ್ಗವನ್ನು ಅನುಸರಿಸಿದೆ.

"ನೀನು ಹೇಳೋದೇನೋ ಸರಿ ಅಮ್ಮಾ. ಆದರೆ ಪಾಪ ಕಷ್ಟಕಾಲದಲ್ಲಿ ಬಂದಿದ್ದಾಳೆ. ಹೊರಟುಹೋಗು ಅಂತ ಹೇಳೋದಕ್ಕೆ ಆಗುತ್ತೆಯೇ?"

"ಇವಳು ತಾನೆ ಹೋಗಿ ಅವನ ಕಾಲಿಗೆ ಬೀಳಬಾರದೆ? ಗಂಡನ ಜೊತೆ ಸಂಸಾರ ಮಾಡೋದು ಅಂದರೆ ಹುಡುಗಾಟವಲ್ಲ. ಮುಖಕ್ಕೆ ಒಂದಿಷ್ಟು ಸುಣ್ಣ, ತುಟಿಗೊಂದಿಷ್ಟು ಬಣ್ಣ ಬಳಿದುಕೊಂಡುಬಿಟ್ಟರೆ ಗಂಡ ಅನ್ನಿಸಿಕೊಂಡೋನು ಮೆಚ್ಚಿಬಿಡೋದಿಲ್ಲ. ನಿಮ್ಮ ತಂದೆ…………" ಅಪ್ಪ ಹ್ಯಾಗೆ ಒಂದು ಸಲ ಮೊಂಡುಹಿಡಿದು ಕೂತರೆಂದೂ, ಅದನ್ನು ತಾನು ಹೇಗೆ ಜಾಣತನದಿಂದ ಎದುರಿಸಿದಳೆಂದೂ ಹೇಳತೊಡಗಿದಳು. ನಾನು ಬಹಳ ಉತ್ಸಾಹದಿಂದ ಕೇಳಿದೆ. ಇದರಿಂದ ಒಂದು ನಿಮಿಷವಾದರೂ ಅಮ್ಮನ ಮನಸ್ಸಿನಿಂದ ರೋಜಿ ದೂರವಾಗಿದ್ದಳು. ಆಮೇಲೆ ರೋಜಿಯ ಹತ್ತಿರ ಮಾತಾಡಬೇಕಾದಾಗಲೆಲ್ಲ ಅಮ್ಮ ಗಂಡ–ಹೆಂಡಿರ ಸಂಬಂಧದ ವಿಷಯ ಏನಾದರೂ ಮಾತೆತ್ತದೆ ಇರುತ್ತಿರಲಿಲ್ಲ. ಒಳ್ಳೆಯ ಗಂಡಂದಿರು, ಕೆಟ್ಟವರು, ಹುಚ್ಚರು, ಮೊಂಡರು, ಕಟುಕರು……..ಇನ್ನೂ ನೂರಾರು ವಿಧದ ಗಂಡಂದಿರ ಕತೆಗಳನ್ನೆಲ್ಲ ಹೇಳಿ ಮುಗಿಸಿದಳು. ಆದರೆ ಪ್ರತಿಯೊಂದು ಕತೆಯಲ್ಲೂ ಹೆಂಡತಿ ತನ್ನ ಸದ್ಗುಣಗಳಿಂದ ಅವನನ್ನು ಪರಿವರ್ತಿಸುತ್ತಿದ್ದಳು. ಸೀತೆ, ಸಾವಿತ್ರಿಯರೂ ಕತೆಯೊಳಕ್ಕೆ ನುಸುಳುತ್ತಿದ್ದರು. ಈ ಕತೆಗಳೆಲ್ಲ ಕತೆಗಳೇ ಆಗಿದ್ದರೂ ಅಮ್ಮ ಅವನ್ನು ರೋಜಿಯ ಹತ್ತಿರ ಹೇಳುವ ಉದ್ದೇಶ್ಯದ ಅರಿವಾಗದಿರಲಿಲ್ಲ. ಅಮ್ಮನೇನೋ ತನ್ನ ಕತೆಯ ಉದ್ದೇಶ್ಯ ಯಾರಿಗೂ ತಿಳಿಯುವುದಿಲ್ಲವೆಂದುಕೊಂಡಿದ್ದಳು. ಆದರೆ ಕತೆಗಳ ನೀತಿಗಳನ್ನು ಕೇಳಿ ರೋಜಿಯ ಮನಸ್ಸು ಹೇಗೆ ಮುದುಡಿಕೊಳ್ಳುತ್ತಿತ್ತು ಎಂಬುದನ್ನು ನಾನು ನೋಡಿದ್ದೆ. ಆದರೆ ಏನನ್ನೂ ಮಾಡುವ ಸ್ಥಿತಿಯಲ್ಲಿರಲಿಲ್ಲ. ನನಗೆ ಅಮ್ಮನ ಹೆದರಿಕೆ. ರೋಜಿಯನ್ನು ಹೋಟೆಲಿನಲ್ಲಿ ಇಳಿಸಬಹುದಾಗಿತ್ತು. ಆದರೆ

ನನ್ನ ಖಜಾನೆ ಬರಿದಾಗುತ್ತಿರುವುದು ನನ್ನ ಗಮನಕ್ಕೆ ಬಾರದೆ ಇರುತ್ತಿರಲಿಲ್ಲ. ರೋಜಿಯೂ ಕಷ್ಟಪಡಬೇಕಾಗಿತ್ತು. ಆದರೆ ಅವಳ ಜೊತೆಗೆ ನಾನೂ ಯಾತನೆಯನ್ನು ಅನುಭವಿಸುತ್ತೇನೆನ್ನುವುದೇ ನನಗೊಂದು ಸಮಾಧಾನ. ನನ್ನ ಚಿಂತೆ ನೂರ್ಮಡಿಯಾಗತೊಡಗಿತ್ತು. ಅಂಗಡಿಯ ಹುಡುಗ ಈಚೀಚೆಗೆ ಏತಿ ಎಂದರೆ ಪ್ರೀತಿ ಎನ್ನುತ್ತಿದ್ದ. ವ್ಯಾಪಾರ ಸರಿಯಾಗಿ ಆಗುತ್ತಿರಲಿಲ್ಲ. ಹಣ ಕೊಟ್ಟು ಕೊಂಡುಕೊಳ್ಳುವವರು ಕಡಿಮೆಯಾಗಿ ಕ್ರೆಡಿಟ್‌ಬಿಲ್ ಬರೆಸುವವರೇ ಜಾಸ್ತಿಯಾಗಿದ್ದರು. ಹುಡುಗ ಲೆಕ್ಕ ಇಟ್ಟಿದ್ದ ರೀತಿಯಲ್ಲಿ ನನಗೆ ಲಾಭವೋ ನಷ್ಟವೋ ಏನೂ ಗೊತ್ತಾಗುತ್ತಿರಲಿಲ್ಲ. ಹಣಕ್ಕೆ ಹಣವೂ ಇಲ್ಲ. ಸಾಮಾನಿಗೆ ಸಾಮಾನೂ ಇಲ್ಲ. ನನ್ನ ಆಸ್ತಿಯೆಲ್ಲ ಹುಡುಗನ ಜೇಬು ಸೇರಿತ್ತು. ಒಂದು ದಿನ ನಿಲ್ದಾಣದಿಂದ ಅಂಗಡಿಯನ್ನು ತೆಗೆಯಬೇಕೆಂದು ಸೂಚನೆ ಬಂತು. ನಾನು ಸ್ಟೇಷನ್‌ಮಾಸ್ಟರ ಹತ್ತಿರ ಹೋಗಿ ಅಂಗಲಾಚಿದೆ. ಆದರೆ ಏನೂ ಪ್ರಯೋಜನವಾಗಲಿಲ್ಲ. ನನ್ನ ಅಂಗಡಿಯಲ್ಲಿ ಬೇರೊಬ್ಬ ಕಾಲಿಟ್ಟ.

ರೈಲಿನ ಸಂಬಂಧ ಕಡಿದುಕೊಳ್ಳುವೆನೆಂದು ಕನಸಿನಲ್ಲೂ ಎಣಿಸಿರಲಿಲ್ಲ. ನನಗೆ ಸಿಟ್ಟಿನ ಜೊತೆಗೆ ದುಃಖವೂ ಬಂತು. ಊರಿಗೆ ರೈಲು ಬಂದಾಗಿನಿಂದ ಆ ಅಂಗಡಿಯಲ್ಲಿ ನನ್ನ ತಂದೆಯೂ ನಾನೂ ಕುಳಿತಿದ್ದ ಕಡೆ ಈಗ ಬೇರೊಬ್ಬ. ನಾನು ಅಂಗಡಿಯ ಹುಡುಗನ ಕೆನ್ನೆಗೆ ನಾಲ್ಕು ಬಿಗಿದೆ. ಅವನು ಅಳತೊಡಗಿದ್ದುದನ್ನು ಕಂಡು ಅವನ ತಂದೆಯ ಹತ್ತಿರ ಬಂದೆ.

"ಏನು ಸ್ವಾಮಿ, ನಿಮಗೆ ಸಹಾಯ ಮಾಡಿದ್ದಕ್ಕೆ ಇದೇನೇ ನಮಗೆ ಲಾಭ? ನಾನು ಹುಡುಗನಿಗೆ ಹೇಳುತ್ತಾನೇ ಇದ್ದೆ. ನೀನು ಯಾಕೆ ಹೋಗುತ್ತೀಯಾ, ಹ್ಯಾಗಿದ್ದರೂ ನಿನಗೇನೂ ಸಂಬಳ ಕೊಡೋಲ್ಲ ಅಂತ."

"ಸಂಬಳವಂತೆ ಸಂಬಳ. ನನ್ನ ದುಡ್ಡನ್ನೆಲ್ಲಾ ನುಂಗಿಕೊಂಡವನಿಗೆ ಸಂಬಳ ಬೇರೆ ಕೇಡು. ನನ್ನ ವ್ಯಾಪಾರಾನೇ ಹಾಳುಮಾಡಿಬಿಟ್ಟ."

"ಅವನು ಹಾಳುಮಾಡಲಿಲ್ಲ ನಿಮ್ಮ ವ್ಯಾಪಾರಾನ. ನಿಮ್ಮ ಎದೆಯಲ್ಲಿ ಮನೆಮಾಡಿಕೊಂಡು ಕೂತಿದೆಯಲ್ಲ ಆ ಸೈತಾನ ಹಾಳುಮಾಡಿದ."

ಅವನ ಮನಸ್ಸಿನಲ್ಲಿದ್ದುದು ರೋಜಿಯೇ ಎಂದು ನನಗೆ ತಿಳಿದುಕೊಳ್ಳಲು ಬಹಳ ಕಾಲ ಬೇಕಾಗಲಿಲ್ಲ. ರೋಜಿ ನಮ್ಮ ಮನೆ ಬಾಗಿಲಿನಲ್ಲಿ ಇಣುಕಿ

ನೋಡುತ್ತಿದ್ದಿರಬೇಕು. ಅಮ್ಮ ಮನೆಯ ಜಗುಲಿಯ ಮೇಲೆ ಬಂದು ನಿಂತಿದ್ದಳು.

ಕೂಲಿಯವನ ಮಾತು ನನಗೆ ಹಿಡಿಸಲಿಲ್ಲ ಅವನನ್ನು ಬೈದು ಅವನ ಮೇಲೆ ಕೈಮಾಡಲು ಹೋದೆ. ಸ್ಟೇಷನ್‌ಮಾಸ್ಟರು ಬಂದು—

"ಇಲ್ಲಿ ಗಲಾಟೆ ಮಾಡಿದರೆ ಇಲ್ಲಿಗೆ ನೀನು ಬರೋದನ್ನೇ ನಿಲ್ಲಿಸ-ಬೇಕಾಗುತ್ತದೆ" ಎಂದರು

ಹೊಸ ಅಂಗಡಿಯವನು ಈ ಜಗಳಕ್ಕೂ, ತನಗೂ ಯಾವ ಸಂಬಂ-ಧವೂ ಇಲ್ಲವೆನ್ನುವ ರೀತಿಯಲ್ಲಿ ಇದನ್ನೆಲ್ಲಾ ನೋಡುತ್ತಿದ್ದ. ಅವನಿಗೆ ಮೀಸೆ ಬೇರೆ ಕೇಡು. ಅವನನ್ನು ನೋಡುವುದಕ್ಕೆ ನನ್ನಿಂದಾಗಲಿಲ್ಲ. ಕೂಲಿಯವ-ನನ್ನು ಅಲ್ಲಿಗೇ ಬಿಟ್ಟು ಅವನ ಕಡೆ ತಿರುಗಿ—

"ನಿನಗೂ ಒಂದು ದಿನ ಇದೇ ಗತಿಯೇ ನೋಡುತ್ತಿರು" ಎಂದು ಕೂಗಿದೆ.

ಅವನು ಮೀಸೆ ತಿರುವುತ್ತಾ, "ನಿಜ, ನಿಜ. ನಿನ್ನಂತಹ ಅದೃಷ್ಟ ಎಲ್ಲಾರಿಗೂ ಇರುತ್ತೆಯೇ?" ಅಂದ. ನನಗೆ ಕೋಪಬಂದು ಏನು-ಮಾಡುತ್ತೇನೆಂಬ ಅರಿವಿಲ್ಲದೆ ಅವನ ಮೇಲೇರಿ ಹೋದೆ. ಒಂದು ನೊಣಾನ ಹೊಡೆಯುವ ಹಾಗೆ ಅವನು ತನ್ನ ಎಡಗೈಯಿಂದ ನನ್ನನ್ನು ನೂಕಿಬಿಟ್ಟ. ನಾನು ಹಿಂದಕ್ಕೆ ಬಿದ್ದುಬಿಟ್ಟೆ. ಆದರೆ ನೆಲದ ಮೇಲಲ್ಲ, ನನ್ನ ತಾಯಿಯ ಮೇಲೆ. ನಿಲ್ದಾಣದಲ್ಲಿ ನಡೆಯುತ್ತಿದ್ದ ಜಗಳವನ್ನು ನೋಡಿ ಅಮ್ಮ ಓಡಿ ಬಂದಿದ್ದಳು. ತನ್ನ ಜೀವಮಾನದಲ್ಲೇ ಅವಳು ಹಾಗೆ ಜನರ ಮುಂದೆ ಬಂದಿರಲಿಲ್ಲ.

ನನ್ನ ತೋಳು ಹಿಡಿದುಕೊಂಡು ಎಳೆಯುತ್ತ, "ನಡೀ ಮನೆಗೆ. ನಡಿ-ಯುವೆಯೋ ಇಲ್ಲವೊ" ಎಂದಳು

ನನ್ನನ್ನೇ ದುರುಗುಟ್ಟಿಕೊಂಡು ನೋಡುತ್ತಿದ್ದ ಅಂಗಡಿಯವನು "ಆ ಮಹಾತಾಯಿಯ ಕೃಪೆಯಿಂದ ನೀನು ಇವತ್ತು ಉಳಿದುಕೊಂಡೆ" ಎಂದನು.

ಅಮ್ಮ ನನ್ನನ್ನು ಮನೆಗೆ ಎಳೆದುಕೊಂಡೇ ಹೋದಳು. ಒಂದೆರಡು ಹಳೇ ಲೆಕ್ಕದ ಪುಸ್ತಕ ಒಂದಿಷ್ಟು ಕಾಗದ–ಪತ್ರ, ನನ್ನದು ಒಂದಿಷ್ಟು

ಸಾಮಾನು ನನ್ನ ಕಂಕುಳಲ್ಲಿತ್ತು. ಅಲ್ಲಿಗೆ ನನಗೂ ರೈಲಿಗೂ ಇದ್ದ ಸಂಬಂಧ ಕಡಿದುಹೋದ ಹಾಗೆಯೇ ಎನ್ನಿಸಿತು. ಹೃದಯ ಭಾರವಾಯಿತು. ರೋಜಿ ಪಕ್ಕದಲ್ಲಿ ನಿಂತಿರುವುದನ್ನು ಗಮನಿಸದೆ ಹಾಲಿನ ಒಂದು ಮೂಲೆಯಲ್ಲಿ ಬಿದ್ದುಕೊಂಡು ಕಣ್ಣುಮುಚ್ಚಿದೆ.

# 8

ನನಗೆ ಸಾಲ ಕೊಡುತ್ತಿದ್ದವನು ಒಬ್ಬ ಸೇಟ್‌ಜಿ. ಮಾರ್ಕೆಟ್ ರಸ್ತೆ-ಯಲ್ಲಿ ಮಂಡಿ ವ್ಯಾಪಾರಿ. ರೈಲ್ವೆ ಪ್ರಕರಣ ನಡೆದ ಮಾರನೆಯ ದಿನ ನಮ್ಮ ಮನೆಗೇ ಬಂದ. ಬಾಗಿಲು ಸದ್ದಾಗಿದ್ದು ನೋಡಿ ನಾನು ಎದ್ದುಹೋಗಿ ಬಾಗಿಲು ತೆರೆದೆ. ಎದುರಿಗೆ ನಿಂತಿದ್ದ ಸೇಟ್‌ಜಿ. ಅವನು ಯಾಕೆ ಬಂದಿದ್ದಾ-ನೆಂದು ನನಗೆ ಗೊತ್ತಿತ್ತು. ನೀಲಿ ಬಟ್ಟೆಯಲ್ಲಿ ಸುತ್ತಿದ್ದ ದಪ್ಪ ಲೆಕ್ಕದ ಪುಸ್ತಕವೊಂದು ಅವನ ಕಂಕುಳಲ್ಲಿತ್ತು. ನಾನು ಊರಿನಿಂದ ಎಲ್ಲಿ ಫರಾರಿ-ಯಾಗಿಬಿಟ್ಟಿರುತ್ತೇನೆಯೋ ಎಂದುಕೊಂಡಿದ್ದನೆಂದು ಕಾಣುತ್ತೆ. ನಾನು ಎದುರಿಗೆ ಹೋಗಿ ನಿಂತಿದ್ದನ್ನು ಕಂಡು ಅವನಿಗಾದ ಆನಂದ ಅಷ್ಟಿಷ್ಟಲ್ಲ. ಒಂದು ನಿಮಿಷ ನನಗೆ ಏನು ಹೇಳಬೇಕೋ ತಿಳಿಯಲಿಲ್ಲ. ಆದರೆ ಮನಸ್ಸಿ-ನಲ್ಲಾದ ಕಳವಳವನ್ನು ಮುಖದಲ್ಲಿ ವ್ಯಕ್ತಪಡಿಸುವುದಕ್ಕೆ ನಾನು ಸಿದ್ಧ-ನಾಗಿರಲಿಲ್ಲ. ರೋಜಿಯ ನಾಟ್ಯಾಭ್ಯಾಸವನ್ನು ನೋಡುತ್ತಾ ಚಾಪೆಯ ಮೇಲೆ ಗೋಡೆಗೊರಗಿಕೊಂಡಿದ್ದ ನನ್ನ ಭವಿಷ್ಯದ ರೂಪರೇಖೆಯ ಒಂದು ನಿರ್ದಿಷ್ಟ ಯೋಚನೆ ನನ್ನ ಮನಸ್ಸಿನಲ್ಲಿ ಮೂಡಿತ್ತು. ಅವಳ ಕಾಲ ಝುಣ-ಝುಣ, ಅವಳ ಧ್ವನಿಯ ಮಾಧುರ್ಯ, ಅವಳ ನರ್ತನದ ನಿನಾದ ನನ್ನಲ್ಲಿ ಹೊಸ ಆಶಾಭಾವನೆಯನ್ನು ಮೂಡಿಸುತ್ತಿದ್ದವು. ಸದ್ಯ ನಮ್ಮ ತಾಯಿ ಹಿಂದಿನ ದಿನದ ಸಾಯಂಕಾಲದಿಂದ ಒಂದು ಮಾತನ್ನೂ ಆಡಿರಲಿಲ್ಲ. ಇದ-ರಿಂದ ಎಷ್ಟೋ ಭಾರ ಇಳಿದಂತಾಗಿತ್ತು. ರೋಜಿಯನ್ನು ಕಂಡರೆ ಅಮ್ಮನಿಗೆ ಆಗದೇಹೋದರೂ ಅವಳ ಜೊತೆ ಮಾತಾಡದೆ ಇರುತ್ತಿರಲಿಲ್ಲ. ರೋಜಿಯ ನಡೆ-ನುಡಿ ಅಮ್ಮನಿಗೆ ತುಂಬ ಹಿಡಿಸಿತ್ತು. ರೋಜಿಯ ಮನಸ್ಸಿಗೆ ನೋವು ಉಂಟುಮಾಡಲು ಅಮ್ಮ ಬಯಸುತ್ತಿರಲಿಲ್ಲ. ಬೇಕಾದ ಊಟ–ತಿಂಡಿ ಕೊಟ್ಟು ಅವಳನ್ನು ಅವಳ ಪಾಡಿಗೆ ಬಿಟ್ಟುಬಿಟ್ಟಿದ್ದಳು. ಆದರೆ ನನ್ನ ಜೊತೆ ಮಾತಾಡುವುದಕ್ಕೆ ಅಮ್ಮನಿಗೆ ಇಷ್ಟವಾಗಲಿಲ್ಲವೆಂದು ಕಾಣುತ್ತೆ. ಅಪ್ಪ ಕಷ್ಟ-ಪಟ್ಟು ಸಂಪಾದಿಸಿದ ಆಸ್ತಿಯನ್ನು ಮಗ ನಿಮಿಷದಲ್ಲಿ ಹಾಳುಮಾಡಿಬಿಟ್ಟ-

ನೆಂದು ಇರಬೇಕು. ಆಸ್ತಿಗಿಂತ ಹೆಚ್ಚಾಗಿ ಮಾನ-ಮರ್ಯಾದೆಯನ್ನು ಕಾಸಿನ ಬೆಲೆಗೆ ಮಾರಿಕೊಂಡಾಗಿತ್ತು. ಸದ್ಯ ಈ ಕೋಪವನ್ನೆಲ್ಲಾ ಆ ಹುಡುಗಿಯ ಮೇಲೆ ತೋರಿಸಿರಲಿಲ್ಲ.

ಸೇಟ್‌ಜಿ ತೆಳ್ಳನೆಯ ಮನುಷ್ಯ. ತಲೆಯ ಮೇಲೊಂದು ರಂಗು-ರಂಗಿನ ಪೇಟ. ಐಶ್ವರ್ಯ ಬೇಕಾದಹಾಗಿತ್ತು. ಸಾಲವೇನೋ ಕೊಡುತ್ತಿದ್ದ. ಆದರೆ ಕೊಟ್ಟ ಸಾಲವನ್ನು ಬೇಗ ತೀರಿಸಬೇಕಾಗಿತ್ತು. ಸಾಮಾನು ತೆಗೆದುಕೊಂಡು ದುಡ್ಡು ಸರಿಯಾಗಿ ಕೊಡದೆಹೋದರೆ ಅವನಿಗೆ ಅಸಾಧ್ಯ ಸಿಟ್ಟುಬರುತ್ತಿತ್ತು. ಈಗ ಮನೆಯ ಬಾಗಿಲಿಗೆ ಬಂದಿರುವ ಕಾರಣವೂ ತಿಳಿದಿತ್ತು. ಆದರೆ ಅದನ್ನೆಲ್ಲಾ ತೋರಗೊಡದೆ—

"ಓಹೋ, ಏನು ಸೇಟ್‌ಜಿ, ನೀವು ನಮ್ಮ ಮನೆ ಬಾಗಿಲಿಗೆ ಬರೋಣವೆಂದರೇನು? ಬನ್ನಿ ಬನ್ನಿ........ಹೀಗೆ ದಯಮಾಡಿ" ಎಂದು ಅವನ ಕೈ ಹಿಡಿದುಕೊಂಡು ಹೋಗಿ ಜಗುಲಿಯ ಮೇಲೆ ಕೂಡಿಸಿದೆ.

ಸೇಟ್‌ಜೀಗೂ ನನಗೂ ತುಂಬ ಸ್ನೇಹ. ಕೊಡಬೇಕಾದ ಬಾಕಿಯ ವಿಚಾರ ಮಾತಾಡೋದಕ್ಕೆ ಬೇಗ ಸಾಧ್ಯವಾಗಲಿಲ್ಲ. ಒಂದು ನಿಮಿಷ ಏನು ಹೇಳಬೇಕೆಂದು ತಿಳಿಯದೆ ಇಬ್ಬರೂ ಸುಮ್ಮನಿದ್ದೆವು. ಒಳಗಿನಿಂದ ರೋಜಿಯ ಕಾಲ ಸದ್ದು ಕೇಳಿಬರುತ್ತಿತ್ತು.

"ಏನದು?"

"ಓ ಅದೇ! ಏನು ಇಲ್ಲ. ನಾಟ್ಯಾಭ್ಯಾಸ ನಡೀತಾ ಇದೆ."

"ನಾಟ್ಯಾಭ್ಯಾಸ!" ನನ್ನ ಮನೆಯಲ್ಲಿ ನಾಟ್ಯಾಭ್ಯಾಸವೇ! ಸೇಟ್‌ಜಿ ನಿಜವಾಗಿಯೂ ಚಕಿತಗೊಂಡ. ನಾವು ಒಂದೆರಡು ಮಾತಾಡಿದೆವು. ನನ್ನೊಳಗಿನ 'ಸೈತಾನನ' ಸುದ್ದಿ ಅವನಿಗೂ ಮುಟ್ಟಿತ್ತು. ಅದನ್ನು ಹೆಚ್ಚಿಗೆ ವಿಚಾರಿಸದೆ ಸೇಟ್‌ಜಿ ಕೇಳಿದ:

"ಏನು ರಾಜು, ಹೀಗಾಗಿಬಿಟ್ಟೆ. ಬಾಕಿ ತೀರಿಸದೆ ಎಷ್ಟು ತಿಂಗಳಾಯಿತು. ಅಷ್ಟು ಸರಿಯಾಗಿ ಲೆಕ್ಕಾಚಾರ ತೀರಿಸಿಬಿಡುತ್ತಾ ಇದ್ದೆ."

"ವ್ಯಾಪಾರ ಅಷ್ಟು ಸರಿಯಾಗಿರಲಿಲ್ಲ. ಅಜ್ಜಯ್ಯ, ಅದೂ ಅಲ್ಲದೆ ಆ ಹುಡುಗ ನನ್ನ ಮುಳುಗಿಸಿಬಿಟ್ಟ."

"ಇನ್ನೊಬ್ಬರನ್ನು ಬೈದು ಏನು ಪ್ರಯೋಜನ?" ಸೇಟ್‌ಜಿ ತನ್ನ

ಮೃದುತ್ವವನ್ನು ಬಿಟ್ಟು ಮಾತನಾಡಿದ. ತನ್ನ ದಪ್ಪ ಪುಸ್ತಕವನ್ನು ತೆಗೆದು ಅದರಲ್ಲಿ ಬೆರಳಿಟ್ಟು ತೋರಿಸಿ "ಎಂಟುಸಾವಿರ ರೂಪಾಯಿ. ಒಂದಲ್ಲ ಎರಡಲ್ಲ. ಏನಾದರೂ ಮಾಡಿ ತೀರಿಸಬೇಕು." ಎಂದ.

ಈ ಹಾಳು 'ಏನಾದರೂ' ನನಗೆ ಬೇಜಾರು ಹಿಡಿಸಿತ್ತು. ಅಮ್ಮನೋ ಈ ಹುಡುಗಿಯ ವಿಚಾರ 'ಏನಾದರೂ' ಮಾಡು ಎನ್ನುವುದು. ಆ ಹುಡುಗಿಯೂ ನನ್ನ ನಾಟ್ಯದ ವಿಚಾರ 'ಏನಾದರೂ' ಮಾಡು ಎನ್ನುವುದು. ಈ ಸೇಟ್‌ಜಿ ನನ್ನ ದುಡ್ಡಿನ ವಿಷಯ 'ಏನಾದರೂ' ಮಾಡು ಎನ್ನುವುದು. 'ಏನಾದರೂ' ಹೇಗೆ ಮಾಡೋದು ಸಾಧ್ಯ?

"ಏನಾದರೂ ಮಾಡಬೇಕೂಂತನ್ನೋದು ನನಗೂ ಗೊತ್ತಿದೆ."

"ಏನು ಮಾಡುತ್ತೀಯಾ?"

"ಏನಾದರೂ ಮಾಡಿ ನಿಮ್ಮ ಸಾಲ ಕೊಟ್ಟರಾಯಿತೋ ಇಲ್ಲವೋ?"

"ಯಾವಾಗ?"

"ಹ್ಯಾಗೆ ಹೇಳೋದಕ್ಕೆ ಸಾಧ್ಯ. ನೀವು ಸ್ವಲ್ಪ ಕಾಯಬೇಕು."

"ಒಂದು ವಾರ?"

'ಒಂದು ವಾರ.' ನನಗೆ ನಗೆ ಬಂತು. ನನ್ನ ನಗೆ ನೋಡಿ ಅವನಿಗೆ ಕೋಪ ಬಂತು.

"ನಾನೇನು ಇಲ್ಲಿ ಕೋತಿ ಕುಣಿಸೋಕೆ ಬಂದಿದೀನಿ ಅಂತ ತಿಳಿದುಕೊಂಡೆಯೇನು?"

"ಸುಮ್ಮನೆ ಯಾಕೆ ಕೂಗಾಡುತ್ತೀರಿ ಸೇಟ್‌ಜಿ? ಎಷ್ಟಾದರೂ ನಾವು ಸ್ನೇಹಿತರು."

"ಸ್ನೇಹಕ್ಕೂ ಇದಕ್ಕೂ ಸಂಬಂಧವಿಲ್ಲ."

ಸೇಟ್‌ಜಿ ಧ್ವನಿಯೇರಿಸಿದಾಗ ಒಳಗೆ ರೋಜಿಯ ಗೆಜ್ಜೆಯ ಸದ್ದು ಕೇಳುತ್ತಿರಲಿಲ್ಲ. ಅವನು ಧ್ವನಿಯಿಳಿಸಿದಾಗ ರೋಜಿಯೇ ನನ್ನ ಕಣ್ಣುಮುಂದೆ ಕುಣಿಯತೊಡಗಿದಳು. ನನಗೆ ತಿಳಿಯದೆಯೇ ನನ್ನ ತುಟಿಯ ಮೇಲೆ ಮತ್ತೆ ನಗೆ ಮೂಡಿತು. ನನ್ನ ನಗೆಯನ್ನು ಕಂಡು ಸೇಟ್‌ಜಿಗೆ ಬಂದ ಕೋಪ ಅಷ್ಟಿಷ್ಟಲ್ಲ.

"ಏನಯ್ಯಾ, ನಿನಗೇನು ಮೈಮೇಲೆ ಪ್ರಜ್ಞೆಯಿದೆಯೋ ಇಲ್ಲವೋ?

ಕೊಡೋ ಸಾಲ ಕೊಡು ಅಂತ ಕೇಳಿದರೆ ಹಲ್ಲುಕಿರೀತಿಯಾ ? ನೇರವಾಗಿ ಮಾತಾಡಿ ಹೋಗೋಣವೆಂದು ಬಂದರೆ ಅದೇನೋ ಸಾಧ್ಯವಾಗೋ-ಹಾಗಿಲ್ಲ. ಆಮೇಲೇನಾದರೂ ಹೆಚ್ಚು–ಕಡಿಮೆಯಾದರೆ ಮಾತ್ರ ನನ್ನನ್ನು ಬಯ್ಯಬೇಡ." ಎಂದು ಎದ್ದು ಹೊರಟನು.

"ಸ್ವಾಮಿ ಸೇಟ್‌ಜಿ, ನನ್ನ ಮಾತು ಕೇಳಿ." ಎಂದು ಕೂಗಿದೆ.

ಆದರೆ ಆಗಲೂ ನನಗೆ ನಗುವನ್ನು ತಡೆಯಲಾಗಲಿಲ್ಲ. ಅವನ ಗಂಟು ಮುಖ ನೋಡಿ ನನಗೆ ನಗು ಉಕ್ಕಿಬರುತ್ತಿತ್ತು. ಯಾಕೆ ಹೀಗಾಯಿತೋ ದೇವರಿಗೆ ಗೊತ್ತು. ಆದರೆ ಸೇಟ್‌ಜಿ ಇನ್ನು ಅಲ್ಲಿರದೆ ಸಿಡುಗುಟ್ಟುತ್ತಾ ಹೊರಟುಹೋದ. ಸಣಕಲು ಮನುಷ್ಯನಿಗೆ ತಲೆಯ ಮೇಲೊಂದು ರಂಗು-ರಂಗಿನ ಭಾರಿ ಪೇಟ, ಕಂಕುಳಲ್ಲಿ ಲೆಕ್ಕದ ಪುಸ್ತಕ..........ನನಗೆ ನಗು ತಡೆಯಲಾಗದೆ ಗಟ್ಟಿಯಾಗಿಯೇ ನಕ್ಕುಬಿಟ್ಟೆ. ನಗುವನ್ನು ಕೇಳಿದ ಸೇಟ್ ಬೀದಿಯಿಂದಲೇ ಹಿಂತಿರುಗಿ ದುರುಗುಟ್ಟಿಕೊಂಡು ನೋಡಿ ಮರೆಯಾದ. ನಾನು ನಗುತ್ತಲೇ ಒಳಗೆ ಹೋಗಿ ಬಾಗಿಲು ಹಾಕಿಕೊಂಡೆ.

"ಏನು, ಏನೋ ಬಹಳ ನಗುತ್ತ ಇದ್ದೀರಲ್ಲ ?" ಎಂದಳು ರೋಜಿ.

"ಹೌದು, ನಗು ಬರೋಹಾಗೆ ಮಾಡಿದ."

"ಯಾರು ?"

"ಯಾರೋ ಸ್ನೇಹಿತ." ರೋಜಿಗೆ ತನ್ನ ತಾಪತ್ರಯ ತಿಳಿಯಬಾರ-ದೆಂದು ಸೇಟ್‌ಜಿ ವಿಷಯ ಹೇಳಲಿಲ್ಲ. ರೋಜಿಯೊಬ್ಬಳನ್ನು ಬಿಟ್ಟರೆ ಬೇರೆ ಎಲ್ಲವೂ ಮಿಥ್ಯವೆಂದೇ ತೋರುತ್ತಿತ್ತು. ನನಗೆ ಯಾವ ತಾಪತ್ರಯವೂ ಬೇಕಾಗಿರಲಿಲ್ಲ. ಆದರೆ ತಾಪತ್ರಯ ಮಾತ್ರ ನನ್ನನ್ನು ಬಿಡಲಿಲ್ಲ.

ಒಂದು ವಾರ ಹತ್ತು ದಿನಗಳಾಗಿರಬಹುದು. ಆಹೊತ್ತು ಸೇಟ್‌ಜಿಯ ಎದುರಿಗೆ ನಕ್ಕಿದ್ದು ಇವತ್ತು ಅಳುವ ಹಾಗಾಯಿತು. ಸೇಟ್‌ಜಿ ನನ್ನ ಕೈಲಿ ಮಾತನಾಡಿ ಪ್ರಯೋಜನವಿಲ್ಲವೆಂದು ನೇರವಾಗಿ ಕೋರ್ಟಿಗೆ ಹೋಗಿದ್ದ. ಅಮ್ಮನ ಮನಸ್ಸಿನ ಕಳವಳ ಹೇಳತೀರದು. ನನಗೆ ಗಫೂರನನ್ನು ಬಿಟ್ಟು ಬೇರೆ ಸ್ನೇಹಿತನೇ ಪ್ರಪಂಚದಲ್ಲಿ ಇಲ್ಲದಾಯಿತು. ಅವನನ್ನು ಯಥಾಪ್ರಕಾರ ಚಿಲುಮೆಯ ಹತ್ತಿರ ಕಂಡು ನನ್ನ ತೊಂದರೆಯನ್ನು ತೋಡಿಕೊಂಡೆ.

"ಲಾಯರನ್ನು ಇಟ್ಟುಕೊಂಡಿದೀಯಾ ?" ಎಂದ ಗಫೂರ್.

" ಹ್ಞಾಂ, ಆ ಹತ್ತಿ ಗುಡಾಣದ ಹತ್ತಿರ ಇದಾರಲ್ಲ ಅವರು. "

" ಸರಿ, ಹಾಗಾದರೆ ಭಯವಿಲ್ಲ ಬಿಡು. ಕೇಸನ್ನೂ ಅಡ್ಜರ್ನ ಮಾಡಿಸಿ-ಮಾಡಿಸಿ ಪುಣ್ಯಾತ್ಮ ವರುಷ ಪೂರ್ತಿ ನಡೆಯೋಹಾಗೆ ಮಾಡುತ್ತಾನೆ. ಸಿವಿಲ್ ಕೇಸೋ, ಕ್ರಿಮಿನಲ್ಲೋ ? "

" ಕ್ರಿಮಿನಲ್ ಅಂತ ಮಾಡಿಬಿಟ್ಟಿದ್ದಾರೆ. ಆಹೊತ್ತು ಸೇಟ್ ಬಂದಿದ್ದನಲ್ಲ. ಅವನ ಮೇಲೆ ಕೈಮಾಡಿದ ಅಂತ ಹೇಳುತ್ತಾ ಇದ್ದಾರೆ. "

" ಅರೆ, ಅರೆ ಸಿವಿಲ್ ಆಗಿದ್ದರೆ ವರ್ಷಗಟ್ಟಲೆ ನಡೀತಾ ಇತ್ತು. ಹೋಗಲಿ ' ಅದು ' ಇನ್ನೂ ನಿಮ್ಮನೇಲೆ ಇದೆಯೆ ? "

ನಾನು ಅವನನ್ನು ದುರುಗುಟ್ಟಿಕೊಂಡು ನೋಡಿದೆ.

" ಹೋಗಲಿ ಬಿಡು ಪಾಪ. ನೀನು ಹೀಗಾದದ್ದಕ್ಕೆ ಆ ಹೆಂಗಸನ್ನ ಅಂದು ಏನು ಪ್ರಯೋಜನ? ಮತ್ತೆ ಈ ಊರು ನೋಡೋರ ಜೊತೆ ಯಾಕೆ ಒಂದಿಷ್ಟು ತಿರುಗಾಡೋದಕ್ಕೆ ಹೋಗಬಾರದು ? "

" ಅದು ಸಾಧ್ಯವೇ ಇಲ್ಲ. ರೈಲ್ವೆ ಸ್ಟೇಷನ್ನಿನ ಹತ್ತಿರ ತಿರುಗಿ ಕಾಲಿಡೋಕೇ ಇಲ್ಲ. ಆಮೇಲೆ ನಾನು ಅಲ್ಲಿ ಹೋಗಿ ಗಲಾಟೆ ಮಾಡುತ್ತೀನಿ ಅಂತ ಸ್ಟೇಷನ್ ಮಾಸ್ಟರು ಸುಮ್ಮನೆ ಬಿಡೋಲ್ಲ. "

" ನಿಜವಾಗಿ ? "

" ಖಂಡಿತವಾಗಿ. ಆ ಕೂಲಿಯವನ ಮಗ............ಆ........ಮಗ ಸಿಕ್ಕಲಿ, ಕತ್ತು ಹಿಚುಕಿಬಿಡುತ್ತೇನೆ. "

" ಹಾಗೆಲ್ಲ ಎಲ್ಲಾದರೂ ಮಾಡೀಯಾ ಸದ್ಯ ? ಇದರಿಂದ ಯಾವ ದೇವರಿಗೆ ಪ್ರೀತಿ ಹೇಳು? ಏನಾದರೂ ಬುದ್ಧಿ ಉಪಯೋಗಿಸಿ ಕೆಲಸ ಮಾಡು. "

ನಾನು ಹಾಗೇ ಯೋಚಿಸಿ ಹೇಳಿದೆ :

" ನೋಡು ಗಫೂರ್, ಈಗೊಂದು ಐನೂರು ರೂಪಾಯಿ ಕೈಗೆ ಸಿಕ್ಕರೆ ! ಓಹ್........ಈಗ ಭರತನಾಟ್ಯ ಅಂದರೆ ಜನ ಬಾಯಿ-ಬಾಯಿ ಬಿಡುತ್ತಾರೆ. ಒಂದೈನೂರು ರೂಪಾಯಿ ಇಟ್ಟುಕೊಂಡು ರೋಜೀನ ಸ್ಟೇಜು ಹತ್ತಿಸಿ-ಬಿಟ್ಟರೆ ಆಮೇಲೆ ದುಡ್ಡಿನ ಮಳೆ ಸುರಿದುಬಿಡುತ್ತೆ ನೋಡು. ಚಿನ್ನದ ಗಣಿ ಕಣಯ್ಯ ಅವಳು, ಚಿನ್ನದ ಗಣಿ. ಆದರೆ ಕೈಯಲ್ಲಿ ಮೂರು ಕಾಸಿಲ್ಲದೆ

ಮೊದಲು ಆರಂಭ ಮಾಡೋಕಾಗೋದಿಲ್ಲ. ಗಫೂರ್ ನನಗೊಂದಿಷ್ಟು ದುಡ್ಡು ಸಾಲ ಕೊಡುತ್ತೀಯಾ ?"

ಅವನಿಗೆ ನನ್ನ ಮಾತು ಕೇಳಿ ಆಶ್ಚರ್ಯವಾಯಿತು. ಆದರೂ ಅವನು ನಿರ್ದಯನಾಗಿರಲಿಲ್ಲ. "ರಾಜು, ನನ್ನ ಕಷ್ಟ ನಿನಗೆ ತಿಳಿದೇ ಇಲ್ಲ. ಕಾರು ರಿಪೇರಿ ಮಾಡಬೇಕಾದರೂ ನಾನೇ ದುಡ್ಡು ಸಾಲ ತಗೋಬೇಕು. ನನ್ನ ಹತ್ತಿರ ಐನೂರು ರೂಪಾಯಿ ಇದ್ದಿದ್ದರೆ ಗಾಡಿ ಟೈರು ಈ ಗತೀಲಿರುತ್ತಿತ್ತೆ ? ನಾನು ಹೇಳೋದು ಕೇಳು. ಸುಮ್ಮನೆ ಅವಳನ್ನು ಕಳಿಸಿಬಿಟ್ಟು ಬೇರೆ ಏನಾದರೂ ಕೆಲಸ ನೋಡು. ಈ ಕಲೆ ಗಿಲೆ ಎಲ್ಲಾ ನಮ್ಮಂಥವರಿಗಲ್ಲ."

ಈ ಮಾತು ಕೇಳಿ ನನಗೆ ಕೋಪ ಬಂತು. ಸಿಕ್ಕಾಪಟ್ಟೆ ಮಾತಾಡಿಬಿಟ್ಟೆ. ಗಫೂರ್ ಮುಖ ಸಪ್ಪಗೆ ಮಾಡಿಕೊಂಡು ಕಾರಿನಲ್ಲಿ ಹೋಗಿ ಕುಳಿತ.

"ಕಾರು ಬೇಕಾದರೆ ಹೇಳಿಕಳಿಸು. ಅದಕ್ಕಿಂತ ಹೆಚ್ಚಾಗಿ ಏನೂ ಮಾಡೋಕೇ ಸಾಧ್ಯವಿಲ್ಲ. ನನಗೇನೂ ದುಡ್ಡು ಕೊಡಬೇಡ. ನನ್ನ ಕಾರಿನಲ್ಲಿ ಸುತ್ತಿದ್ದಕ್ಕಾಗಿ ಕೊಡಬೇಕಾದ ಹಳೇ ಬಾಕೀನೂ ಬೇಡ."

"ಬಾಕಿಯಂತೆ ಬಾಕಿ, ಬೆಟ್ಟದ ಬಂಗಲೆಗೆ ನೂರು ಸಲ ನಿನ್ನನ್ನು ಕರೆದುಕೊಂಡು ಹೋಗಿ ಅವಕ್ಕೆಲ್ಲಾ ದುಡ್ಡು ಕೊಡಿಸಿದೆನಲ್ಲ ನನ್ನ ಕಮೀಷನ್ ಏನಾದರೂ........"

"ಆ ಮಾತೆಲ್ಲ ಈಗ ಬೇಡ. ಕಾರು ಬೇಕಾದಾಗ ಹೇಳಿಕಳುಹಿಸು. ದೇವರು ನಿನಗೆ ಒಳ್ಳೇ ಬುದ್ಧಿ ಕೊಡಲಿ" ಎಂದು ಕಾರ್ ಸ್ಟಾರ್ಟ್ ಮಾಡಿದ.

ಅಂದು ನನ್ನ ದುರದೃಷ್ಟದಿಂದ ನನ್ನ ಬದುಕಿನಲ್ಲಿ ಆಪ್ತ ಸ್ನೇಹಿತನೊಬ್ಬನನ್ನು ಕಳೆದುಕೊಂಡೆನೆಂಬುದು ಅರಿವಾಯಿತು.

ಆದರೆ ನನ್ನ ದುರದೃಷ್ಟಕ್ಕೆ ನನ್ನ ಜೀವನವನ್ನು ಬರಿದುಮಾಡಿ ಹೊರಟುಹೋದ. ಆಪ್ತರಲ್ಲಿ ನನ್ನ ತಾಯಿಯೂ ಸೇರಿದಳು. ಅಂದು ರೋಜಿ ತನ್ನ ಅಭ್ಯಾಸದಲ್ಲಿ ತೊಡಗಿದ್ದಳು. ನಾನು ಇಹದ ಅರಿವನ್ನೇ ಮರೆತು ಅವಳನ್ನು ನೋಡುತ್ತಾ ಕುಳಿತಿದ್ದೆ. ಹಳೆಯ ನಾಟ್ಯವನ್ನು ಸ್ವಲ್ಪ ತನ್ನದೇ ಆದ ರೀತಿಯಲ್ಲಿ ರೋಜಿ ಬದಲಾಯಿಸಿದ್ದಳು. ಅಭ್ಯಾಸ ಮುಗಿದ ಮೇಲೆ ನನ್ನ ಅಭಿಪ್ರಾಯವನ್ನು ತಿಳಿಸಬೇಕೆಂದು ಹೇಳಿ ರೋಜಿ ನಾಟ್ಯಮಾಡಲಾರಂಭಿ-

ಸಿದ್ದಳು. ಈಚೀಚೆಗಂತೂ ನಾನು ಕಲಾವಿಮರ್ಶಕನಾಗುತ್ತಿದ್ದೆ. ಅಭ್ಯಾಸ ಮಾಡುವುದನ್ನು ನೋಡುವುದು. ಆಮೇಲೆ ಸರಿಯಾಗಿದೆಯೋ ಇಲ್ಲವೋ ಎಂದು ಹೇಳುವುದು. ಆದರೆ ಅವಳನ್ನು ಅಲ್ಲಿಯೇ ಬಿಗಿದಪ್ಪಬೇಕೆನಿಸುತ್ತಿತ್ತು. ಆದರೆ ಅಮ್ಮ ಅಲ್ಲಿಯೇ ಓಡಾಡುತ್ತಿದ್ದುದರಿಂದ ಇದು ಸಾಧ್ಯವಾಗಲಿಲ್ಲ. ಈಚೀಚೆಗಂತೂ ನನ್ನ ಪ್ರೇಮದ ಪೂಜೆಯನ್ನೆಲ್ಲ ಅಮ್ಮನ ಕಣ್ಣುತಪ್ಪಿಸಿಯೇ ನಡೆಸಬೇಕಾಗಿತ್ತು. ಅಮ್ಮ ನೀರು ತರಲು ಬಾವಿಗೆ ಹೋದರೆ ಬರುವುದಕ್ಕೆ ಎಷ್ಟು ಹೊತ್ತಾಗುತ್ತದೆಂದು ತಿಳಿದಿರುತ್ತಿದ್ದುದರಿಂದ ಆ ಸಮಯವನ್ನು ಉಪಯೋಗಿಸಿಕೊಂಡು ನನ್ನ ಪ್ರೇಮದಾಹವನ್ನು ಅಡಗಿಸಿಟ್ಟುಕೊಳ್ಳುತ್ತಿದ್ದೆ. ಅಮ್ಮ ಮನೆಯಲ್ಲಿ ಇಲ್ಲದೆಹೋದರೆ ನನ್ನ ಕಲಾವಿಮರ್ಶಕ ಬುದ್ಧಿ ಎಲ್ಲಿಯೋ ಹಾರಿಹೋಗುತ್ತಿತ್ತು. ಅವಳನ್ನು ಬಳಸಿದ ಕೈಗಳನ್ನು ದೂರ ತಳ್ಳುತ್ತ ರೋಜಿ "ನಿಮಗೇನಾಗಿದೆ? ಹೀಗಾದರೆ ನನ್ನ ಕಲೆ ಸಾರ್ಥಕವಾದ ಹಾಗೆಯೇ" ಎನ್ನುತ್ತಿದ್ದಳು. ಈಗೀಗ ಅವಳು ತನ್ನ ವ್ಯಕ್ತಿತ್ವವನ್ನೆಲ್ಲ ನಾಟ್ಯಕಲೆಯಲ್ಲಿ ಅರ್ಪಿಸಿಬಿಟ್ಟಿದ್ದಳು. ಕಲೆಯ ಹೆಸರಿನಲ್ಲಿ ಅವಳನ್ನು ಆವರಿಸಿದ್ದ ಕಾಮ ಈಗ ನಿಜವಾದ ಕಲಾಪ್ರೇಮವಾಗಿ ಬೆಳಗುತ್ತಿತ್ತು.

ನನ್ನ ಹತ್ತಿರ ಇನ್ನೂ ಸ್ವಲ್ಪ ದುಡ್ಡಿತ್ತು. ಆದರೆ ಅದು ಇರುವ ಸಮಾಚಾರವನ್ನು ಮಾತ್ರ ಯಾರಿಗೂ ಹೇಳಿರಲಿಲ್ಲ. ಸೇಟ್‌ಜಿ ಬಂದುಹೋದ ಎರಡು–ಮೂರು ದಿನಗಳಲ್ಲಿ ಬ್ಯಾಂಕಿನಲ್ಲಿದ್ದ ಹಣವನ್ನೆಲ್ಲ ತಂದುಬಿಟ್ಟೆ. ದುಡ್ಡಿರುವುದರ ಸುಳಿವು ಯಾರಿಗೂ ಗೊತ್ತಾಗಬಾರದೆಂಬುದು ನನ್ನ ಆಶಯವಾಗಿತ್ತು. ನನ್ನ ಪರವಾಗಿ ವಾದಿಸುತ್ತಿದ್ದ ಲಾಯರನಿಗೆ ಹಣ ಸುರಿಯಬೇಕಾಗಿತ್ತು. ಮಾರ್ಕೆಟ್ ರಸ್ತೆಯಲ್ಲಿದ್ದ ಹತ್ತಿ ಅಂಗಡಿಯೇ ಅವರ ಆಫೀಸ್. ಒಳಗೆ ಹೋದರೆ ಉಸಿರು ಸಿಕ್ಕಿಕೊಳ್ಳುವ ಹಾಗಿತ್ತು. ಅಲ್ಲಿ ಒಂದು ಮೇಜು, ಒಂದು ಷೆಲ್ಫಿನ ತುಂಬ ಪುಸ್ತಕಗಳು, ಒಂದು ಕುರ್ಚಿ, ಬಂದವರಿಗಾಗಿ ಒಂದು ಬೆಂಚು. ನಾನು ಹೆದರಿಕೊಂಡು ಮೊದಲನೆಯ ದಿನ ಕೋರ್ಟಿನ ಹತ್ತಿರ ಹೋದಾಗಲೇ ಅವರು ನನಗೆ ಗಂಟುಬಿದ್ದರು.

"ನೀನು ನಿಜವಾಗಿ ಅವನನ್ನು ಹೊಡೆದಿಯಾ?"

"ದೇವರಾಣೆಗೂ ಇಲ್ಲ ಸಾರ್."

"ಸರಿ, ಸರಿ. ಕ್ರಿಮಿನಲ್ ಕೇಸ್ ಮಾಡೋಣ ಅಂತ ನೋಡುತ್ತ

ಇದ್ದಾರೆ. ಇರಲಿ ಪರವಾಗಿಲ್ಲ. ನಾನು ಅದನ್ನೆಲ್ಲಾ ನೋಡಿಕೋತೇನೆ. ಈಗ ಎಷ್ಟು ದುಡ್ಡು ತಂದೀದಿ?"

"ಐದು ರೂಪಾಯಿ."

"ಸರಿ, ಅದನ್ನಿಲ್ಲಿ ಕೊಡು" ಎಂದು ಜೇಬಿಗೆ ಸೇರಿಸಿದರು. ಎರಡೇ ರೂಪಾಯಿ ಎನ್ನಬಾರದಿತ್ತೆ ಎಂದು ಮನಸ್ಸಿನಲ್ಲಿ ನನ್ನನ್ನು ನಾನೇ ಬೈದು-ಕೊಂಡೆ. ಆಮೇಲೆ ಒಂದು ಕಾಗದಕ್ಕೆ ನನ್ನ ರುಜು ಹಾಕಿಸಿಕೊಂಡರು.

ನಾನು ಕೋರ್ಟಿಗೆ ಹೋಗಿ ಅವರು ಹೇಳಿದ ಹಾಗೆ ಕಟಕಟೆಯಲ್ಲಿ ನಿಂತುಕೊಂಡೆ. ಸೇಟ್ ಬಂದಿದ್ದ. ಕೈಯಲ್ಲಿ ಅದೇ ದಪ್ಪ ಲೆಕ್ಕದ ಪುಸ್ತಕ. ಸರಿ ಅವನಿಗಂತೂ ಲಾಯರು ಇದ್ದೇ ಇದ್ದರು. ನಾನು ಅವನನ್ನು ದುರು-ಗುಟ್ಟಿಕೊಂಡು ನೋಡಿದೆ. ಅವನೂ ನನ್ನನ್ನು ದುರುಗುಟ್ಟಿಕೊಂಡು ನೋಡಿದ. ಅವನ ಲಾಯರು ಏನೋ ಹೇಳಿದರು. ನನ್ನ ಐದು ರೂಪಾಯಿ ಲಾಯರು ಏನೋ ಹೇಳಿದರು. ಕೋರ್ಟಿನ ಜವಾನ ನನ್ನ ಬೆನ್ನು ತಟ್ಟಿ, ಹೋಗಲು ಹೇಳಿದ. ನಾನು ಏನಾಯಿತೆಂದು ತಿಳಿದುಕೊಳ್ಳುವಷ್ಟರಲ್ಲಿ ಅಂದಿನ ಕೆಲಸ ಮುಗಿದುಹೋಯಿತು. ನನ್ನ ಲಾಯರು ನನ್ನನ್ನು ಕರೆದರು. "ನೋಡಪ್ಪಾ, ಅಂತೂ ಕೇಸನ್ನ ಅಡ್ಜರ್ನ ಮಾಡಿಸಿದೀನಿ. ಮುಂದಿನ ತಾರೀಖು ಯಾವತ್ತಾಗುತ್ತೋ ನೋಡೋಣ. ನನ್ನ ಆಫೀಸಿಗೆ ಬಾ. ಅದೇ ಮಾರ್ಕೆಟ್ ರಸ್ತೆಯಲ್ಲಿ ಹತ್ತಿ ಗುಡಾಣದ ಮೇಲಿದೆಯಲ್ಲ ಅದೇ. ಗಲ್ಲಿ ಕಡೆಯಿಂದ ಮಹಡಿಯಿದೆ. ಹತ್ತಿ ಬರಬೇಕು" ಲಾಯರು ಹೊರಟು-ಹೋಗಿದ್ದರು. ಇಷ್ಟೇ ಆದರೆ ಚಿಂತೆಯೇ ಇಲ್ಲವೆನಿಸಿತು. ಸದ್ಯ ಅವನೊಬ್ಬ ಸಿಕ್ಕಿದನಲ್ಲ ಪುಣ್ಯಾತ್ಮ!

ಮನೆಗೆ ಬಂದು ಅಮ್ಮನಿಗೆ ಹೇಳಿದೆ, "ಏನೂ ಯೋಚನೆ ಮಾಡ-ಬೇಡಮ್ಮಾ, ಎಲ್ಲಾ ಸರಿಯಾಗಿದೆ."

"ಏನು ಸರಿಯಾಗಿದೆಯೋ ನಾ ಕಾಣೆನಪ್ಪಾ. ಈ ಮನೆ ಬಿಟ್ಟು ಹೊರಡು ಅಂದರೆ ಆಗ ಏನು ಮಾಡುತ್ತಿ?"

"ಹಾಗೆಲ್ಲ ಆಗೋಲ್ಲಮ್ಮಾ, ಒಂದು ವೇಳೆ ಆದರೂ ಇನ್ನೂ ಬೇಕಾ-ದಷ್ಟು ದಿನ ಇದೆ. ಸುಮ್ಮನೆ ಇಲ್ಲದ ಚಿಂತೆ ಹಚ್ಚಿಕೊಳ್ಳಬೇಡ."

"ಏನೋಪ್ಪ, ದೇವರೇ ಗತಿ ಅಷ್ಟೆ. ನಿನಗೆ ಏನಾಗಿದೆಯೋ ಆ

ಪರಮಾತ್ಮನಿಗೇ ಗೊತ್ತು. ಯಾವುದನ್ನೂ ಕಿವಿಯ ಮೇಲೆ ಹಾಕಿಕೊಳ್ಳೋ-
ದಿಲ್ಲ."

"ಯಾವುದನ್ನೂ ಕಿವಿಯ ಮೇಲೆ ಹಾಕಿಕೋಬೇಕು, ಯಾವುದು
ಬೇಡ ಅನ್ನೋದೆಲ್ಲ ಗೊತ್ತಮ್ಮಾ."

ಈಚೀಚೆಗೆ ಈ ಮಾತು–ಕತೆಯೆಲ್ಲ ರೋಜಿಯ ಎದುರಿನಲ್ಲೇ ನಡೆಯು-
ತ್ತಿತ್ತು. ರೋಜಿಯು ನಮ್ಮ ಮನೆಯವರಲ್ಲಿ ಒಬ್ಬಳಾಗಿಬಿಟ್ಟದ್ದಳು. ಅವಳು
ಈ ವ್ಯವಹಾರವನ್ನೆಲ್ಲ ಕೇಳಿದರೂ ಕೇಳದವರ ಹಾಗಿದ್ದುಬಿಡುತ್ತಿದ್ದಳು.
ನಾನೊಬ್ಬನೇ ಇದ್ದಾಗ ಕೂಡ ನನ್ನ ಆಸ್ತಿ–ಪಾಸ್ತಿಯ ಬಗ್ಗೆ ಕೆದಕಿ ಕೇಳು-
ತ್ತಿರಲಿಲ್ಲ.

ಅಮ್ಮ ಈಚೀಚೆಗೆ ನನ್ನನ್ನು ನನ್ನ ಪಾಡಿಗೆ ಬಿಟ್ಟುಬಿಟ್ಟದ್ದನ್ನು ನೋಡಿ
ಅಮ್ಮ ಯಾವ ಚಿಂತೆಯನ್ನೂ ಹಚ್ಚಿಕೊಂಡಿಲ್ಲವೆಂದೇ ನಂಬಿದ್ದೆ. ಆದರೆ
ಅವಳು ಅವಳದೇ ಯೋಜನೆಗಳನ್ನು ತಯಾರಿಸಿದ್ದಾಳೆಂದು ನನಗೆ ಅನ್ನಿ-
ಸಿಯೇ ಇರಲಿಲ್ಲ. ಒಂದು ದಿನ ಅತ್ಯಂತ ಏಕಾಗ್ರತೆಯಿಂದ ರೋಜಿಯ
ನಾಟ್ಯಾಭ್ಯಾಸವನ್ನು ನೋಡುತ್ತ ಕುಳಿತಿದ್ದೆ. ಇದ್ದಕ್ಕಿದ್ದಂತೆ ನಮ್ಮ ಸೋದರ-
ಮಾವ ಸಿಡಿಲಿನಂತೆ ಬಂದೆರಗಿದರು. ನನ್ನ ಮಾವ ಅಮ್ಮನ ದೊಡ್ಡಣ್ಣ.
ನಮ್ಮ ತಾತನ ಮನೆ ಅವರ ಪಾಲಿಗೆ ಬಂದಿತ್ತು. ಹಳ್ಳಿಯಲ್ಲಿ ಭಾರಿ
ಜಮೀನುದಾರರಾಗಿ ನಮ್ಮ ಮನೆತನದ ವ್ಯವಹಾರಕ್ಕೆಲ್ಲ ಒಡೆಯರಾಗಿದ್ದರು.
ಮದುವೆಯಾಗಲಿ, ಮುಂಜಿಯಾಗಲಿ, ವ್ಯಾಜ್ಯವಾಗಲಿ, ಸಾವಾಗಲಿ, ಸಾಲ-
ವಾಗಲಿ ಏನೇ ಆದರೂ ಅವರ ಒಪ್ಪಿಗೆಯಿಲ್ಲದೆ ಆಗುತ್ತಿರಲಿಲ್ಲ. ಅವರು
ಹೆಚ್ಚಾಗಿ ಹಳ್ಳಿಯನ್ನು ಬಿಟ್ಟೇ ಬರುತ್ತಿರಲಿಲ್ಲ. ಅವರ ಅಧಿಕಾರವೆಲ್ಲ ಪತ್ರ-
ಮುಖೇನವೇ ನಡೆಯುತ್ತಿತ್ತು. ಅಮ್ಮನಿಗೂ ಅವರಿಗೂ ಪತ್ರ-ವ್ಯವಹಾರ-
ವಿದ್ದುದು ನನಗೆ ತಿಳಿದಿತ್ತು. ತಿಂಗಳಿಗೊಂದು ಸಲ ಅವರ ಕಾಗದ ಬಂದಿ-
ತೆಂದರೆ ಅಮ್ಮನಿಗೆ ಆದ ಆನಂದ ಅಷ್ಟಿಷ್ಟಲ್ಲ. ಒಂದು ವಾರ ಪೂರ್ತಿ ಅದನ್ನೇ
ಮಾತಾಡುತ್ತಿದ್ದಳು. ಅವರ ಮಗಳನ್ನೇ ನನ್ನ ಕೊರಳಿಗೆ ಕಟ್ಟಬೇಕೆಂದಿ-
ದ್ದಳು. ಆದರೆ ಈಚಿನ ಪರಿಸ್ಥಿತಿಯಲ್ಲಿ ಆ ವಿಷಯ ದೇವರ ದಯೆಯಿಂದ
ಅಡಗಿ ಕುಳಿತಿತ್ತು.

ಆದರೆ ಈ ಬಾರಿ ಪತ್ರಕ್ಕೆ ಬದಲಾಗಿ ಅವರೇ ಬಾಗಿಲಲ್ಲಿ ಪ್ರತ್ಯಕ್ಷ-

ವಾಗಿದ್ದಾರೆ. ಮನೆಗೆ ಬಂದು ಬಾಗಿಲಲ್ಲೇ ಕೂಗುಹಾಕಿದರು:

"ಅಮ್ಮಯ್ಯಾ."

ನಾನು ಎದ್ದು ಬಾಗಿಲಿಗೋಡಿದೆ. ಅಮ್ಮ ಅಡುಗೆಯ ಮನೆಯಿಂದ ಓಡಿಬಂದಳು ರೋಜಿ ತನ್ನ ಅಭ್ಯಾಸವನ್ನು ನಿಲ್ಲಿಸಿದಳು. ಆರಡಿ ಎತ್ತರವಾದ ಆಳು. ಹೊಲಗಳಲ್ಲಿ ಕೆಲಸ ಮಾಡಿ ಮುಖ ಕಪ್ಪುಗಟ್ಟಿತ್ತು. ಆಚಾರಕ್ಕನುಗುಣವಾಗಿ ಕ್ರಾಪು ಮಾಡಿಸಿಕೊಳ್ಳದೆ ಜುಟ್ಟು ಬಿಟ್ಟು ಅದನ್ನು ಗಂಟುಹಾಕಿಕೊಂಡಿದ್ದರು. ಅಗಸನ ಮನೆ ಕಾಣದೆ ಮನೆಯಲ್ಲೇ ಮಡಿಯಾಗುತ್ತಿದ್ದುದರಿಂದ ಸ್ವಲ್ಪ ಕಂದುಬಣ್ಣಕ್ಕೆ ತಿರುಗಿದ್ದ ಧೋತಿ. ಷರಟು ಮೇಲೊಂದು ಅಂಗವಸ್ತ್ರ, ಕೈಯಲ್ಲೊಂದು ಗೋಣೀ ಬ್ಯಾಗು. ಅದರ ಮೇಲೆ ಹಸಿರು ಬಣ್ಣದಲ್ಲಿ ಮಹಾತ್ಮಾ ಗಾಂಧಿಯವರ ಮುದ್ರೆ. ನೇರವಾಗಿ ಅಡುಗೆ ಮನೆಗೆ ಹೋಗಿ ಚೀಲದಿಂದ ಸೌತೆಕಾಯಿ, ನಿಂಬೆಹಣ್ಣು, ಬಾಳೆಹಣ್ಣು, ಸೊಪ್ಪು ತೆಗೆದಿಟ್ಟು, "ತಗೋ ಅಮ್ಮಯ್ಯ, ನಮ್ಮ ತೋಟದ್ದು" ಎಂದರು. ಸೌತೇಕಾಯನ್ನು ಹೆಚ್ಚಿ ಹೇಗೆ ಅಡುಗೆ ಮಾಡಬೇಕೆಂಬುದನ್ನೂ ಹೇಳಿದರು.

ಅಮ್ಮನಿಗೆ ಅಣ್ಣನನ್ನು ನೋಡಿ ಸಂತೋಷವೇ ಸಂತೋಷ. "ಇರಣ್ಣ, ಕಾಫಿ ಮಾಡಿಕೊಡುತ್ತೇನೆ" ಎಂದು ಅಮ್ಮ ಕೆಲಸದಲ್ಲಿ ತೊಡಗಿದಳು. ಮಾವ ಅಡುಗೆ ಮನೆಯ ಬಾಗಿಲಿನಲ್ಲೇ ನಿಂತು ಅಮ್ಮನ ಕಾಗದ ಬಂದದ್ದು, ಅದನ್ನು ನೋಡಿ ತಾವು ಬಸ್ಸಿನಲ್ಲಿ ಹೊರಟದ್ದು ಇತ್ಯಾದಿ ಇತ್ಯಾದಿ ಹೇಳಲಾರಂಭಿಸಿದರು. ಅಮ್ಮ ಮಾವನಿಗೆ ಬರಹೇಳಿ ಕಾಗದ ಬರೆದಿದ್ದಳೆಂದು ಕೇಳಿ ನನಗೆ ಆಶ್ಚರ್ಯವಾಯಿತು. ನಾನು ಕುಳಿತಲ್ಲಿಂದಲೇ "ಅಮ್ಮಾ, ನೀನು ಮಾವಯ್ಯನಿಗೆ ಕಾಗದ ಬರೆದ ಸಮಾಚಾರ ಹೇಳಲೇ ಇಲ್ಲ" ಎಂದೆ.

"ಏನು ಮಹಾ ದೊಡ್ಡಮನುಷ್ಯ ಅಂತ ಹೇಳಬೇಕು?" ಎಂದು ಮೂದಲಿಸಿದರು ಮಾವ.

ಕಾಲು ಕೆರೆದುಕೊಂಡು ಜಗಳಕ್ಕೆ ಬರುತ್ತಾರೆಂದು ನನಗೆ ಆಗಲೇ ತಿಳಿಯಿತು. ಧ್ವನಿಯನ್ನು ಇಳಿಸಿ ನನ್ನ ಷರಟಿನ ಕಾಲರು ಹಿಡಿದು ಒಳಗೆ ಎಳೆದುಕೊಂಡು ಹೋಗಿ ಕಿವಿಯಲ್ಲಿ ಪಿಸುಗುಟ್ಟಿದರು, "ಏನು ದೊರೆ, ಏನೇನೋ ಕೇಳುತ್ತಾ ಇದೀನಲ್ಲ ನಿನ್ನ ವಿಷಯ ಅಂತೂ ಬಹಳ ಮುಂದಕ್ಕೆ ಬಂದಿದೀಯ. ಪರವಾಗಿಲ್ಲ, ಮನೆತನ ಲಕ್ಷಣವಾಗುತ್ತ ಇದೆ. ನಿನ್ನ ನೋಡಿ

ಎಂತಹವರೂ ಹೆಮ್ಮೆಪಡಬೇಕು."

ನಾನು ಅವರಿಂದ ಬಿಡಿಸಿಕೊಂಡು ದುರುಗುಟ್ಟಿಕೊಂಡು ನೋಡಿದೆ. ಪುನಃ ಅವರು "ಬಹಳ ಚೆನ್ನಾಗಿದೆ. ಏನೋ ಶಿಖರ ಇಡುತ್ತಾನೆ ಅಂತ ತಿಳಿದುಕೊಂಡಿದ್ದರೆ........ಮಣ್ಣು ಮುಕ್ಕೋ ಕೆಲಸ ಮಾಡುತ್ತ ಇದ್ದೀಯಲ್ಲ. ಎತ್ತು ಹಿಡಿತಕ್ಕೆ ಸಿಕ್ಕದೆಹೋದರೆ ಏನು ಮಾಡುತ್ತೇವೆ ಗೊತ್ತೆ? ಮೂಗು-ದಾರ ಹಾಕುತ್ತೇವೆ. ನೀನೂ ಹಾಗೆ ದಾರಿಗೆ ಬರದೆಹೋದರೆ ನಿನಗೂ ಅದೇ ಮಾಡಬೇಕಾಗುತ್ತೆ."

ಅಮ್ಮ ನಮ್ಮ ಸಂಭಾಷಣೆಯನ್ನು ಗಮನಿಸದಿದ್ದವಳ ಹಾಗೆ ಕುದಿ-ಯುವ ನೀರನ್ನೇ ನೋಡುತ್ತ ನಿಂತಿದ್ದಳು. ನನ್ನ ಪಕ್ಷ ವಹಿಸಿಕೊಂಡು ಬರುತ್ತಾಳೇನೋ ಎಂದುಕೊಂಡಿದ್ದೆ. ಆದರೆ ಅವಳೇ ಇದನ್ನೆಲ್ಲ ಏರ್ಪಾಟು ಮಾಡಿದ್ದರಿಂದ ಸುಮ್ಮನೆ ತಮಾಷೆ ನೋಡುತ್ತಾ ನಿಂತಿದ್ದಳು. ನನಗೆ ಏನು ಮಾಡಲೂ ತೋಚಲಿಲ್ಲ. ಜೊತೆಗೆ ಕೋಪವೂ ಬಂತು. ನಾನು ಅಲ್ಲಿ ನಿಲ್ಲದೆ ಹೊರಟುಬಂದೆ. ನನ್ನ ಮನೆಗೇ ಬಂದು ನನ್ನ ಮೇಲೆ ಜಗಳಕ್ಕೆ ಬರುತ್ತಿದ್ದಾ-ನಲ್ಲ! ನನಗೆ ಸಿಟ್ಟು ಉಕ್ಕಿಬಂತು. ಅಡುಗೆಮನೆಯಿಂದ ಹೊರಗೆ ಬಂದ-ಮೇಲೂ ಅಮ್ಮ, ಮಾವ ಪಿಸುಗುಟ್ಟುತ್ತಿರುವುದು ಕೇಳಿಸುತ್ತಿತ್ತು. ಅವಳು ಏನು ಹೇಳುತ್ತಿರಬಹುದೆಂದು ಊಹಿಸಿಕೊಂಡೆ. ಮತ್ತೆ ಚಾಪೆಯ ಮೇಲೆ ಹೋಗಿ ಕುಳಿತೆ.

ರೋಜಿ ನಾನು ಹೋದಾಗ ಯಾವ ಭಂಗಿಯಲ್ಲಿದ್ದಳೋ ಹಾಗೇ ಇದ್ದಳು. ದೇವಸ್ಥಾನಗಳಲ್ಲಿರುವ ಶಿಲಾಬಾಲಿಕೆಯ ಹಾಗೆ ಕಾಣುತ್ತಿತ್ತು. ಆಗಿನ ಭಾವ-ಭಂಗಿ. ಅದನ್ನು ನೋಡಿದೊಡನೆ ನನಗೆ ನನ್ನ ಪ್ರವಾಸಿಗಳ ಜೊತೆಯ ಜೀವ-ನದ ವೈವಿಧ್ಯದ ನೆನಪು ಬಂದು ನಿಟ್ಟುಸಿರುಬಿಡುವ ಹಾಗಾಯಿತು. ರೋಜಿ ಹೆದರಿದ್ದಳು.

"ಆತ ಯಾರು?"

"ಯಾರೋ ಒಬ್ಬರು, ಸ್ವಲ್ಪ ತಲೆ ತಿರುಗಿದೆ ಅಷ್ಟೆ. ಅವನ ವಿಚಾರ ಯೋಚನೆ ಮಾಡಬೇಡ ಹಾಯಾಗಿರು."

ರೋಜಿಗೆ ಇಷ್ಟೇ ಅಭಯ ಸಾಕಾಗಿತ್ತು. ನನ್ನ ಮಾರ್ಗದರ್ಶನವೊಂದೇ ಸಾಕಾಗಿತ್ತು. ಆತ ಬಂದಿದ್ದನ್ನೂ ರೋಜಿ ಮರೆತುಬಿಟ್ಟಿದ್ದಳು.

ಅವಳನ್ನು ನೋಡಿ ನನಗೇ ನನ್ನಲ್ಲಿ ನಂಬಿಕೆ ಹೆಚ್ಚಿತು.

" ರೋಜಿ, ನಿನ್ನ ಪಾಡಿಗೆ ನೀನು ಅಭ್ಯಾಸಮಾಡು " ಎಂದೆ.

" ಆದರೆ........ಆದರೆ........ಅವರು "

" ಅವರು ಬಂದಿಲ್ಲ ಅಂತ ಅಂದುಕೊಂಡುಬಿಡು " ಅವಳಿಗೇನೋ ಧೈರ್ಯವಾಗಿ ಹೇಳಿಬಿಟ್ಟೆ. ಆದರೆ ನನಗೆ ಮನಸ್ಸಿನಲ್ಲಿ ಅಳುಕು. ಮಾವಯ್ಯ-ನವರು ಏನು ಹೇಳಿಬಿಡುತ್ತಾರೋ ಎಂದು ಒಂದೇ ಭಯ. ಆದರೂ ಹೇಳಿದೆ:

" ನನ್ನನ್ನು ಬಿಟ್ಟು ನೀನು ಯಾರ ವಿಷಯಾನೂ ಯೋಚನೆ ಮಾಡ-ಬೇಕಾಗಿಲ್ಲ. ಇದು ನನ್ನ ಮನೆ. ನನ್ನನ್ನು ಕಂಡರೆ ಇಷ್ಟವಿಲ್ಲದೋರು ಈ ಮನೆಗೆ ಬರಬೇಕಾಗಿಲ್ಲ. "

ಇದನ್ನೆಲ್ಲ ಅವಳ ಹತ್ತಿರ ಯಾಕೆ ಹೇಳಬೇಕಾಗಿತ್ತು ? ಅಂತೂ ಅವಳು ತನ್ನ ಅಭ್ಯಾಸವನ್ನು ಮುಂದುವರಿಸಿದಳು. ನಾನು ಅವಳಿಗೆ ಪಾಠ ಹೇಳಿ-ಕೊಟ್ಟ ಗುರುವೋ ಎನ್ನುವ ಹಾಗೆ ಅವಳ ನಾಟ್ಯವನ್ನು ನೋಡುತ್ತ ಕುಳಿತೆ. ಮಾವ ಅಡುಗೆಯ ಮನೆಯಿಂದ ಇಣಿಕಿ ನೋಡಿದ್ದನ್ನು ನೋಡಿ ನಾನು ಇನ್ನಷ್ಟು ಏಕಾಗ್ರತೆಯಿಂದ ರೋಜಿಯ ನಾಟ್ಯವನ್ನು ನೋಡತೊಡಗಿದೆ. ಸಾಲದ್ದಕ್ಕೆ ಹೀಗೆ ಮಾಡು, ಹಾಗೆ ಮಾಡು ಎಂದು ಸಲಹೆ ಬೇರೆ ಕೊಡ-ಲಾರಂಭಿಸಿದೆ. ನನ್ನ ಮಾವ ಅಡುಗೆ ಮನೆಯಿಂದಲೇ ಇದನ್ನೆಲ್ಲಾ ನೋಡ-ಲಾರಂಭಿಸಿದರು. ರೋಜಿ ತನ್ನದೇ ಆದ ಕೋಣೆಯಲ್ಲಿ ಒಬ್ಬಳೇ ಅಭ್ಯಾಸ ಮಾಡುವಷ್ಟು ಏಕಾಗ್ರತೆಯಿಂದ ನಾಟ್ಯ ಮಾಡತೊಡಗಿದಳು. ಮಾವ ಅಡುಗೆ ಮನೆಯಿಂದ ಹೊರಗೆ ಬಂದು ತಾನೂ ನಾಟ್ಯವನ್ನು ನೋಡತೊಡ-ಗಿದರು. ಕಣ್ಣು ಕೋಪದ ಕಿಡಿ ಕಾರುತ್ತಿದ್ದವು. ನಾನು ಅವರನ್ನು ಲಕ್ಷಿಸಲೇ ಇಲ್ಲ. ರೋಜಿಯ ನಾಟ್ಯವನ್ನು ಒಂದು ನಿಮಿಷ ನೋಡುತ್ತಿದ್ದು ಅನಂತರ—

" ಇದೇನೋ ನಿನ್ನ ಉದ್ಯೋಗ, ಲಕ್ಷಣವಾಯಿತು. ಕುಣಿಯೋ ಹೆಂಗಸಿಗೆ ತಾಳ ಹಾಕೋವಂತಹ ವಂಶೋದ್ಧಾರಕ ನಮ್ಮ ಮನೇಲಿ ಹುಟ್ಟುತ್ತಾನೆಂದು ನಾವು ಕನಸಿನಲ್ಲೂ ಎಣಿಸಿರಲಿಲ್ಲ. "

ಅವರನ್ನು ಎದುರಿಸೋದಕ್ಕೆ ನನ್ನಲ್ಲಿದ್ದ ಧೈರ್ಯವನ್ನೆಲ್ಲ ಒಂದು-ಗೂಡಿಸಿಕೊಳ್ಳಲು ಒಂದು ನಿಮಿಷ ಸುಮ್ಮನಿದ್ದೆ. ನಾನು ಸುಮ್ಮನಾದುದನ್ನು ನೋಡಿ ಮಾವ ನಾನು ಹೆದರಿದೆನೆಂದೇ ತಿಳಿದಿರಬೇಕು.

"ನಿಮ್ಮಪ್ಪನ ಆತ್ಮಕ್ಕೆ ನಿಜವಾಗಿ ಶಾಂತಿ ಸಿಗುತ್ತೆ. ಪಾಪ, ಮಗ ಕುಣಿಯೋ ಹೆಂಗಸಿನ ಕಾಲಿನ ಹತ್ತಿರ ಬಿದ್ದು ಹೊರಳಾಡೋದನ್ನ ನೋಡೋ-ದಕ್ಕೆ ಪುಣ್ಯ ಮಾಡಿರಬೇಕು."

ನನ್ನನ್ನು ರೇಗಿಸಲೇಬೇಕೆಂದು ಪಣ ತೊಟ್ಟಿದ್ದರೇನೋ. ನಾನು ಹಿಂತಿ-ರುಗಿ ಹೇಳಿದೆ:

"ಮಾವಯ್ಯ, ನಿಮ್ಮ ತಂಗೀನ ನೋಡೋದಕ್ಕೆ ಬಂದಿದ್ದರೆ ಒಳಗೆ ಹೋಗಿ ಅವಳ ಜೊತೆ ಇರಿ. ನಾನಿರೋ ಜಾಗಕ್ಕೆ ಯಾಕೆ ಬರುತ್ತೀರಿ?"

"ಸದ್ಯ ಮಾತಾಡೋದಕ್ಕಾದರೂ ಬರುತ್ತದಲ್ಲ. ನೀನಾಗಿ ದಾರಿಗೆ ಬಂದೆಯೋ ಸರಿ, ಇಲ್ಲದೆಹೋದರೆ ಮೂಗಿಗೆ ಮೂಗುದಾರ ಇದ್ದೇ ಇದೆ" ಎಂದು ಮಾವಯ್ಯ ಅಲ್ಲಿಂದ ಕದಲದೆ ನೆಲದ ಮೇಲೆ ಕೂತು ಕಾಫಿ ಕುಡಿಯ-ಲಾರಂಭಿಸಿದರು.

"ಸ್ವಲ್ಪ ಮಾನ–ಮರ್ಯಾದೆಯಿಂದ ಮಾತಾಡಿ" ಎಂದೆ. ಆದರೆ ಮಾವಯ್ಯ ನನ್ನ ಕಡೆ ನೋಡದೆ ರೋಜಿಯ ಕಡೆ ತಿರುಗಿ—

"ಏಯ್......ಇಲ್ಲಿ ನೋಡು, ಕೈಕಾಲು ತಿರುಗಿಸೋದನ್ನು ಬಿಟ್ಟು ನಾನು ಹೇಳೋದನ್ನು ಕೇಳು. ನೀನು ನಮ್ಮ ಮನೆಯವಳೋ?"

ರೋಜಿ ಮಾತಾಡದೆ ನಾಟ್ಯವನ್ನು ನಿಲ್ಲಿಸಿಬಿಟ್ಟು ಅವರನ್ನೇ ನೋಡ-ತೊಡಗಿದಳು. ಉತ್ತರಕ್ಕಾಗಿ ಸ್ವಲ್ಪ ಹೊತ್ತು ಕಾಯ್ದು, ಉತ್ತರ ಬರದೇ ಹೋಗಲು ಮತ್ತೆ ಪ್ರಾರಂಭಿಸಿದರು:

"ನೀನು ನಮ್ಮ ಮನೆಯೋಳಲ್ಲ, ನಮ್ಮ ಜಾತಿಯವಳೋ? ಅಲ್ಲ, ನಮ್ಮ ಪಂಗಡದವಳೋ? ಅಲ್ಲ. ನಮಗೆ ನೀನು ಗೊತ್ತೆ? ಇಲ್ಲ. ಈ ಮನೆಗೂ ನಿನಗೂ ಸಂಬಂಧವಿದೆಯೇ? ಇಲ್ಲ. ಹಾಗಾದ ಮೇಲೆ ಇಲ್ಲಿ ಯಾಕೆ ಇದೀಯಾ? ನೀನು ಎಷ್ಟೇ ಆಗಲಿ ಕುಣಿಯೋ ಹೆಂಗಸು, ವೇಶ್ಯೆ. ನಿಮ್ಮನ್ನ ನಮ್ಮ ಮನೆಗಳಲ್ಲಿ ಸೇರಿಸೋದೇ ಇಲ್ಲ. ತಿಳೀತೆ? ನೋಡೋಕೆ ಒಳ್ಳೆ ಹೆಂಗಸಿನ ಹಾಗೆ ಕಾಣುತ್ತಿ. ಬುದ್ಧಿವಂತೆಯ ಹಾಗೆ ಕಾಣುತ್ತಿ. ನೀನು ನಮ್ಮಂತವರ ಮನೆಯಲ್ಲಿ ಇರಬಾರದು. ನಿನ್ನನ್ನು ಯಾರಾದರೂ ಅಕ್ಷತೆ ಕೊಟ್ಟು ಕರೆದರೆ? ಇಲ್ಲ. ಒಂದು ವೇಳೆ ಕರೆದರೂ ಬರಬಾರದು. ನೀನು ನಮ್ಮ ಮನೇಲಿ ಇರೋಕೆ ಸಾಧ್ಯವೇ ಇಲ್ಲ. ಏನೂ ಅರಿಯದ ಈ ಹುಡು-

ಗನ ಮನಸ್ಸನ್ನು ಕೆಡಿಸಿಕೊಂಡು, ಇರೋ ಗಂಡನ್ನ ಬಿಟ್ಟುಬಿಟ್ಟು ಹೀಗೆ ಇರಬಾರದು."

ಇದನ್ನು ಕೇಳಿ ರೋಜಿ ನೆಲಕ್ಕೆ ಕುಸಿದು ಮುಖವನ್ನು ಮುಚ್ಚಿ-ಕೊಂಡಳು. ಅದನ್ನು ನೋಡಿ ನನ್ನ ಮಾವನಿಗೆ ಸಂತೋಷವಾಯಿತು.

"ನೋಡು, ಸುಮ್ಮನೆ ಅತ್ತು ಪ್ರಯೋಜನವಿಲ್ಲ. ನಾವು ಯಾಕೆ ಈ ಮಾತೆಲ್ಲ ಹೇಳುತ್ತಾ ಇದೀವಿ ಅನ್ನೋದನ್ನ ಮೊದಲು ಅರ್ಥಮಾಡಿಕೋ. ಮುಂದಿನ ರೈಲಿನಲ್ಲಿ ಗಂಟುಮೂಟೆ ಕಟ್ಟಿಕೊಂಡು ಹೊರಟುಹೋಗಬೇಕು. ಹೋಗುತ್ತೀನಿ ಅಂತ ಮಾತು ಕೊಡು. ನಿನ್ನ ರೈಲು ಚಾರ್ಜು ನಾವು ಕೊಡುತ್ತೇವೆ."

ರೋಜಿ ಬಿಕ್ಕಿ-ಬಿಕ್ಕಿ ಅತ್ತಳು. ನಾನು ಹುಚ್ಚನಾದೆ. ಮಾವಯ್ಯನ ಮೇಲೆರಗಿ ಅವರ ಕೈಯಲ್ಲಿದ್ದ ಕಾಫಿ ಬಟ್ಟಲನ್ನು ತಳ್ಳಿ—

"ತೊಲಗು ಮನೆಬಿಟ್ಟು" ಎಂದು ಚೀರಿದೆ.

"ಓಹೋ, ನನ್ನನ್ನೇ ಮನೆಬಿಟ್ಟು ತೊಲಗು ಅಂತ ಹೇಳೋ ಅಷ್ಟರ-ಮಟ್ಟಿಗಾದೆಯಾ? ನನ್ನನ್ನು ಮನೇಬಿಟ್ಟು ಹೋಗು ಅಂತ ಹೇಳೋ ಕುನ್ನಿ-ಮರಿ. ನೀನು ಯಾರೋ? ನಿನ್ನನ್ನು ತೊಲಗಿಸುತ್ತೀನಿ ನೋಡುತ್ತ ಇರು. ಇದು ನನ್ನ ತಂಗಿ ಮನೆ. ಸೂಳೇರ ಜೊತೆ ಕುಣೀಬೇಕು ಅಂತ ಇಷ್ಟವಿದ್ದರೆ ನೀನು ತೊಲಗು ಮನೆಬಿಟ್ಟು."

ಅಮ್ಮ ಅಡುಗೆಯ ಮನೆಯಿಂದೋಡಿ ಬಂದು ಕಣ್ಣೀರು ಸುರಿಸುತ್ತಾ ರೋಜಿಗೆ ಹಿಡಿ ಶಾಪ ಹಾಕಿದಳು.

"ಅಯ್ಯೋ ತಾಯಿ, ಈಗಲಾದರೂ ನಿನ್ನ ಹೊಟ್ಟೆ ತಣ್ಣಗಾಯಿತೆ? ಹೆಣ್ಣು ಪಿಶಾಚಿಯಾಗಿ ಮನೆಗೆ ಬಂದೆಯಲ್ಲ. ಎಲ್ಲಿಂದ ಬಂದೆಯೋ ಬಂದೆ. ನೀನು ಕಾಲಿಟ್ಟ ಒಂದು ಗಳಿಗೆಯಿಂದ ಮನೆಯ ಸರ್ವನಾಶ ಪ್ರಾರಂಭ-ವಾಯಿತಲ್ಲೇ. ಎಷ್ಟೋ ವೈನವಾಗಿತ್ತಲ್ಲೇ ನಮ್ಮ ಸಂಸಾರ. ಸರ್ಪದ ಹಾಗೆ ಬಂದು ಸೇರಿಕೊಂಡು ವಿಷ ಬೆರೆಸಿಬಿಟ್ಟೆಯಲ್ಲೇ. ಈ ಹುಡುಗನಿಗೆ ಏನು ಮಂಕುಬೂದಿಯನ್ನು ಎರಚಿಬಿಟ್ಟಿದ್ದೀಯೋ? ಎಷ್ಟೋ ನೀತಿವಂತನಾಗಿದ್ದ ನನ್ನ ಕಂದ. ನಿನ್ನ ಮೇಲೆ ಕಣ್ಣುಹಾಕಿದ್ದೇ ಹಾಕಿದ್ದು. ಅವನು ಮುಳುಗಿ-ಹೋದ. ನೀನು ಹಾವಾಡಿಗನ ಹತ್ತಿರ ಹೋದೆ ಎಂದು ಹೇಳಿದಾಗಲೇ

ನನ್ನ ಎದೆ ಧಸಕ್ ಎಂದಿತು" ಅಮ್ಮನನ್ನು ನಾನು ತಡೆಯಲಿಲ್ಲ. ಎದೆಯ-ಲ್ಲಿದ್ದ ವಿಷವನ್ನೆಲ್ಲಾ ಕಕ್ಕುಬಿಡಲೆಂದು ಸುಮ್ಮನಿದ್ದೆ.

ಅಮ್ಮ ಬರುತ್ತಲೇ ರೋಜಿ ತಲೆಯನ್ನು ಮೇಲಕ್ಕೆತ್ತಿದ್ದಳು.

"ಅಮ್ಮಾ, ನಾನು ಹೊರಟುಹೋಗುತ್ತೇನೆ. ದಯವಿಟ್ಟು ಇಂತಹ ಕಠಿಣ ಮಾತುಗಳನ್ನಾಡಬೇಡಿ. ಇಷ್ಟು ದಿನ ತಾಯಿಗಿಂತ ಹೆಚ್ಚಾಗಿ ನೋಡಿ-ಕೊಂಡಿರಿ."

ಮಾವಯ್ಯ ಮಧ್ಯೆ ಬಾಯಿಹಾಕಿದ, "ಹೌದು ಅಮ್ಮಯ್ಯ, ನೀನು ಮಾಡಿದ್ದು ಶುದ್ಧ ತಪ್ಪು. ಮೊದಲು ಬಂದಾಗಲೇ ಅವಳಿಗೆ ಖಂಡಿತವಾಗಿ ನಮ್ಮನೇಲಿರೋದು ಸಾಧ್ಯವಿಲ್ಲ ಅಂತ ಹೇಳಿಬಿಡಬಾರದಾಗಿತ್ತೆ?"

ಈ ಮನುಷ್ಯನನ್ನು ಹೇಗೆ ಮನೆಯಿಂದ ಕಳುಹಿಸಬೇಕೆಂದು ನನಗೆ ತಿಳಿಯಲಿಲ್ಲ. ಮನಸ್ಸಿಗೆ ಬಂದಕಡೆ ಕುಳಿತು, ಮನಸ್ಸಿಗೆ ಬಂದಹಾಗೆ ಮಾತಾಡುತ್ತಿದ್ದ. ನಾನೇ ಎದ್ದು ಅವನನ್ನು ಮನೆಯಿಂದ ದಬ್ಬಿಬಿಡುವ ಹೊರತೂ ಮಾವಯ್ಯ ಹೋಗುವಹಾಗಿರಲಿಲ್ಲ. ರೋಜಿ ಉಳಿಯುವ ಹಾಗೂ ಇರಲಿಲ್ಲ. ಆದರೆ ಅವನ ಮೇಲೆ ಜಗಳಕ್ಕೆ ಹೋದರೆ ನನ್ನನ್ನು ಹೊಡೆದು ಕೆಳಗುರುಳಿಸುವುದು ಖಂಡಿತ. ಅಮ್ಮನಾದರೂ ಅಣ್ಣ ಬಂದನೆಂದ ಮಾತ್ರಕ್ಕೆ ಹೀಗೆ ನಡೆದುಕೊಳ್ಳುವುದೇ? ನಾನು ನೇರವಾಗಿ ರೋಜಿಯ ಹತ್ತಿರ ಹೋಗಿ ನನ್ನ ಕೈಯಿಂದ ಅವಳ ಸೊಂಟವನ್ನು ಬಿಗಿದು ಅವಳ ಕಿವಿಯಲ್ಲಿ ಉಸುರಿದೆ—

"ಥೂ ನಾಚಿಕೆಗೇಡಿ" ಎಂದು ಚೀರಿದ ಮನುಷ್ಯ.

ನಾನು ಅವನ ಮಾತಿಗೆ ಕಿವಿಗೊಡದೆ—

"ರೋಜಿ, ಅವರು ಏನು ಬೇಕಾದರೂ ಹೇಳಿಕೊಳ್ಳಲಿ. ಸುಮ್ಮನೆ ಕೇಳದವಳ ಹಾಗೆ ಇದ್ದುಬಿಡು. ನಾನು ಇಲ್ಲಿ ಇರುತ್ತೀನಿ, ನೀನೂ ಇಲ್ಲೇ ಇರುತ್ತೀಯಾ? ಈ ಏರ್ಪಾಟು ಯಾರಿಗೆ ಹಿಡಿಸುವುದಿಲ್ಲವೋ ಅವರು ಮನೆ ಬಿಟ್ಟು ಹೊರಡಲಿ" ಎಂದೆ.

ಮಾವ, ಅಮ್ಮ ಇಬ್ಬರೂ ಒಂದಿಷ್ಟು ಹೊತ್ತು ಅಲ್ಲೇ ಕೂತಿದ್ದು ಗೊಣಗುತ್ತಿದ್ದರು. ಆಮೇಲೆ ಏನು ಹೇಳಲೂ ತೋಚದೆ ಅಡುಗೆಮನೆಗೆ ಹೊರಟುಹೋದರು. ನಾನು ಒಂದು ಮಾತೂ ಆಡಲಿಲ್ಲ. ರೋಜಿ ನನ್ನನ್ನೇ ಸಂಪೂರ್ಣವಾಗಿ ನಂಬಿ ಅವರ ಮಾತಿಗೆ ಕಿವಿಗೊಡದ್ದನ್ನು ನೋಡಿ ನನಗೆ

ಧೈರ್ಯವನ್ನು ತಂದಿತು. ಕುಳಿತಿದ್ದ ಕಡೆಯೇ ತಲೆಯನ್ನು ಮೇಲಕ್ಕೆತ್ತಿ ಕುಳಿತಳು. ಅಡುಗೆಯಾದ ಮೇಲೆ ಅಮ್ಮ ನನ್ನನ್ನು ಊಟಕ್ಕೆ ಕರೆದಳು. ನಾನು ರೋಜಿಗೂ ಬಡಿಸಿದೆ. ಅಷ್ಟುಹೊತ್ತಿಗಾಗಲೇ ಮಾವಯ್ಯನ ಊಟ-ವಾಗಿತ್ತು. ಅಮ್ಮ ಅವನು ತಂದಿದ್ದ ತರಕಾರಿಯನ್ನು ಅವನು ಹೇಳಿದ ಹಾಗೆ ಅಡುಗೆ ಮಾಡಿಬಿಟ್ಟಿದ್ದಳು. ಊಟಮಾಡಿ ಮಾವ ಜಗುಲಿಗೆ ಹೋಗಿ, ತನ್ನ ಅಂಗವಸ್ತ್ರವನ್ನು ಕೆಳಗೆ ಹಾಕಿ ತಾಂಬೂಲಸೇವನೆಗೆ ಕುಳಿತಿದ್ದ. ನಾವು ಊಟಮಾಡಿ ಬರುವಹೊತ್ತಿಗೆ ಜಗುಲಿಯ ತಣ್ಣನೆಯ ನೆಲದ ಮೇಲೆ ಮಲಗಿ ನಿದ್ದೆಹೋಗಿ ಗೊರಕೆ ಹೊಡೆಯುತ್ತಿದ್ದುದು ಕೇಳಿತು. ಬೆಳಗಿನ ಬಿರುಗಾಳಿಯ ನಂತರ ಮನೆ ಪ್ರಶಾಂತವಾಗಿತ್ತು. ಮಧ್ಯಾಹ್ನ ಮೂರೂವರೆಯ ವರೆಗೂ ಶಾಂತಿ ನೆಲೆಸಿತ್ತು.

ಮಾವಯ್ಯ ನಿದ್ದೆಯಾಗುತ್ತಲೇ ಜಗಳಕ್ಕೆ ಸಿದ್ಧವಾಗಿಯೇ ಬಂದರು.

"ರೈಲು ಹೊರಡುವುದಕ್ಕೆ ಇನ್ನೊಂದು ಘಂಟೆಯಿದೆ. ಪ್ರಯಾಣ ಮಾಡೋರು ಸಿದ್ಧವಾಗಿದೀರಿ ತಾನೆ?"

ಕಿಟಕಿಯ ಕೆಳಗೆ ಕುಳಿತಿದ್ದ ರೋಜಿಯನ್ನು ನೋಡಿದ ಮಾವ. ರೋಜಿ ತಲೆಯೆತ್ತಿದ್ದಳು. ಅವಳ ಮುಖದಲ್ಲಿ ಚಿಂತೆಯ ಗೆರೆ ಕಾಣಿಸಿಕೊಂಡಿತು. ನಾನೂ ಅವಳ ಪಕ್ಕ ಬಿಟ್ಟು ಕದಲಲಿಲ್ಲ. ಯಾರು ಏನೇ ಹೇಳಿದರೂ ಅವ-ಳಿಗೆ ನನ್ನ ಅಭಯ ಮಾತ್ರ ಸಂಪೂರ್ಣವಾಗಿತ್ತು. ಮಾವಯ್ಯ ಊರುಬಿಟ್ಟು ಹೊರಡೋ ವರೆಗೂ ನಮಗೆ ಕಾಟ ತಪ್ಪಿದ್ದಲ್ಲ. ಆದರೆ ಯಾವಾಗ ಹೊರಡು-ತ್ತಾನೋ ಯಾರಿಗೆ ಗೊತ್ತು?

ರೋಜಿ ಹೆದರಿದ್ದಳು. ನಾನು ಅವಳಿಗೆ ಹೆದರಬೇಡವೆಂದು ಸೂಚಿ-ಸಿದೆ. ನಮ್ಮ ತಾಯಿ ಒಳಗಿನಿಂದ ಬಂದು ರೋಜಿಯ ಹತ್ತಿರ ಹೋದಳು.

"ನೋಡು ತಾಯಿ, ನೀನು ಇದ್ದದ್ದು ನಮಗೇನೋ ಚೆನ್ನಾಗಿಯೇ ಇತ್ತು. ಆದರೆ ಈಗ ನೀನು ಹೊರಟುಬಿಡಬೇಕು." ಅಮ್ಮ ರೇಗಿದರೆ ಪ್ರಯೋಜನವಿಲ್ಲವೆಂದು ಬೇರೆ ಮಾರ್ಗವನ್ನು ಅವಲಂಬಿಸಿದ್ದಳು.

"ರೋಜಿ, ನೋಡು ನಾಲ್ಕೂವರೆಗೆ ರೈಲಿದೆ. ನಿನ್ನ ಸಾಮಾನನ್ನೆಲ್ಲ ಗಂಟುಕಟ್ಟಿದೀಯಾ? ಬಟ್ಟೆ–ಬರೆ ಅಲ್ಲಲ್ಲೇ ಬಿದ್ದಿರೋ ಹಾಗಿದೆ?"

ರೋಜಿ ಏನು ಹೇಳಲೂ ತೋರದೆ ತಲೆಯೆತ್ತಿದ್ದಳು. ನಾನು ಅವಳ

ಸಹಾಯಕ್ಕೆ ಹೋದೆ.

"ಅಮ್ಮಾ, ಅವಳು ಎಲ್ಲೂ ಹೋಗೋದಿಲ್ಲ."

"ರಾಜು, ಸ್ವಲ್ಪ ಯೋಚನೆಮಾಡಿ ನೋಡಪ್ಪ. ಅವಳು ಎಷ್ಟಾದರೂ ಇನ್ನೊಬ್ಬನ ಹೆಂಡತಿ. ಅವನ ಹತ್ತಿರ ಅವಳಿರೋದೇ ಚೆನ್ನ."

ಅಮ್ಮ ಹೇಳಿದ್ದರಲ್ಲಿ ಸಂದೇಹವೇ ಇರಲಿಲ್ಲ. ಆದರೆ ಅದರಿಂದಾಗುವ ಲಾಭವೇನು? ನಾನು ಸುಮ್ಮನೆ—

"ಅಮ್ಮಾ, ಅವಳು ಎಲ್ಲಿಗೂ ಹೋಗೋದು ಸಾಧ್ಯವಿಲ್ಲ. ಅವಳಾಯಿತು, ಈ ಮನೆಯಾಯಿತು."

ಆಗ ಅಮ್ಮ ತನ್ನ ಆಗ್ನೇಯಾಸ್ತ್ರವನ್ನು ಪ್ರಯೋಗ ಮಾಡಿದಳು. "ಅವಳು ಹೋಗದಿದ್ದರೆ ನಾನು ಹೋಗುತ್ತೇನೆ."

ಮಾವಯ್ಯ ಬೇರೆ ಮಧ್ಯೆ ಬಾಯಿಹಾಕಿದ:

"ಈ ಮನೆ ಬಿಟ್ಟರೆ ಅವಳಿಗೆ ಬೇರೆ ಗತಿಯಿಲ್ಲ. ನೀನು ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರುತ್ತಾಳೆ ಅಂದುಕೊಂಡರೆ ನನ್ನ ಜೀವ ಇರೋತನಕ ನನ್ನ ತಂಗಿ ಹೀಗೆ ಕಷ್ಟಪಡೋದಕ್ಕೆ ಆಸ್ಪದ ಕೊಡೋದಿಲ್ಲ."

"ನೀನೇನೂ ಹೋಗಬೇಕಾದ್ದಿಲ್ಲವ್ಮ."

"ಹಾಗಾದರೆ ಆ ನಾಚಿಕೆಗೆಟ್ಟೋಳ ಹಾಸಿಗೆ-ಪೆಟ್ಟಿಗೆ ಹೊರಗೆ ಹಾಕಿ ಅವಳನ್ನು ಬಾಗಿಲಿನಿಂದಾಚೆಗೆ ನೂಕು. ಆಗ ನಿಮ್ಮಮ್ಮ ಇರುತ್ತಾಳೆ. ಅವಳನ್ನು ಏನು ತಿಳಿದುಕೊಂಡಿದೀಯಾ? ಸೂಳೇರ ಸೇವೆ........"

"ಮುಚ್ಚು ಬಾಯಿ ಮಾವ." ನನ್ನ ಗಡಸಾದ ಧ್ವನಿಯನ್ನು ಕೇಳಿ ನನಗೇ ಆಶ್ಚರ್ಯವಾಯಿತು.

"ನೀನು ಯಾರೋ ಕುನ್ನಿ, ನನಗೆ ಕೇಳೋಕೆ? ಬೇಕಾದರೆ ಬಾಯಿ-ಮುಚ್ಚಿಕೋತೀನಿ, ಇಲ್ಲದಿದ್ದರೆ ಇಲ್ಲ. ನೀನು ಹೇಳಿದ ಹಾಗೆ ಕೇಳುತ್ತೇನೆಂದು ತಿಳಿದುಕೊಂಡೆಯಾ? ಈಗೇನು........ಅದನ್ನ...........ಕಳುಹಿಸುತ್ತೀಯೋ ಇಲ್ಲವೋ ಹೇಳು?"

"ಇಲ್ಲ, ಕಳಿಸೋದಿಲ್ಲ."

ಮಾವಯ್ಯ ರೋಜಿಯ ಕಡೆ ದುರುಗುಟ್ಟಿಕೊಂಡು ನೋಡಿ ಅಮ್ಮನ ಕಡೆ ತಿರುಗಿ ನಿಟ್ಟುಸಿರುಬಿಟ್ಟರು.

"ಹಾಗಾದರೆ ನೀನು ನಡಿ ಅಮ್ಮಯ್ಯ, ಗಂಟುಮೂಟೆ ಕಟ್ಟು. ಸಾಯಂಕಾಲದ ಬಸ್ಸಿನಲ್ಲಿ ಹೊರಟುಬಿಡೋಣ."

"ನಂದೇನಪ್ಪ ಒಂದು ನಿಮಿಷ ಅಷ್ಟೆ."

"ಬೇಡಮ್ಮಾ ನೀನು ಹೋಗಬೇಡ" ಎಂದು ನಾನು ಅಂಗಲಾಚಿದೆ.

"ಆ ಹುಡುಗೀ ಧೈರ್ಯ ನೋಡು. ತನಗೆ ಸಂಬಂಧವೇ ಇಲ್ಲದವಳ ಹಾಗೆ ನೋಡುತ್ತಾ ನಿಂತಿದ್ದಾಳೆ" ಎಂದ ಮಾವ.

"ಇಲ್ಲಮ್ಮಾ ನೀವು ಹೋಗಬೇಡಿ" ರೋಜಿಯೂ ಬೇಡಿಕೊಂಡಳು.

"ಓಹೋ! ಅಮ್ಮನಾಗಿ ಹೋದಳೋ ನಿನಗೆ. ಪರವಾಗಿಲ್ಲವೇ ಇನ್ನು ನಾನು ಮಾವನಾಗೋದೊಂದು ಬಾಕಿ" ಎಂದು ಮಾವ ನನ್ನ ಕಡೆ ನೋಡಿ ಹಲ್ಲುಕಿರಿದರು :

"ಏನೋ ಕುನ್ನಿ, ನಿಮ್ಮಮ್ಮನೇನೂ ಈ ಮನೆ ಬಿಟ್ಟು ಹೋಗಬೇಕಾಗಿಲ್ಲನ್ನು. ಅವಳ ಜೀವ ಇರೋತನಕ ಅವಳದು ಈ ಮನೆ. ಅವಳೇನಾದರೂ ಒಪ್ಪಿದ್ದರೆ ನಿನಗೆ ತೋರಿಸುತ್ತಿದ್ದೆ........ಮಾವಯ್ಯ ಅಂದರೆ ಏನೂಂತ. ನಮ್ಮ ಭಾವನಿಗೂ ಬುದ್ಧಿ ಇತ್ತು ದೊರೆ. ಮನೇಲಿ ಅರ್ಧ ಭಾಗ ನಿಂದು ಅಷ್ಟೆ." ಇದ್ದಕ್ಕಿದ್ದ ಹಾಗೆ ಮಾವ ಇಲ್ಲದ ತಂಟೆ–ತಕರಾರುಗಳನ್ನೆಲ್ಲಾ ತಂದು-ಬಿಟ್ಟರು. ಅವರೇನಾದರೂ ಅಮ್ಮನ ಸ್ಥಾನದಲ್ಲಿ ಇದ್ದುಬಿಟ್ಟಿದ್ದರೆ ನನ್ನ ಮೇಲೆ ಕೇಸು ಹಾಕಿ ಸುಪ್ರೀಂ ಕೋರ್ಟಿನ ವರೆಗೂ ಹೋಗಿ ಮನೆತನದ ಮಾನ-ವನ್ನು ಕಾಪಾಡಿದ ವಂಶೋದ್ಧಾರಕರಿಗೆಲ್ಲ ಸರಿಯಾಗಿ ಪಾಠ ಕಲಿಸುತ್ತಿದ್ದ-ರಂತೆ ಈ ಮಧ್ಯೆ ಮಾವನಿಗೆ ರೋಜಿಯ ಇರುವು ಮರತೇಹೋಗಿತ್ತು. ಆದರೆ ಅಮ್ಮ ಒಳಗಿನಿಂದ ಬಂದು, 'ನಾನು ಸಿದ್ಧ' ಎಂದಕೂಡಲೇ ನಾವು ಕೋರ್ಟು–ಕಚೇರಿಯ ಪ್ರಪಂಚದಿಂದ ರೋಜಿಯ ಪ್ರಪಂಚಕ್ಕೆ ಇಳಿದೆವು. ರಾಯನ ಕಾಲದಿಂದ ಆ ಮನೆಯಲ್ಲಿದ್ದ ಕಬ್ಬಿಣದ ಪೆಟ್ಟಿಗೆ ಪ್ರಯಾಣಕ್ಕೆ ಸಿದ್ಧವಾಗಿತ್ತು. ಕೈಯಲ್ಲಿದ್ದ ಬುಟ್ಟಿಯಲ್ಲಿ ಒಂದಿಷ್ಟು ಪಾತ್ರೆ–ಪದಾರ್ಥ-ವಿತ್ತು.

"ನೀನೇನೂ ಅವನ್ನ ಹಾಗೆ ನೋಡಬೇಕಾಗಿಲ್ಲ. ನಿಮ್ಮಮ್ಮನಿಗೆ ಮದುವೆಯಾದಾಗ ನಮ್ಮಪ್ಪ ಅವಳಿಗೆ ಕೊಟ್ಟ ಪಾತ್ರೆಗಳು. ನಿನ್ನ ಆಸ್ತಿ-ಯಲ್ಲ" ಎಂದ ಮಾವ.

ನಾನು ಅವನ ಕಡೆ ನೋಡದೆನೇ " ಅಮ್ಮನಿಗೆ ಏನು ಬೇಕೋ ತೆಗೆದು-ಕೊಳ್ಳಬಹುದು. ಯಾರು ಏನೂ ಅನ್ನೋಲ್ಲ."

" ಆಹಾ....ಅಲ್ಲವೇ ಮತ್ತೆ. ಅಮ್ಮನಿಗೆ ಅಷ್ಟು ಧಾರಾಳತನವಾದರೂ ತೋರಿಸುತ್ತೀಯಲ್ಲ."

ಮಾವಯ್ಯ ಇಷ್ಟು ಕಹಿಯಾಗಿ ಮಾತನಾಡಿದುದನ್ನು ನಾನು ನನ್ನ ಜೀವಮಾನದಲ್ಲೇ ನೋಡಿರಲಿಲ್ಲ. ಹುಡುಗರಿದ್ದಾಗ ಅವರ ಹೆಸರೆತ್ತಿದರೆ ನಡುಗುತ್ತಿದ್ದೆವು. ಆದರೆ ಮಾವಯ್ಯನ ಅಧಿಕಾರಯುತ ವಾಣಿಯನ್ನು ಹೀಗೆ ಕೇಳಿದ್ದು ಇದೇ ಮೊದಲು. ಅಮ್ಮನ ಮುಖದ ಮೇಲೆ ಕೋಪಕ್ಕಿಂತ ದುಃಖವೇ ಹೆಚ್ಚಾಗಿತ್ತು.

" ನನಗಿನ್ನೇನೂ ಬೇಡ, ಇಷ್ಟು ಸಾಕು" ಎಂದಳು. ಊಟಕ್ಕೆ ಮೊದಲು ದಿನವೂ ದೇವರ ಪೂಜೆಮಾಡಿ ಓದುತ್ತಿದ್ದ ಕೆಲವು ಪ್ರಾರ್ಥನಾ ಪುಸ್ತಕಗಳನ್ನು ತೆಗೆದುಕೊಂಡಳು. ದೇವರ ಪಟದ ಮುಂದೆ ಕಣ್ಣುಮುಚ್ಚಿ ಕುಳಿತು ಧ್ಯಾನಮಾಡುವ ತಾಯಿಯನ್ನು ಕಳೆದುಕೊಂಡೆನಲ್ಲ ಎಂದು ನನಗೆ ದುಃಖವಾಯಿತು. ನಾನು ಅಮ್ಮನ ಹಿಂದೆ ಹಿಂದೆ ಸುತ್ತಾಡಿದೆ. ಅಮ್ಮನ ಮನಸ್ಸನ್ನು ಎಲ್ಲಿ ತಿರುಗಿಸಿಬಿಡುತ್ತೇನೆಯೋ ಎಂದು ಮಾವಯ್ಯ ನನ್ನ ಹಿಂದೆಯೇ ಇದ್ದ. ಮಾವಯ್ಯ ಇದ್ದುದನ್ನು ಗಮನಿಸಿಯೂ ಗಮನಿಸದಂತೆ -

" ಅಮ್ಮಾ, ಯಾವಾಗ ವಾಪಸ್ಸು ಬರುತ್ತೀಯಾ ?" ಎಂದೆ.

ಅಮ್ಮ ಒಂದು ನಿಮಿಷ ಯೋಚಿಸಿ ಎಂದಳು—

" ಯಾವಾಗಂದ್ರೇ........ಆಗಲಿ ನೋಡೋಣ."

" ಯಾವಾಗೇನಂತೆ, ಲೈನ್ ಕ್ಲಿಯರ್ ಆದಕೂಡಲೇ ಬರುತ್ತಾಳೆ" ಎಂದ ಮಾವ.

ಮನೆಯ ಮೆಟ್ಟಿಲು ಇಳಿಯುತ್ತಾ "ದೇವರಿಗೆ ದೀಪ ಹಚ್ಚೋದು ಮರೆಯಬೇಡ" ಎಂದಳು ಅಮ್ಮ.

" ರಾಜು ನಿನ್ನ ಆರೋಗ್ಯ ನೋಡಿಕೋಪ್ಪ."

ಮಾವಯ್ಯ ಪೆಟ್ಟಿಗೆ ಹೊತ್ತುಕೊಂಡು ನಡೆದರು. ಅಮ್ಮ ಬುಟ್ಟಿ-ಯನ್ನು ಹಿಡಿದುಕೊಂಡಿದ್ದಳು. ನಾನು ಮೆಟ್ಟಿಲು ಮೇಲೆ ನೋಡುತ್ತಾ ನಿಂತಿದ್ದೆ. ಹೊಸಿತಿಲಿನ ಮೇಲೆ ರೋಜಿ ನಿಂತಿದ್ದಳು ನಾನು ಹಿಂತಿರುಗಿ

ನೋಡಲಿಲ್ಲ. ನನ್ನ ಕಣ್ಣಿನಿಂದ ಧಾರಾಕಾರವಾಗಿ ನೀರು ಹರಿಯುತ್ತಿತ್ತು.

ನೋಡಿದವರಿಗೆ ನಾವು ಗಂಡ–ಹೆಂಡಿರ ಹಾಗೇ ಕಾಣುತ್ತಿದ್ದೆವು. ರೋಜಿ ಅಡುಗೆ ಮಾಡಿ ಮನೆಯನ್ನು ಅಚ್ಚುಕಟ್ಟು ಮಾಡುತ್ತಿದ್ದಳು. ನಾನು ಸಾಮಾನ್ಯವಾಗಿ ಹೊರಗೆ ಹೋಗುತ್ತಲೇ ಇರಲಿಲ್ಲ. ಹೋದರೂ ಒಂದು ನಿಮಿಷ ಹಾಗೇ ಅಂಗಡಿಗೆ ಹೋಗಿ ಸಾಮಾನು ತೆಗೆದುಕೊಂಡು ಬಂದು-ಬಿಡುತ್ತಿದ್ದೆ. ಮನೆಯ ಕೆಲಸ ಇಲ್ಲದಾಗ ರೋಜಿ ನಾಟ್ಯವನ್ನು ಅಭ್ಯಾಸ ಮಾಡುತ್ತಿದ್ದಳು. ನನಗೆ ಅವಳ ಪ್ರೇಮಪೂಜೆಯನ್ನು ಬಿಟ್ಟರೆ ಬೇರೆ ಕೆಲ-ಸವೇ ಇರಲಿಲ್ಲ. ಪ್ರೇಮಪೂಜೆ ಬೇಸರಹಿಡಿದಿದೆಯೆಂದು ತಿಳಿಯದೆ ಇರಲಿಲ್ಲ. ಒಂದು ದಿನ ನನ್ನ ತೋಳತೆಕ್ಕೆಯಲ್ಲಿದ್ದ ರೋಜಿ—

"ಮುಂದಿನ ಯೋಚನೆ ಏನು?" ಎಂದಳು.

"ಆ ಯೋಚನೆ?" ಎಂದು ನಾನು ಸುಖಸ್ವಪ್ನದಿಂದ ಎಚ್ಚೆತ್ತೆ.

ರೋಜಿಯ ತುಟಿಯ ಮೇಲೆ ನಗು ಮೂಡಿತ್ತು.

"ಚಾಪೆಯ ಮೇಲೆ ಕುಳಿತು ನಾಟ್ಯ ನೋಡೋದು ಇಲ್ಲದೆ ಹೋದರೆ ಅಪ್ಪಿ ಮುದ್ದಿಸೋದನ್ನು ಬಿಟ್ಟರೆ ನಿಮಗೆ ಬೇರೆ ಯೋಚನೆಯೇ ಇಲ್ಲ. ಹೀಗಿದ್ದರೆ ಹ್ಯಾಗೆ? ಈಗ ನಾಲ್ಕು ಘಂಟೆ ಬೇಕಾದರೂ ಪ್ರದರ್ಶನ ಕೊಡೋ ಅಷ್ಟು ಅಭ್ಯಾಸ ಮಾಡಿದೀನಿ. ಪಕ್ಕವಾದ್ಯವಿದ್ದರೆ ಇನ್ನೂ ಸೊಗಸಾಗಿರುತ್ತೆ."

"ನಿನ್ನ ಪಕ್ಕದಲ್ಲಿ ಕುಳಿತು ತಾಳ ಹಾಕೋಕೆ ನಾನಿದೇನಲ್ಲ. ಇನ್ನು ಯಾವ ಪಕ್ಕವಾದ್ಯ ಬೇಕು?"

"ಸಾಕು ತಮಾಷೆ. ಇಷ್ಟು ದಿನ ಒಳಗಿದ್ದದ್ದು ಸಾಕು."

ಅವಳ ಉತ್ಸಾಹವನ್ನು ನೋಡಿ ನಾನು ತಮಾಷೆ ಮಾಡುವ ಪ್ರಯತ್ನ ಮಾಡಲಿಲ್ಲ.

"ನಾನೂ ಅದನ್ನೇ ಯೋಚಿಸುತ್ತಾ ಇದೀನಿ. ಏನಾದರೂ ಮಾಡ-ಬೇಕು."

"ನೋಡು, ರೋಜಿ ಅನ್ನೋ ಹೆಸರು ಚೆನ್ನಾಗಿಲ್ಲ" ಎಂದೆ. ಎರಡು ದಿನ ಯೋಚಿಸಿದ ಮೇಲೆ—

"ನಿಮ್ಮ ಮನೆಯವರು ನಟರಾದರೂ ಅವರಿಗೆ ಹೆಸರಿಡೋಕೆ ಸರಿ-ಯಾಗಿ ಗೊತ್ತಿರಲಾರದು. ಪ್ರದರ್ಶನಕ್ಕೆ ಮೊದಲು ನಿನ್ನ ಹೆಸರು ಬದಲಾಗ-

ಬೇಕು. ' ಮೀನಾಕುಮಾರಿ ' ಅಂತಿಟ್ಟುಕೊಂಡರೆ? "

" ಮೀನಾಕುಮಾರಿ ಅಂದರೇನು? ರೋಜಿ ಎಂದರೇನು? ನನ್ನ ಹೆಸರು ಬದಲಾಯಿಸಬೇಕಾಗಿಲ್ಲ. "

" ನಿನಗೆ ಗೊತ್ತಾಗೋಲ್ಲ ರೋಜಿ. ' ರೋಜಿ ' ಅಂದರೆ ನೀನು ಭರತ-ನಾಟ್ಯ ವಿಶಾರದೆ ಅನ್ನೋ ಭಾವನೇನೆ ಬರೋಲ್ಲ. ಎಲ್ಲೋ ಸರ್ಕಸ್ ಕುಣಿತವೆಂದುಕೊಂಡು ಬರುತ್ತಾರೆ. ಭರತನಾಟ್ಯ ಮಾಡಬೇಕಾದರೆ ಮಾಡೋರ ಹೆಸರೂ ಅಷ್ಟೇ ಗಂಭೀರವಾಗಿ ಕಾವ್ಯಮಯವಾಗಿರಬೇಕು. "

ರೋಜಿಗೂ ನಾನು ಹೇಳಿದ್ದು ಸರಿ ಎನಿಸಿತು. ಕಾಗದ–ಪೆನ್ಸಿಲ್ ತೆಗೆದುಕೊಂಡು ತನಗೆ ಹೊಳೆದ ಹೆಸರುಗಳನ್ನೆಲ್ಲ ಬರೆದಳು. ನಾನು ನನಗೆ ತಿಳಿದ ಹೆಸರುಗಳನ್ನೆಲ್ಲಾ ಬರೆದೆ. ಬರೆದರೆ ಹೇಗೆ ಕಾಣುತ್ತೆ? ಹೇಳಿದರೆ ಹೇಗೆ ಕಾಣುತ್ತೆ ಅಂತ ನೋಡಿದೆವು. ಪುಟಗಟ್ಟಲೇ ಬರೆದರೂ ಸರಿಯಾದ ಹೆಸರು ಸಿಗಲಿಲ್ಲ. ನಮಗೆ ಅದೊಂದು ಆಟವಾಯಿತು. ಯಾವ ಹೆಸರು ನೋಡಿದರೂ ಏನಾದರೂ ಒಂದೊಂದು ಕಲಂಕು ಕಾಣುತ್ತಿತ್ತು. ಮಧ್ಯ-ರಾತ್ರೇಲಿ ಎದ್ದು ಕುಳಿತು ರೋಜಿ—

"........ಅಂತ ಹೆಸರಿಟ್ಟುಕೊಂಡರೆ " ಎಂದಳು.

" ಎಲ್ಲಾ ಬಿಟ್ಟು ರಾಕ್ಷಸನ ಹೆಂಡತಿ ಹೆಸರಿಟ್ಟುಕೊಳ್ಳೋದೆ? " ಎಂದು-ಬಿಟ್ಟೆ.

ನಾಲ್ಕು ದಿನ ಯೋಚಿಸಿ ಸಾಕಾಗಿ ಕೊನೆಗೆ ' ನಳಿನಿ ' ಎನ್ನುವ ಹೆಸ-ರನ್ನು ಅವಳೂ ಒಪ್ಪಿದಳು. ನಾನೂ ಒಪ್ಪಿದೆ. ಚಿಕ್ಕದಾಗಿ ಚೊಕ್ಕದಾಗಿತ್ತು ಹೆಸರು.

ಹೊಸ ಹೆಸರಿನೊಂದಿಗೆ ರೋಜಿಯ ಹೊಸ ಜೀವನ ಪ್ರಾರಂಭ-ವಾಯಿತು. ಹೊಸ ಹೆಸರಿನ ಉದಯವಾದ ಮೇಲೆ ರೋಜಿಯ ಹಿಂದಿನ ಜೀವನದ ಸಮಾಧಿಯಾಗಿ ಹೋಯಿತು. ನಳಿನಿಯ ನಾಟ್ಯವನ್ನು ನೋಡಿದ ಜನ ರೋಜಿಯ ಕತೆಯನ್ನು ಮರೆತುಬಿಟ್ಟರು. ರೋಜಿಯನ್ನು ರೋಜಿ ಎಂದು ಕರೆಯುತ್ತಿದ್ದವನು ನಾನೊಬ್ಬನೇ. ಉಳಿದವರಿಗೆ ಅವಳು 'ನಳಿನಿ'. ನಾನು ಊರೊಳಗೆ ಸುತ್ತಾಡಿ ಜನರನ್ನು ಸಂಧಿಸಿ ರೋಜಿಗಾಗಿ ಕಾರ್ಯ-ಕ್ರಮ ಏರ್ಪಡಿಸುವುದರಲ್ಲಿ ಮಗ್ನನಾದೆ. ಎಲ್ಲಿ ಯಾವ ಸಭೆಯಾಗಲಿ ಅಲ್ಲಿ

ನಾನು ಹಾಜರು. ಅವಕಾಶ ಸಿಗುತ್ತದೆಯೇ ಎಂದು ಕಾಯುತ್ತಿದ್ದೆ. ಆಲ್ಬರ್ಟ್ ಮಿಷನ್ ಸ್ಕೂಲಿನ ಹುಡುಗರು ತಮ್ಮ ಸ್ಕೂಲು ದಿನಾಚರಣೆಯನ್ನು ಆಚರಿಸುತ್ತಾರೆಂದು ತಿಳಿದ ಕೂಡಲೆ ಅಲ್ಲಿಗೆ ಹೋಗಿ ಅಲ್ಲಿಯ ಗುಮಾಸ್ತನನ್ನು ನೋಡಿದೆ. ಅವನು ಒಂದಾನೊಂದು ಕಾಲದಲ್ಲಿ ನನ್ನ ಜೊತೆ ಜಗುಲಿಯ ಶಾಲೆಯಲ್ಲಿ ಓದಿದ್ದ—

"ಏನು ಸ್ವಾಮಿ, ಈ ಸಲವೂ ಷೇಕ್ಸ್‌ಪಿಯರನ ನಾಟಕ ಇಡೋದರ ಬದಲು ನೃತ್ಯಪ್ರದರ್ಶನ ಏರ್ಪಡಿಸಿದರೆ?"

ಭಾರತೀಯ ಸಂಸ್ಕೃತಿಯ ಒಂದು ಮುಖವಾದ ಭರತನಾಟ್ಯ ಕಲೆಯ ಮೇಲೆ ನಾನು ಕೊಟ್ಟ ಉಪನ್ಯಾಸವನ್ನು ಕೇಳಿಯೂ ನೃತ್ಯಪ್ರದರ್ಶನವನ್ನು ಏರ್ಪಡಿಸದೆ ಹೋದರೆ? ಹುಡುಗರೇ ಸೇರಿಕೊಂಡು ಮಾಡೋ ಈ ಸ್ಕೂಲು ದಿನಾಚರಣೆಯಲ್ಲಿ ಭರತನಾಟ್ಯದ ಕಾರ್ಯಕ್ರಮವಿಟ್ಟುಕೊಂಡರೆ ಸಮಂಜಸವಾಗುತ್ತದೆಯೇ? ಎಂದು ಯಾರೋ ಕೇಳಿದರು ಆದರೆ ಎಳೆ ಮಗುವಿನಿಂದ ಹಿಡಿದು ಮುದುಕರ ವರೆಗೂ ಹಿಡಿಸೋ ಕಲೆಯೆಂದರೆ ನಾಟ್ಯ. ಈ ಕಲೆಗೆ ಅವರು ಇವರು ಎನ್ನುವ ಭೇದವೇ ಇಲ್ಲವೆಂದು ನಾನು ನನ್ನ ಗುರಿ ಸಾಧಿಸಿದೆ. ಕೈಮಗ್ಗದ ಅಂಚಿನ ಪಂಚೆಯುಟ್ಟು, ಶಿಲ್ಕಿನ ಜುಬ್ಬ ಧರಿಸಿ, ಮೇಲೊಂದು ವಲ್ಲಿ ಹೊದೆದುಕೊಂಡು, ಕೈಗೊಂದು ಗಡಿಯಾರ ಕಟ್ಟಿಕೊಂಡು ಕನ್ನಡಕವೇರಿಸಿ ಬಂದಿದ್ದ ನನ್ನ ಮಾತನ್ನು ಅವರು ತಳ್ಳಿಹಾಕುವ ಹಾಗೇ ಇರಲಿಲ್ಲ. ನನಗೆ ನನ್ನ ರೀತಿಯೇ ಬೇರೆಯಾಗಿದೆ ಎನ್ನಿಸಿತು. ರೋಜಿಯ ಹಾಗೆ ನಾನೂ ಹೆಸರು ಬದಲಾಯಿಸಿಕೊಂಡರೆ? ಆದರೆ ಅದರಿಂದೇನೂ ಹೆಚ್ಚು ಲಾಭವಿರಲಿಲ್ಲ. ಅಂತೆಯೇ ಸುಮ್ಮನಾದೆ. ರೋಜಿಯಿಂದ ಕಲಿತ ಚೂರು-ಚಾರು ವಿಷಯವನ್ನೆಲ್ಲಾ ಸೇರಿಸಿ ಶಾಲೆಯ ಉಪಾಧ್ಯಾಯರ ಹತ್ತಿರ ಅಷ್ಟು ಸೊಗಸಾದ ಉಪನ್ಯಾಸವನ್ನು ಕೊಡಬಲ್ಲೆನೆಂದು ನನಗೆ ಅನ್ನಿಸಿರಲಿಲ್ಲ. ನಾನು ನನ್ನ ನರ್ತನದ ಒಂದೊಂದು ಭಾಗವನ್ನು ವಿವರಿಸಿ, ನಾನೇ ಕೈಕಾಲು ಆಡಿಸಿ ತೋರಿಸಿದಾಗಲಂತೂ ಅವರಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಅಷ್ಟೇ ಸಾಲದೆಂದು ಅವರಿಗೆ ಇನ್ನೊಂದು ಆಸೆಯನ್ನು ತೋರಿಸಿದೆ. ಮನೆಗೆ ಬಂದು ನಳಿನಿಯ ನಾಟ್ಯವನ್ನು ನೋಡಬಹುದು ಅವರು ತುಟಿ ಪಿಟಕ್ಕೆನ್ನದೆ ಒಪ್ಪಿಕೊಂಡರು. ನಳಿನಿಗೂ ನನಗೂ ಇದ್ದ ಸಂಬಂಧವನ್ನು ವಿವರಿಸಿ ನನ್ನ

ಸೋದರಮಾವನ ಮಗಳೆಂದೂ ಅವಳ ಊರಿನಲ್ಲಿ ಆಗಲೇ ಬೇಕಾದಷ್ಟು ನೃತ್ಯಪ್ರದರ್ಶನ ಇತ್ತಿದ್ದಾಳೆಂದೂ ವಿವರಿಸಿದೆ.

ಮಾರನೆಯ ದಿನ ರೋಜಿ ಹಜಾರವನ್ನು ಅಚ್ಚುಕಟ್ಟಾಗಿ ಸಿಂಗರಿಸಿ-ದಳು. ಗೋಲ್ಡ್ ಮೊಹರ್ ಹೂವುಗಳನ್ನು ತಂದು ಲೋಟದಲ್ಲಿ ನೀರುಹಾಕಿ ಅದರಲ್ಲಿಟ್ಟಿದ್ದಳು. ಹಾಸಿಗೆ-ಪೆಟ್ಟಿಗೆಗಳನ್ನೆಲ್ಲಾ ಹಾಲಿನ ಮೂಲೆಯೊಂದರಲ್ಲಿ ಜೋಡಿಸಿ ಅದಕ್ಕೊಂದು ಪಂಚೆಯನ್ನು ಹೊದಿಸಿ, ಅದರ ಮೇಲೊಂದು ಜಮುಖಾನೆಯನ್ನು ಹಾಸಿದ್ದಳು. ಚಾಪೆಯ ಹರಕಲು ಕಾಣದಹಾಗೆ ಮಡಿಸಿ ಇಟ್ಟಿದ್ದಳು. ಬಿಸಿಬಿಸಿ ಕಾಫಿಯನ್ನು ತಯಾರಿಸಿಟ್ಟಿದ್ದಳು. ಜನರ ಮನವನ್ನು ಸೆಳೆಯಲು ಏನು ಬೇಕೋ ಎಲ್ಲವನ್ನೂ ಮಾಡಿದ್ದಳು. ಇಬ್ಬರು ಅಧ್ಯಾ-ಪಕರು ಬಂದು ಬಾಗಿಲು ತಟ್ಟಿದಾಗ ನಾನು ಹೋಗಿ ಬಾಗಿಲು ತೆರೆದೆ. ರೋಜಿ ಅಡುಗೆಯ ಮನೆಗೊಂದು ತೆರೆಯನ್ನು ಕಟ್ಟಿ ಅದರ ಹಿಂದೆ ನಿಂತಿ-ದ್ದಳು. ನಾನು ಬಾಗಿಲು ತೆರೆದು 'ಓಹೋ ಬಂದಿರಾ' ಎಂದೆ. ಬರುವು-ದಿಲ್ಲವೆಂದು ಭಾವಿಸಿಕೊಂಡಿದ್ದವನ ಹಾಗೆ, ಅವರಿಗಾಗಿಯೇ ಕಾದುಕೊಂಡಿರು-ವುದು ಕಾಣಬಾರದೆಂದೇ ನನ್ನ ಆಸೆ

ಅವರನ್ನು ಚಾಪೆಯ ಮೇಲೆ ಕೂಡಿಸಿ ಒಂದೆರಡು ನಿಮಿಷ ರಾಜ-ಕೀಯವನ್ನು ಹರಟುತ್ತಿದ್ದು "ಆಮೇಲೆ ಸ್ವಲ್ಪ ಬಿಡುವು ಇದೇ ಏನು? ನನ್ನ ತಂಗಿಗೆ ಬಿಡುವಿದೆಯೇನೋ ಕೇಳಿ ನೋಡುತ್ತೇನೆ" ಎಂದೆ.

ನಾನು ಬಾಗಿಲಿನ ಪರದೆ ಸರಿಸಿ ಅಡುಗೆ ಮನೆಯೊಳಕ್ಕೆ ಹೋಗಿ ರೋಜಿಯನ್ನು ನೋಡಿ ಕಣ್ಣುಮಿಟುಕಿಸಿ ನಕ್ಕೆ. ಅವಳು ಅಲ್ಲಿಯೇ ನಿಂತು ನನ್ನನ್ನು ನೋಡಿ ನಕ್ಕಳು. ಆಗಲೇ ಪ್ರದರ್ಶನ ಆರಂಭಿಸಿಬಿಟ್ಟಿದ್ದೇವೆನಿಸಿತು. ರೋಜಿ ತಲೆ ಗಂಟುಹಾಕಿಕೊಂಡಿದ್ದಳು. ಹಣೆಗೆ ಕುಂಕುಮದ ಬೊಟ್ಟು. ಮುಖಕ್ಕೆ ತೆಳುವಾದ ಪೌಡರಿನ ಲೇಪನ. ಉಟ್ಟಿದ್ದುದು ತಿಳಿ ನೀಲಿಯ ಸೀರೆ. ಐದು ನಿಮಿಷ ಹಾಗೇ ಮೌನವಾಗಿದ್ದು ನಾನು ಅವಳನ್ನು ಹೊರಗೆ ಬರಹೇಳಿ ಬಂದೆ. ಮನೆಗೆ ಬಂದಿದ್ದವರು ಅವಳು ಬಂದೊಡನೆ ಹಲ್ಲುಕಿರಿದರು. "ಇವರು ನನ್ನ ಸ್ನೇಹಿತರು. ಕೂತುಕೋ" ಎಂದೆ. ರೋಜಿಯು ಮುಗುಳ್ನಗುತ್ತಾ ಬೇರೊಂದು ಸಣ್ಣ ಚಾಪೆಯ ಮೇಲೆ ಕುಳಿತಳು. ಭವಿಷ್ಯತ್ತಿನ ಸಂಕೇತ ಆ ನಗೆ ಎಂದುಕೊಂಡೆ. ಒಂದು ನಿಮಿಷ ಯಾರೂ ಮಾತಾಡಲಿಲ್ಲ. ಆಮೇಲೆ

ನಾನೇ "ಇವರು ನನ್ನ ಸ್ನೇಹಿತರು. ಸ್ಕೂಲಿನಲ್ಲಿ ಒಂದು ವಿವಿಧ ವಿನೋದಾವಳಿ ಏರ್ಪಡಿಸಬೇಕಂತೆ. ನೀನು ಸ್ವಲ್ಪ ಡ್ಯಾನ್ಸ್ ಮಾಡೋಕೆ ಸಾಧ್ಯವಿದೆಯೇ ಎಂದು ಕೇಳೋಕೆ ಬಂದಿದ್ದಾರೆ."

"ವಿವಿಧ ವಿನೋದಾವಳಿಗೆ? ಇನ್ನೂ ಏನೇನು ಐಟಂಗಳಿವೆ?"

"ಹ........ಹ........ಏನೂ ಇಲ್ಲ....ಏನೋ ಒಂದು ಫ್ಯಾನ್ಸಿ ಡ್ರೆಸ್ಸು, ಮಿಮಿಕ್ರಿ........ಇಂಥವೇ ಒಂದಿಷ್ಟು........"

"ಅವುಗಳ ಜೊತೆ ನನ್ನ ಕಾರ್ಯಕ್ರಮ ಹೇಗೆ ಸೇರಿಸುತ್ತೀರಿ? ಎಷ್ಟು ಟೈಂ ಕೋಡೋಕೆ ಸಾಧ್ಯ" ರೋಜಿ ಅವರ ಕಾರ್ಯಕ್ರಮಕ್ಕೆ ತಾನೇ ಮೇಲ್ವಿಚಾರಿಕೆಯಾಗಿಬಿಟ್ಟಿದ್ದಳು.

"ಪರವಾಗಿಲ್ಲ ತಾಯಿ, ನಿನುಗೆ ಎಷ್ಟು ಕಾಲ ಬೇಕೋ ಕೊಡೋಣ. ಒಂದು ಘಂಟೆ? ಒಂದೂವರೆ ಘಂಟೆ?"

"ನೋಡಿ, ಭರತನಾಟ್ಯವೆಂದರೆ ವಿವಿಧ ವಿನೋದಾವಳಿಯಲ್ಲ. ನಾಟ್ಯ ಮಾಡೋವಾಗ ಅದಕ್ಕೆ ತಕ್ಕ ಭಾವಪೂರ್ಣ ವಾತಾವರಣ ಕಲ್ಪಿಸಿಕೊಳ್ಳೋದಕ್ಕೇ ಎಷ್ಟೋ ಹೊತ್ತಾಗುತ್ತೆ."

ಅವರು ರೋಜಿ ಹೇಳಿದ್ದಕ್ಕೆ ತಲೆಯಲ್ಲಾಡಿಸಿ ತಮ್ಮ ಒಪ್ಪಿಗೆಯನ್ನು ಸೂಚಿಸಿದರು. ನಾನು ಮಧ್ಯೆ ಬಾಯಿಹಾಕಿದೆ:

"ನಳಿನಿ, ಈಗವರು ಬಂದಿರುವುದರ ಉದ್ದೇಶ್ಯವನ್ನು ಅಂದರೆ ನಿನ್ನ ನಾಟ್ಯದ ಒಂದು ಸ್ಯಾಂಪಲ್ ನೋಡಿ ಹೋಗೋಣಂತ. ಮಾಡೋಕೆ ಸಾಧ್ಯವಾಗುತ್ತದೆಯೇ? ಎಷ್ಟಾದರೆ ಅಷ್ಟು."

ರೋಜಿ ಮುಖ ಸಿಂಡರಿಸಿಕೊಂಡು ಗೊಣಗುತ್ತ ಸುಮ್ಮನಾದಳು. ನನ್ನ ಪ್ರಶ್ನೆಗೆ ಉತ್ತರ ಬರಲಿಲ್ಲ.

"ಇದೇನು? ಇವಳು ಹೀಗೆ ಸುಮ್ಮನೆ ಕುಳಿತುಬಿಟ್ಟರೆ? ಪಾಪ, ಅವರಿಗೆ ಎಷ್ಟೋ ಕೆಲಸ, ಹೋಗಬೇಕು" ಎಂದೆ ನಾನು.

"ಪರವಾಗಿಲ್ಲ, ಪರವಾಗಿಲ್ಲ. ಯೋಚನೆ ಮಾಡಲಿ ಪಾಪ" ಎಂದರು ಅವರು.

"ಆದರೆ........ಆದರೆ........ಪಕ್ಕವಾದ್ಯವಿಲ್ಲ, ಒಂದೂ ಇಲ್ಲ. ಪಕ್ಕವಾದ್ಯವಿಲ್ಲದಿದ್ದರೆ ನನಗೆ ಡ್ಯಾನ್ಸು ಮಾಡೋಕೆ ಸಾಧ್ಯವಿಲ್ಲ........"

"ಪರವಾಗಿಲ್ಲ ನಳಿನಿ. ಇದೇನು ಫುಲ್‌ಡ್ರೆಸ್ ಷೋ ಅಲ್ಲವಲ್ಲ. ಇವತ್ತಿನ ಪ್ರದರ್ಶನದಲ್ಲಿ ಮೈನ್ ಐಟಂ ನೀನೇ" ನಾನು ನಕ್ಕೆ. ಅವರೂ ನಕ್ಕರು.

"ನೀವು ಇಷ್ಟು ಹೇಳುತ್ತಿರುವಾಗ ಇಲ್ಲವೆಂದು ಹೇಗೆ ಹೇಳೋದು? ಆದರೆ ಕೆಟ್ಟುಹೋದರೆ ಮಾತ್ರ ನನ್ನ ಬಯ್ಯಬೇಡಿ" ಎಂದು ಪರದೆಯಲ್ಲಿ ಮರೆಯಾಗಿ ಕಾಫಿ ಬಟ್ಟಲುಗಳನ್ನು ತಂದು ಮುಂದಿಟ್ಟಳು.

"ಅಯ್ಯೋ ಇದೆಲ್ಲಾ ಯಾಕೆ? ಸುಮ್ಮನೆ ತೊಂದರೆ" ಎಂದರು.

ನಾನು ಅವರನ್ನು ಬಲವಂತ ಮಾಡಿದ ಮೇಲೆ ಕಾಫಿ ಕುಡಿದರು.

ಅವರು ಕಾಫಿ ಕುಡಿಯುತ್ತಿರುವಾಗ ರೋಜಿ ನಾಟ್ಯವನ್ನು ಆರಂಭಿಸಿದ್ದಳು. ನಾನು ಕೈಯಿಂದ ತಾಳ ಹಾಕತೊಡಗಿದೆ. ಅವರು ಬಾಯಿಬಿಟ್ಟುಕೊಂಡು ನೋಡತೊಡಗಿದರು. ರೋಜಿ ಒಂದು ನರ್ತನ ಮುಗಿಸಿ ಹಣೆಯ ಮೇಲೆ ಮೂಡಿದ ಬೆವರುಗಳನ್ನು ಒರೆಸಿಕೊಂಡು ಮತ್ತೆ ಆರಂಭಮಾಡುವುದಕ್ಕೆ ಮೊದಲು "ನೀವು ತಾಳ ಹಾಕಬೇಡಿ, ನನಗೆ ತಪ್ಪಿಹೋಗುತ್ತೆ" ಎಂದಳು.

"ಸರಿ, ಸರಿ" ಎಂದು ಬಲವಂತದಿಂದ ಹಲ್ಲುಕಿರಿದೆ. ಆದರೆ ಬಹಳ ತಿಳಿದವನ ಹಾಗೆ ತಾಳಹಾಕಲು ಹೋದಾಗ ರೋಜಿ ಹೀಗೆ ಹೇಳಿಬಿಟ್ಟಳಲ್ಲ ಎಂದು.

"ನೋಡಿ ನಳಿನಿಯ ತಾಳ ಜ್ಞಾನ ಎಂದರೆ ಅಷ್ಟಿಷ್ಟಲ್ಲ. ಬೇರೆಯವರು ತಾಳ ಹಾಕೋವಾಗ ಸ್ವಲ್ಪ ಹೆಚ್ಚುಕಡಿಮೆಯಾದರೂ ತಿಳಿದುಹೋಗುತ್ತೆ" ಎಂದೆ. ಅವರು ತಲೆದೂಗಿದರು.

ಅದನ್ನೂ ಮುಗಿಸಿ ರೋಜಿ—

"ಸಾಕೋ, ಇನ್ನೊಂದನ್ನು ನೋಡುತ್ತೀರೋ?" ಎಂದಳು.

ನನ್ನನ್ನು ಅಷ್ಟಾದರೂ ಕೇಳಿದಳಲ್ಲ ಎಂದು ನಾನು ಉಬ್ಬಿ "ಮಾಡು, ಮಾಡು. ಆ ಕೊನೇದೂ ಮಾಡಿಬಿಡು. ಅವರು ಇಷ್ಟಪಡುತ್ತಾರೆ" ಎಂದೆ.

ಅವರು ನಾಟ್ಯ ಪ್ರಪಂಚದಿಂದ ಕಣ್ಣು ತೆರೆದಾಗ ಅವರಲ್ಲಿ ಒಬ್ಬನಂತೂ,

"ನಿಜವಾಗಿ ನೋಡಿ, ನನಗೆ ಭರತನಾಟ್ಯವೆಂದರೆ ಆಗುತ್ತಿರಲಿಲ್ಲ. ಆದರೆ ಈಕೆಯ ನಾಟ್ಯಾನ ನೋಡೋದೇ ಒಂದು ರೀತಿಯ ವಿದ್ಯಾಭ್ಯಾಸ.

ಈಗ ತಿಳಿಯಿತು ನೋಡಿ, ಭರತನಾಟ್ಯ ಎಂದರೆ ಜನ ಯಾಕೆ ಬಾಯಿ-ಬಿಡುತ್ತಾರೆಂದು."

"ಆದರೆ ನಮ್ಮ ವಿವಿಧ ವಿನೋದಾವಳಿಯೆಲ್ಲಿ, ಈಕೆಯೆಲ್ಲಿ? ಆಕೆಯ ನಾಟ್ಯ ನೋಡೋ ಯೋಗ್ಯತೆ ನಮಗಿದೆಯೋ ಅನ್ನೋದೆ ಈಗ ಸಂದೇಹ. ಬಾಕಿ ಐಟಂಗಳನ್ನೆಲ್ಲ ಕಡಿಮೆಮಾಡಿ ಈಕೆಗೆ ಎಷ್ಟು ಹೊತ್ತು ಬೇಕೋ ಅಷ್ಟು ಹೊತ್ತು ಕೊಡುತ್ತೇವೆ."

"ಜನರ ಮಟ್ಟಕ್ಕೆ ನಾವಿಳಿದೆ ಅವರಿಗೆ ಒಳ್ಳೆ ಸಂಸ್ಕೃತಿಯ ರಸ-ದೂಟವನ್ನು ಮಾಡಿಸೋದೇ ನಮ್ಮ ಕರ್ತವ್ಯ" ಎಂದು ನಾನು ರೋಜಿಯ ಕಡೆ ತಿರುಗಿ ನೋಡಿದೆ.

"ನಾನೇನೋ ನನ್ನ ಕೈಲಾದಷ್ಟು ಮಾಡುತ್ತೇನೆ. ಆದರೆ ಪಕ್ಕವಾದ್ಯ-ದೋರನ್ನ ನೀವು ಒದಗಿಸಬೇಕು" ಎಂದಳು. ರೋಜಿಯ ಅಭಿಲಾಷೆ ನೆರ-ವೇರಿತೆಂದು ಬೇರೆ ಹೇಳಬೇಕೆ?

# 9

ನನ್ನ ಚಟುವಟಿಕೆಗಳು ಇದ್ದಕ್ಕಿದ್ದಂತೆಯೇ ನೂರ್ಮಡಿಯಾದವು. ಆಲ್ಬರ್ಟ್ ಸ್ಕೂಲಿನ ಕಾರ್ಯಕ್ರಮ ರೋಜಿಯ ನಾಟ್ಯಜೀವನಕ್ಕೆ ನಾಂದಿ-ಯಾಯಿತು. ಅಂದು ಮೊದಲುಗೊಂಡು ಅವಳ ವಿಜಯದ ಪತಾಕೆ ಗಗನ-ಕ್ಕೇರಿತು. ಅವಳ ಹೆಸರನ್ನು ಕೇಳದಿದ್ದ ಮಗುವೂ ಇರಲಿಲ್ಲ ಈಗ ಜನರಿಗೆ ರೋಜಿಯನ್ನು ಪರಿಚಯ ಮಾಡಿಕೊಡಬೇಕಾದ ಅವಶ್ಯಕತೆಯೇ ಇರಲಿಲ್ಲ. ಹಾಗೇನಾದರೂ ಮಾಡಲು ಹೋದರೆ ಅಪಹಾಸ್ಯಕ್ಕೆ ಗುರಿಯಾಗಬೇಕಿತ್ತು. ಅವಳ ಜೊತೆ ಹೋಗುತ್ತಿದ್ದುದರಿಂದ ನನಗೂ ಒಂದಿಷ್ಟು ಜನಪ್ರಿಯತೆ ಸಿಗುತ್ತಿತ್ತು. ಅವಳ ಪ್ರಖ್ಯಾತಿಗೆ ಕಾರಣ ಅವಳ ಪ್ರತಿಭೆ. ಜನ ಆ ಪ್ರತಿಭೆ-ಯನ್ನು ಗಮನಿಸಿದ್ದರು. ಅದರಲ್ಲಿ ನನ್ನ ಪಾತ್ರ ಎಷ್ಟು ಸಣ್ಣದು ಎನ್ನುವುದು ಈಗ ನನಗೆ ತಿಳಿಯುತ್ತದೆ. ಆದರೆ ಆಗ ಮಾತ್ರ ರೋಜಿ ಅಷ್ಟು ವಿಖ್ಯಾತ-ಳಾಗುವುದಕ್ಕೆ ನಾನೇ ಕಾರಣ ಎಂದುಕೊಂಡಿದ್ದೆ. ಮಾರ್ಕೊ ಕೂಡ ಅವಳ ಆ ಶಕ್ತಿಯನ್ನು ಕೊನೆಯ ವರೆಗೂ ಅದುಮಿಡಲು ಶಕ್ತನಾಗುತ್ತಿರಲಿಲ್ಲ ಎಂದೆನಿಸುತ್ತದೆ. ಎಂದೋ ಒಂದು ದಿನ ಅವಳು ಮುನ್ನುಗ್ಗಿ ಹೊರಟು-ಹೋಗುತ್ತಿದ್ದಳು. ಪಂಜರದ ಪಕ್ಷಿಯಲ್ಲ ಅವಳು. ನನ್ನನ್ನು ನಾನೇ ಎಷ್ಟೋ ಸಲ ಅಭಿನಂದಿಸಿಕೊಂಡಿದ್ದೆನೋ ಆಗ! ಎಷ್ಟೋ ಸಲ ನನ್ನ ಭುಜವನ್ನು ನಾನೇ ತಟ್ಟಿಕೊಂಡಿದ್ದೆನೋ! ಲಕ್ಷಾಂತರ ಜನ ಕುಳಿತು ಅವಳ ನಾಟ್ಯ ನೋಡುತ್ತಿರುವಾಗ ಅವರೆಲ್ಲರೂ ನನ್ನ ಕಡೆ ಕೈತೋರಿಸಿ "ಅಲ್ಲಿ ನೋಡಿ ಇದಾನೆ. ಅವನಿಲ್ಲದೆ ಹೋಗಿದ್ದರೆ ಈಕೆ........" ಎಂದೇ ಹೇಳುತ್ತಿದ್ದಾರೆಂದು ನನ್ನ ಭಾವನೆ. ಪ್ರತಿ ಕಾರ್ಯಕ್ರಮದಲ್ಲೂ ಮೊದಲ ಸಾಲಿನಲ್ಲಿ ಮಧ್ಯದ ಸೋಫ ನನಗೆ ಮೀಸಲು. ನಾನು ಅಲ್ಲಿಲ್ಲದೆ ಹೋದರೆ ನಳಿನಿಗೆ ನೃತ್ಯ ಮಾಡೋದು ಅಸಾಧ್ಯವೆಂದೂ ಹೇಳುತ್ತಿದ್ದೆ. ಬೇಕಾದ ಕಡೆಗಿಂತ ಬೇಡ-ದಿದ್ದ ಕಡೆಯೇ ಹೆಚ್ಚಾಗಿ ತಲೆದೂಗುತ್ತಿದ್ದೆ. ಆಗಾಗ ತಾಳಹಾಕುತ್ತಿದ್ದುದೂ ಉಂಟು. ಅವಳು ಕಣ್ಣು ಸಂಧಿಸಿದಾಗ ಮುಗುಳುನಕ್ಕು ಹುರಿದುಂಬಿಸು-

ತ್ತಿದ್ದೆ ಒಂದೊಂದು ಸಲ ಹಾಗಲ್ಲ ಹೀಗೆ ಎಂದು ವಿಮರ್ಶಾತ್ಮಕ ಸಲಹೆ-ಯನ್ನು ಕಣ್ಣಿನಿಂದಲೇ ಸೂಚಿಸುತ್ತಿದ್ದೆ. ಅಂದಿನ ಕಾರ್ಯಕ್ರಮದ ಅಧ್ಯ-ಕ್ಷರು ನನ್ನ ಪಕ್ಕದಲ್ಲೇ ಕುಳಿತುಕೊಳ್ಳುತ್ತಿದ್ದರು. ಆಗಾಗ ನನ್ನ ಕಡೆ ವಾಲಿ ನಾಟ್ಯದ ಬಗ್ಗೆ ಅವರ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ನನ್ನ ಹತ್ತಿರ ಮಾತಾಡುವುದೆಂದರೆ ಅವರಿಗೊಂದು ಹೆಮ್ಮೆಯ ವಿಷಯ ಹಾಗೂ ನಳಿನಿ-ಯೊಡನೆ ಮಾತಾಡಿದಷ್ಟು ಸಂತೋಷ.

ನಾನು ಸಮೀಪದಲ್ಲಿ ಬಂದು ಕುಳಿತು ಎಲ್ಲಾ ಸರಿಯಾಗಿದೆಯೆಂದು ಖಚಿತವಾದ ಮೇಲೆ ಕುಳಿತಲ್ಲಿಂದಲೇ ತೆರೆಯ ಪಕ್ಕದಲ್ಲಿದ್ದವನಿಗೆ ಸಂಜ್ಞೆ ಮಾಡುತ್ತಿದ್ದೆ. ಆಮೇಲೆಯೇ ಪರದೆ ಹೋಗುತ್ತಿದ್ದುದು. ಒಳಗೆ ಬಂದ-ಕೂಡಲೇ ಧ್ವನಿವರ್ಧಕ ಸರಿಯಾಗಿದೆಯೋ ಇಲ್ಲವೋ, ಕೊನೆಗೆ ಕಂಬಗಳು, ಛಾವಣಿ ಭದ್ರವಾಗಿದೆಯೋ ಇಲ್ಲವೋ ಎಂದು ಕೂಡ ನೋಡುವಂತೆ ನಟಿಸು-ತ್ತಿದ್ದೆ. ಇದರಿಂದ ನಳಿನಿಯ ಕಾರ್ಯಕ್ರಮಕ್ಕೆ ಭರ್ಜರಿ ಏರ್ಪಾಟಾಗು-ತ್ತಿತ್ತು. ನನ್ನನ್ನು ತೃಪ್ತಿಗೊಳಿಸಿ ಕೊನೆಗೊಮ್ಮೆ ನಾಟ್ಯ ಆರಂಭವಾಯಿ-ತೆಂದರೆ ಅವರು ಸಮಾಧಾನದ ಉಸಿರೆಳೆಯುತ್ತಿದ್ದರು. ನಾಟ್ಯಕ್ಕೆ ಹಣ ಬರುತ್ತಿತ್ತು. ನಾಟ್ಯವನ್ನು ನೋಡಲು ಜನ ಕಿಕ್ಕಿರಿದು ತುಂಬುತ್ತಿದ್ದರು. ಇಷ್ಟಾದರೂ ನಳಿನಿಯ ನಾಟ್ಯಪ್ರದರ್ಶನಕ್ಕೆ ನನ್ನ ಒಪ್ಪಿಗೆ ಕೊಟ್ಟು ಮಹ-ದುಪಕಾರ ಮಾಡಿದವನ ಹಾಗೆ ಆಡುತ್ತಿದ್ದೆ. ಸ್ವಲ್ಪವೂ ಕಾಲ ವಿಳಂಬ ಮಾಡುತ್ತಿರಲಿಲ್ಲ. ಕೊನೆ ಮೊದಲಿಲ್ಲದ ಕಾರ್ಯಕ್ರಮಕ್ಕೆ ಒಪ್ಪುತ್ತಲೂ ಇರಲಿಲ್ಲ. ವೇಳೆಯಾಯಿತೆಂದರೆ ನನ್ನ ಕೈಗಡಿಯಾರದ ಕಡೆ ನೋಡಿ ಮೆಲ್ಲಗೆ ತಲೆಯಾಡಿಸುತ್ತಿದ್ದೆ. ನಳಿನಿ ಅದನ್ನು ಅರ್ಥಮಾಡಿಕೊಂಡು ಕೊನೆಯ ನರ್ತನವನ್ನು ಮಾಡಿ ಕಾರ್ಯಕ್ರಮವನ್ನು ಮುಕ್ತಾಯಗೊಳಿಸುತ್ತಿದ್ದಳು. ಯಾರಾದರೂ ಇನ್ನೊಂದು ಐಟಂ ಎಂದು ಕೇಳಿದರೆ ನಾನು ನಕ್ಕುಬಿಡು-ತ್ತಿದ್ದೆ. ಬಡಪೆಟ್ಟಿಗೂ ಒಪ್ಪುತ್ತಿರಲಿಲ್ಲ. ಕೆಲವು ವೇಳೆ ಹಿಂದಿನಿಂದ ಕಾಗದ ಚೂರುಗಳಲ್ಲಿ ಆ ಐಟಂ, ಈ ಐಟಂ ಎಂದು ಅಭಿಲಾಷೆಗಳು ವ್ಯಕ್ತವಾಗು-ತ್ತಿದ್ದುದೂ ಉಂಟು. ಆದರೆ ಅಂತಹ ಚೂರು ಕಾಗದ ಬಂದಾಗ ನಾನು ಸಿಡುಗುಟ್ಟುವುದನ್ನು ನೋಡಿ ಕೊನೆಕೊನೆಗೆ ನನ್ನ ಹತ್ತಿರ ಅವನ್ನು ಕಳಿ-ಸುವುದಕ್ಕೆ ಜನ ಹೆದರುತ್ತಿದ್ದರು. ಒಂದುವೇಳೆ ಬಂದರೂ—

"ನಾನಲ್ಲ ಸಾರ್, ಯಾರೋ ಹಿಂದಿನಿಂದ ನನ್ನ ಹತ್ತಿರ ಕೊಟ್ಟರು" ಎನ್ನುತ್ತಿದ್ದರು. ನಾನು ಆ ಚೂರುಗಳನ್ನು ಓದಿ ಮುದುಡಿ ಮಾಡಿ ಸೋಫದ ಕೆಳಗೆ ಬಿಸಾಡುತ್ತಿದ್ದೆ. ಅಂತಹವುಗಳೆಲ್ಲ ನಳಿನಿಯ ಅರ್ಹತೆಗೆ ತಕ್ಕವಲ್ಲ ಎನ್ನುವಂತೆ ವರ್ತಿಸುತ್ತಿದ್ದೆ.

ಇನ್ನೇನು ಪರದೆ ಬೀಳಬೇಕು ಎನ್ನುವಷ್ಟರಲ್ಲಿ ಕಾರ್ಯದರ್ಶಿಯನ್ನು ಹತ್ತಿರ ಕರೆದು ಎನ್ನುತ್ತಿದ್ದೆ—"ಏನಪ್ಪಾ, ಕಾರು ಸಿದ್ಧವಾಗಿದೆ ತಾನೆ? ಈ ಗಲಾಟೆ ಮಧ್ಯೆ ಅವರನ್ನು ಕರಕೊಂಡು ಹೋಗೋಕೆ ನಾನು ಇಷ್ಟಪಡೋ-ದಿಲ್ಲ. ಸ್ಟೇಜಿನ ಆ ಕಡೆ ಕಾರು ನಿಲ್ಲಿಸಿರಿ. ಆಗಿಂದಾಗ್ಗೇ ಹೊರಟುಬಿಡುತ್ತೇವೆ." ಇದಂತೂ ಶುದ್ಧ ಸುಳ್ಳು. ನಿಜವಾಗಿಯೂ ಬೀದಿಯುದ್ದಕ್ಕೂ ಅವಳನ್ನು ಮೆರವಣಿಗೆ ಮಾಡಿಕೊಂಡು ಹೋಗಬೇಕೆನ್ನುವುದೇ ನನ್ನ ಆಸೆ. ಕಾರ್ಯ-ಕ್ರಮದಲ್ಲಿ ಅವಳಿಗೆ ದೊಡ್ಡ ಹೂವಿನ ಹಾರವನ್ನು ಹಾಕುತ್ತಿದ್ದರೂ, ನನಗೂ ಒಂದು ಹೂವಿನ ಹಾರ ಬೇಡ-ಬೇಡವೆಂತಲೇ ಹಾಕಿಸಿಕೊಳ್ಳುತ್ತಿದ್ದೆ.

"ಎಲ್ಲಾ ಬಿಟ್ಟು ನನಗೆ ಹಾರ ಹಾಕೋದಕ್ಕೆ ಯಾಕೆ ದುಡ್ಡು ಖರ್ಚು ಮಾಡುತ್ತೀರಿ?" ಎಂದು ಅಲಕ್ಷ್ಯದಿಂದ ಅದನ್ನು ತೋಳಿನ ಮೇಲೆ ಹಾಕಿ-ಕೊಂಡೋ ಇಲ್ಲದೇಹೋದರೆ ಜನರ ಗುಂಪಿನ ಮಧ್ಯದಲ್ಲೇ ಅದನ್ನು ನಳಿ-ನಿಯ ಕೈಗಿತ್ತು "ಇದೂ ನಿನಗೆ ಸಲ್ಲಬೇಕಾದದ್ದು" ಎಂದು ನನ್ನ ಹಾರ-ವನ್ನೂ ಅವಳೇ ಹಿಡಿದುಕೊಂಡು ಬರುವಹಾಗೆ ಮಾಡುತ್ತಿದ್ದೆ.

ಮನೆಗೆ ಬಂದು ಸೇರುವ ವರೆಗೂ ನಮ್ಮ ಆಡಂಬರವೇ ಆಡಂಬರ. ಆದರೆ ಮನೆಗೆ ಕಾಲಿಟ್ಟೊಡನೆಯೇ ರೋಜಿಯ ಗಾಂಭೀರ್ಯವೆಲ್ಲ ಎಲ್ಲೋ ಹಾರಿಹೋಗುತ್ತಿತ್ತು. ಒಂದೇ ಓಟಕ್ಕೆ ಹಾರಿಬಂದು ನನ್ನನ್ನು ಅಪ್ಪಿಕೊಳ್ಳು-ತ್ತಿದ್ದಳು.

"ಏಳೇಳು ಜನ್ಮಕ್ಕೂ ನಿಮ್ಮ ಋಣ ತೀರಿಸಲಾರೆ" ಎನ್ನುತ್ತಿದ್ದಳು.

ರೋಜಿಯ ಬಾಯಿಯಿಂದ ಈ ಮಾತು ಬಂದಾಗಲಂತೂ ನಾನು ಉಬ್ಬಿಹೋಗುತ್ತಿದ್ದೆ. ರೋಜಿ ಹಾರಗಳನ್ನು ಒದ್ದೆಬಟ್ಟೆಯಲ್ಲಿ ಸುತ್ತಿಡು-ತ್ತಿದ್ದಳು.

ಸಂಜೆಗೆ ಕಾರ್ಯಕ್ರಮವಿದ್ದರೆ ರಾತ್ರಿಯ ಅಡುಗೆ ಮಧ್ಯಾಹ್ನವೇ ತಯಾರಾಗುತ್ತಿತ್ತು. ಅಡುಗೆಯವನನ್ನು ಇಟ್ಟುಕೊಳ್ಳಬಹುದಾಗಿತ್ತು. ಆದರೆ

ರೋಜಿ —

" ಇರೋರಿಬ್ಬರಿಗೆ ಅಡುಗೆಯುವನೊಬ್ಬನೇ? ಸುಮ್ಮನೆ ದಂಡ. ನನಗೂ ಹೆಂಗಸು ಅನ್ನಿಸಿಕೊಂಡದ್ದಕ್ಕೆ ಅಡುಗೇನಾದರೂ ಮಾಡೋಕೆ ಬರಲಿ " ಎಂದುಬಿಟ್ಟಿದ್ದಳು.

ಅಂತೂ ರಾತ್ರಿ ಊಟಮಾಡಿದಾಗೆಲ್ಲ ಸಂಜೆಯ ಕಾರ್ಯಕ್ರಮದ ಮಾತು. ಪಕ್ಕವಾದ್ಯದವನು ತಾಳ ತಪ್ಪಿದ್ದನ್ನೋ ಅಥವಾ ಧ್ವನಿವರ್ಧಕ ಕೆಟ್ಟುಹೋದದ್ದನ್ನೋ ಹೇಳುತ್ತಿದ್ದಳು. ಊಟವಾದ ಮೇಲೆ ಮನಸ್ಸು ಬಂದರೆ ಒಂದಿಷ್ಟು ಹೊತ್ತು ನಾಟ್ಯವಾಡುತ್ತಿದ್ದಳು. ಇಲ್ಲದೆಹೋದರೆ ಸ್ವಲ್ಪಹೊತ್ತು ಪುಸ್ತಕವನ್ನು ಓದುತ್ತಿದ್ದು ಅನಂತರ ನಿದ್ದೆಹೋಗುತ್ತಿದ್ದೆವು.

ಹಲವಾರು ತಿಂಗಳಲ್ಲಿ ನಾನು ಹಳೇ ಮನೆಯನ್ನು ಬಿಡಬೇಕಾಗಿ ಬಂತು. ಕೋರ್ಟಿನಲ್ಲಿ ಕೊನೆಗೂ ಸೇಟನಿಗೇ ಜಯವಾಗಿತ್ತು. ನಮ್ಮ ಲಾಯರ್ ಬಂದು " ಇದೇನೂ ಪರವಾಗಿಲ್ಲ, ಮನೆ ಅವನ ಹೆಸರಿಗೆ ಭೋಗ್ಯ ಮಾಡಿ-ಕೊಟ್ಟ ಹಾಗೆ ಅಷ್ಟೆ. ಇಲ್ಲೇ ಇರಬೇಕೂಂತಿದ್ದರೆ ಸೇಟ್‌ಜಿಗೆ ಒಂದಿಷ್ಟು ಮನೆಬಾಡಿಗೆ ಕೊಟ್ಟುಬಿಟ್ಟರೆ ಆಯಿತು " ಎಂದರು.

" ಏನು ನನ್ನ ಮನೆಗೆ ನಾನೇ ಬಾಡಿಗೆ ಕೊಡೋದೆ? ಹಾಗೆ ಬಾಡಿಗೆ ಕೊಡಬೇಕಾದರೆ ಬೇರೆ ಮನೆಗೆ ಹೋಗುತ್ತೇವೆ " ಎಂದು ಗುಡುಗಿದೆ.

ಆದರೆ ನಳಿನಿಗೆ ಆ ಮನೆ ಬಿಟ್ಟು ಹೊರಟುಬರಲು ಇಷ್ಟವಿರಲಿಲ್ಲ. ತನಗೆ ಆಶ್ರಯಕೊಟ್ಟು, ತನ್ನ ಕಲೆಗೆ ಒಂದು ರೂಪನ್ನು ಕೊಟ್ಟ ಮನೆಯೆಂದು ಒಂದು ರೀತಿಯ ಹುಚ್ಚು ಅಭಿಮಾನ. ಆದರೆ ನಾನು ಅವಳಿಗೆ ನಾಟ್ಯಾ-ಭ್ಯಾಸಕ್ಕೆ ಸ್ಥಳವಿಲ್ಲವೆಂದು ಅವಳನ್ನು ಆ ಮನೆಯಿಂದ ಹೊರಡಿಸಿದೆ.

ನಮ್ಮ ಲಾಯರು ಹಳ್ಳಿಗೆ ಹೋಗಿ ಮನೆ ಭೋಗ್ಯವಾಗುವುದಕ್ಕೆ ಅಮ್ಮನ ಒಪ್ಪಿಗೆ ಪಡೆದು ಅವಳ ಜೊತೆಯಲ್ಲಿ ಮಾತನಾಡಿ ರುಜು ಹಾಕಿಸಿ-ಕೊಂಡು ಬಂದರು.

" ಏನಂದರು ನಮ್ಮ ತಾಯಿ ಲಾಯರೆ? "

"ಏನೂ ಅನ್ನಲಿಲ್ಲ. ಆದರೂ ಎಷ್ಟಾದರೂ ಮುದುಕರು. ಪಾಪ, ನಮ್ಮ ಹಾಗೇ ಅವರನ್ನೂ ಇರು ಅಂತ ಹೇಳಿಸೋದಕ್ಕೆ ಆಗುತ್ತದೆಯೇ? ಅವರನ್ನು ಒಪ್ಪಿಸೋದಕ್ಕೆ ನಾನೂ ಬೇಕಾದಷ್ಟು ವಾದ ಮಾಡಬೇಕಾಯಿತು. ಆದರೂ

ನಿಮ್ಮ ಮಾವಯ್ಯ ಬಹಳ ಜೋರಾಗಿದಾರಯ್ಯಾ."

ಒಂದೆರಡು ದಿನಗಳಾದ ಮೇಲೆ ನಮ್ಮ ತಾಯಿಯ ಕಾಗದ ಬಂತು. ಹಳದಿಯ ಕಾಗದದ ಮೇಲೆ ಪೆನ್ಸಿಲ್ಲಿನ ಬರಹ—

"........ನಾನೇನೋ ರುಜುಹಾಕಿದೆ. ಆದರೆ ಮನಃಪೂರ್ವಕವಾಗಿ ಅಲ್ಲ. ನಾನು ರುಜುಹಾಕದಿದ್ದರೆ ಆ ಲಾಯರು ಇಲ್ಲಿಂದ ಹೊರಡೋದಿಲ್ಲವೆಂದು ಸಹಿ ಮಾಡಿದ್ದೇನೆ. ನಿಮ್ಮ ಮಾವ ಇಲ್ಲದಾಗ ಹಾಕಬೇಕಾಯಿತು. ದೇವರು ಯಾಕೆ ಹೀಗೆ ಬುದ್ಧಿ ಕೊಟ್ಟಿದ್ದಾನೋ ನಾನು ಕಾಣೆ. ಅಂತೂ ನನಗೆ ಬೇಜಾರಾಗಿದೆ. ನಿನ್ನ–ಅವಳಿಗೋಸ್ಕರ ಬೇರೆ ಮನೆ ಹುಡುಕುತ್ತಾ ಇದ್ದೀ ಅಂತ ಲಾಯರು ಹೇಳಿದರು. ಹಾಗಾದರೆ ನನ್ನ ಮನೆಗೆ ನಾನು ಬಂದಿರುತ್ತೇನೆ. ನಿಮ್ಮಪ್ಪ ಕಟ್ಟಿಸಿದ ಮನೇಲಿ ಸಾಯಬೇಕೆನ್ನುವುದೇ ನನ್ನ ಇಷ್ಟ."

ಅಮ್ಮ ಕೋಪವನ್ನು ಮರೆತು ನನಗೆ ಇಷ್ಟು ಕಾಗದ ಬರೆದುದನ್ನು ನೋಡಿ ನನಗೆ ಸಂತೋಷವಾಯಿತು. ಆದರೆ ಮತ್ತೆ ಬರಬೇಕೆಂದಿರುವ ವಿಷಯವನ್ನು ಕೇಳಿ ಕಳವಳವೂ ಆಯಿತು. ಆ ಸೇಟ್‌ಜಿ ಮನೆಯನ್ನು ತೆಗೆದುಕೊಂಡದ್ದೇ ವಾಸಿಯಾಯಿತೆನಿಸಿತು. ಅದೂ ಅಲ್ಲದೆ ಅಮ್ಮ ಇಲ್ಲಿ ಬಂದಿರೋದು ಅಂದರೆ ನಾನು ಸೇಟ್‌ಜಿಗೆ ಬಾಡಿಗೆ ಕೊಡಬೇಕು. ಕೊನೆಗೂ ಆ ಕಾಗದಕ್ಕೆ ಉತ್ತರವೇ ಇಲ್ಲ. ಎಷ್ಟಾದರೂ ಪ್ರೀತಿಯ ಅಣ್ಣ ನೋಡಿಕೊಳ್ಳುತ್ತಾನೆ. ಇಲ್ಲಿ ಒಬ್ಬಳೇ ಬಂದು ಯಾಕೆ ಇರಬೇಕು ?

ನ್ಯೂ ಎಕ್ಸ್‌ಟೆನ್‌ಷನ್‌ನ ಹೊಸ ಮನೆ ನನ್ನ ಸ್ಥಾನ-ಮಾನಕ್ಕೆ ತಕ್ಕದಾಗಿತ್ತು. ಮಹಡಿಯ ಮನೆ. ದೊಡ್ಡ ಕಂಪೌಂಡು. ಸೊಗಸಾದ ತೋಟ. ಕಾರು ಇಡಲು ಗರಾಜು........ಮಹಡಿಯ ಮೇಲೆ ಮಲಗುವ ಮನೆಗಳು. ಜೊತೆಗೊಂದು ದೊಡ್ಡ ಹಾಲು. ಅಲ್ಲಿ ನಳಿನಿಯ ಅಭ್ಯಾಸ ನಡೆಯುತ್ತಿತ್ತು. ಒಂದು ಮೂಲೆಯಲ್ಲಿ ನೀಲಿಬಣ್ಣದ ಸಿಲ್ಕಿನ ಜಮಖಾನೆ. ಇನ್ನೊಂದು ಕಡೆ ನೃತ್ಯರಾಜ ನಟರಾಜನ ಕಂಚಿನ ಪ್ರತಿಮೆ. ಅವಳಿಗಾಗಿಯೇ ಪಕ್ಕವಾದ್ಯದವರನ್ನು ಗೊತ್ತುಮಾಡಿದ್ದೆ. ನೃತ್ಯ ಕಲಿಸಲು ಒಬ್ಬ ಮೇಷ್ಟ್ರು ಬೇರೆ. ತೊಪ್ಪಲಿನಲ್ಲಿದ್ದ ಆತನನ್ನು ನಳಿನಿಗಾಗಿಯೇ ಹುಡುಕಿ ತಂದಿದ್ದೆ. ಆತ ಸುಮಾರು ಅರ್ಧ ಶತಮಾನದಿಂದ ಭರತನಾಟ್ಯ ವಿಶಾರದರಾಗಿದ್ದರು ಆಳು-

ಕಾಳುಗಳಿಗಂತೂ ಲೆಕ್ಕವೇ ಇಲ್ಲ. ಕಾರಿಗೊಬ್ಬ ಡ್ರೈವ್ಹರ್. ತೋಟಕ್ಕೆ ಇಬ್ಬರು ಮಾಲಿಗಳು. ಸೊಂಟಕ್ಕೊಂದು ಬಾಕು ಸಿಕ್ಕಿಸಿಕೊಂಡು ಗೇಟಿನಲ್ಲಿ ನಿಂತಿರಲು ಒಬ್ಬ ಗೂರ್ಖ. ಇಬ್ಬರು ಅಡುಗೆಯವರು. ಮನೆಯೊಳಗೆ ಹೊರಕ್ಕೂ, ಒಳಕ್ಕೂ ನೂರಾರು ಜನ ಬಂದುಹೋಗುತ್ತಿದ್ದರು. ಸಂಗೀತ-ಗಾರರೂ, ಅವರ ಸ್ನೇಹಿತರು ಮೊದಲೇ ಬರುತ್ತೇವೆಂದು ಹೇಳಿ ತಿಳಿಸಿ ಬಂದ-ವರು. ಜವಾನರೂ, ಅವರ ಬಂಧು–ಬಳಗ.........ಇತ್ಯಾದಿ. ಕೆಳಗೆ ನನಗೇ ಒಂದು ಆಫೀಸು ರೂಮು. ಜೊತೆಗೊಬ್ಬ ಕಾರ್ಯದರ್ಶಿ...........ಊರಿನ ಕಾಲೇಜಿನಲ್ಲಿ ಪದವಿ ಪಡೆದ ಪದವೀಧರ. ನನ್ನ ಕಾಗದ–ಪತ್ರವನ್ನೆಲ್ಲ ಅವನೇ ನೋಡುತ್ತಿದ್ದನು.

ನನ್ನನ್ನು ನೋಡುವುದಕ್ಕೆ ಬರುತ್ತಿದ್ದ ಜನರಲ್ಲಿ ಮೂರು–ನಾಲ್ಕು ಅಂತಸ್ತಿನವರಿದ್ದರು. ಅವರಲ್ಲಿ ಒಂದು ದರ್ಜೆಯವರನ್ನು ಹೊರಗಿನ ವರಾಂಡ-ದಲ್ಲೇ ಮಾತನಾಡಿಸಿ ಕಳುಹಿಸುತ್ತಿದ್ದೆ. ಸಾಮಾನ್ಯವಾಗಿ ಅವರೆಲ್ಲ ನಳಿನಿಯ ನಾಟ್ಯಕ್ಕೆ ಪಕ್ಕವಾದ್ಯ ನುಡಿಸುತ್ತೇವೆಂದು ಬರುತ್ತಿದ್ದ ಜನ. ನಾನು ಅವ-ರನ್ನು ನೋಡಿಯೂ ನೋಡದವನ ಹಾಗೆ ಹೋಗುತ್ತಿದ್ದೆ. ಆದರೆ ಅವರಲ್ಲಿ ಯಾರಾದರೂ ನನ್ನನ್ನು ತಡೆದು ನಿಲ್ಲಿಸಿದರೆ—

" ನಿಮ್ಮ ಹೆಸರು ಬರೆದು ಕಾರ್ಯದರ್ಶಿಯ ಹತ್ತಿರ ಕೊಟ್ಟುಹೋಗಿ. ಏನಾದರೂ ಕೆಲಸಬಿದ್ದರೆ ಹೇಳಿಕಳುಹಿಸುತ್ತಾನೆ " ಎನ್ನುತ್ತಿದ್ದೆ. ಅವರೇ-ನಾದರೂ ತಮ್ಮ ಪ್ರಶಸ್ತಿಪತ್ರಗಳನ್ನು ತೆಗೆದು ತೋರಿಸಿದರೆ––

" ಬಹಳ ಸಂತೋಷ. ಆದರೆ ಈಗ ಏನು ಮಾಡಲೂ ಸಾಧ್ಯವಿಲ್ಲ. ಅವಕಾಶ ಸಿಕ್ಕಿದಾಗ ಹೇಳಿಕಳುಹಿಸುತ್ತೇನೆ " ಎನ್ನುತ್ತಿದ್ದೆ ನಾನು. ಹೊರ-ಗಿನ ವರಾಂಡದಲ್ಲಿದ್ದ ಬೆಂಚುಗಳ ತುಂಬ ಜನ ತುಂಬಿರುತ್ತಿದ್ದರು. ನಾನು ಅವರು ಬರುವುದನ್ನು ಗಮನಿಸದವನ ಹಾಗೇ ಇದ್ದುಬಿಡುತ್ತಿದ್ದೆ. ಕೆಲವು ಸಲ ನಳಿನಿಯ ನಾಟ್ಯಕ್ಕಾಗಿಯೇ ತಾವು ಸ್ವತಃ ಕೆಲವು ಹಾಡುಗಳನ್ನು ಬರೆ-ದಿದ್ದೇವೆಂದು ಯಾರೋ ಹೆಸರು ಕುಲ–ಗೋತ್ರವಿಲ್ಲದ ಸಂಗೀತಗಾರರು ಬರುತ್ತಿದ್ದರು. ಇನ್ನು ಕೆಲವರು ನಾನು ಆಫೀಸಿನಲ್ಲಿದ್ದಾಗ ಒಳಗೆ ಬಗ್ಗಿ ನೋಡಿ ಹಾಗೇ ಬಂದುಬಿಡುತ್ತಿದ್ದರು. ನಾನು ಇವರಿಗೆ ಕುರ್ಚಿ ಕೊಡುತ್ತಿರ-ಲಿಲ್ಲ. ಆದರೆ ಅವರಾಗಿಯೇ ಕುಳಿತುಕೊಂಡರೆ ಸಿಡುಗುಟ್ಟುತ್ತಿರಲಿಲ್ಲ. ಅವರ

ಮಾತು ಕೇಳಿ ಸಾಧ್ಯವಾದರೆ ನನ್ನ ಕುರ್ಚಿಯನ್ನು ಹಿಂದಕ್ಕೆ ತಳ್ಳಿ ಎದ್ದು ಹೋಗಿಬಿಡುತ್ತಿದ್ದೆ. ನನ್ನ ಕಾರ್ಯದರ್ಶಿ ಅವರನ್ನು ಹೊರಗೆ ಕಳುಹಿಸುತ್ತಿದ್ದ. ಕೆಲವು ಸಲ ಹೊರಗೆ ನನಗಾಗಿ ಕಾಯ್ದುಕೊಂಡಿರುತ್ತಿದ್ದ ಜನಸಮೂಹವನ್ನು ಕಿಟಕಿಯಿಂದಲೇ ನೋಡಿ ಬಾಗಿಲಿನಿಂದ ನೇರವಾಗಿ ಷೆಡ್ಡಿಗೆ ಹೋಗಿ ಕಾರಿನಲ್ಲಿ ಕುಳಿತು ಹೊರಗೆ ಹೋಗುತ್ತಿದ್ದೆ. ನನ್ನ ಸಮಾನವಿಲ್ಲವೆಂದು ವರ್ತಿಸುವುದೇ ಆಗಿನ ನನ್ನ ರೀತಿಯಾಗಿತ್ತು.

ಇದಲ್ಲದೆ ಆಗಾಗ ನಳಿನಿಯನ್ನು ತಮ್ಮ ಸಂಘದ ಆಶ್ರಯದಲ್ಲೋ, ಸಭೆಯ ಆಶ್ರಯದಲ್ಲೋ ನಾಟ್ಯಮಾಡಬೇಕೆಂದು ಕೇಳುವವರು ಬರುತ್ತಿದ್ದರು. ಇವರು ಸ್ವಲ್ಪ ಉತ್ತಮ ದರ್ಜೆಯವರು. ಅವರನ್ನು ಹಜಾರದಲ್ಲಿ ಎದುರುಗೊಂಡು ಸೋಫಾದಲ್ಲಿ ಕೂರಿಸಿ ಕಾಫಿ ತರಿಸಿಕೊಡುತ್ತಿದ್ದೆ. ನನ್ನ ಕಾಫಿಯ ವೆಚ್ಚ ಮಾತ್ರವೇ ತಿಂಗಳಿಗೆ ೩೦೦ ರೂ. ಆಗುತ್ತಿತ್ತು. ಆ ಹಾಲಿನಲ್ಲಿ ಇದ್ದುದೆಲ್ಲಾ ಬೆಲೆಬಾಳುವ ಸಾಮಾನುಗಳೇ. ಕೆತ್ತನೆ ಕೆಲಸ ಮಾಡಿದ ತಂಜಾವೂರು ತಟ್ಟೆಗಳು, ದಂತದ ವಿಗ್ರಹಗಳು, ನಳಿನಿಯ ಛಾಯಾಚಿತ್ರಗಳು ಇತ್ಯಾದಿ. ಆ ಹಾಲಿನಲ್ಲಿ ಬಂದು ಕುಳಿತ ಅತಿಥಿಗಳನ್ನು ಸ್ವಾಗತಿಸಿದಾಗ ನನಗಾದ ಆನಂದ ಅಷ್ಟಿಷ್ಟಲ್ಲ.

ಇವೆಲ್ಲದರ ಮಧ್ಯೆ ನಳಿನಿ ಎಲ್ಲಿರುತ್ತಿದ್ದಳು? ಕಣ್ಣಿಗೆ ಕಾಣದಷ್ಟು ದೂರದಲ್ಲಿ ಅವಳ ಇರುವು. ದಿನದಲ್ಲಿ ಮುಕ್ಕಾಲುಭಾಗ ಪಕ್ಕವಾದ್ಯದವರ ಜೊತೆಯಲ್ಲಿ ಅಭ್ಯಾಸದಲ್ಲೇ ಕಳೆದುಹೋಗುತ್ತಿತ್ತು. ಕೆಳಗಡೆಯಿಂದಲೂ ನಳಿನಿಯ ಗೆಜ್ಜೆಯ ಸದ್ದು ಕೇಳಿಬರುತ್ತಿತ್ತು. ಕೊನೆಗೂ ಅವಳ ಕನಸು ನನಸಾಗಿತ್ತು. ನಳಿನಿ ಎಲ್ಲಾದರೂ ಕಾಣಿಸುತ್ತಾಳೇನೋ ಎಂದು ಬಂದವರು ಒಳಗಿನ ಬಾಗಿಲ ಕಡೆ ನೋಡುತ್ತಿದ್ದರು. ಆದರೆ ನಳಿನಿ ಯಾರ ಕಣ್ಣಿಗೂ ಕಾಣಿಸದಂತೆ ನಾನು ಎಚ್ಚರಿಕೆ ವಹಿಸುತ್ತಿದ್ದೆ. ನಾನೇ ಮನೆಗೆ ಸರ್ವಾಧಿ ಯಾರಾದರೂ ನಳಿನಿಯ ಬಗ್ಗೆ ವಿಚಾರಿಸಿದರೆ "ಇಲ್ಲ, ಆಕೆಗೆ ಬರೋದಕ್ಕೆ ಸಾಧ್ಯವಿಲ್ಲ" ಎಂದೋ, ಇಲ್ಲವೆ "ನನಗೆ ಹೇಳಿದಿರಲ್ಲ ಸಾಕು" ಎಂದೋ ಹೇಳುತ್ತಿದ್ದೆ. ಅವಳನ್ನು ಕುರಿತು ಯಾರೂ ವಿಚಾರಿಸಬಾರದು. ಅವಳನ್ನು ನೋಡಲು ಯಾರೂ ಬಯಸಬಾರದು. ಅವಳು ಸಂಪೂರ್ಣವಾಗಿ ನನ್ನವಳು. ಅವಳ ಮೇಲೆ ಯಾರಿಗೂ ಅಧಿಕಾರವಿಲ್ಲ. ಈ ಭಾವನೆ ನನ್ನಲ್ಲಾಗಲೇ

ಬೇರೂರಿಬಿಟ್ಟಿತ್ತು.

ಆದರೆ ಅತಿ ಆಪ್ತರೆನಿಸಿದ ಹಲವರನ್ನು ಮಾತ್ರ ಮಹಡಿಯ ಮೇಲೆ ಕರೆದೊಯ್ಯುತ್ತಿದ್ದೆ. ಹಿಂದೆ ನನಗೆ ಸ್ನೇಹಿತರೇ ಇರಲಿಲ್ಲ. ಈಗ ಎಲ್ಲರೂ ನನ್ನ ಸ್ನೇಹವನ್ನು ಬಯಸುವವರೇ. ಆದರೆ ಅವರಲ್ಲಿ ಒಂದು ನಾಲ್ಕಾರು ಜನ ಮಾತ್ರ ನನ್ನ ಆಪ್ತರು. ಅವರ ಬೆನ್ನು ತಟ್ಟಿ ಹೆಗಲಮೇಲೆ ಕೈಹಾಕುವಷ್ಟು ಪರಿಚಯ. ಅದರಲ್ಲಿಬ್ಬರು ಜಡ್ಜಿಗಳು. ಇನ್ನು ನಾಲ್ಕು ಜನ ರಾಜಕೀಯ ಪುಢಾರಿಗಳು. ಇಬ್ಬರು ಭಾರಿ ವರ್ತಕರು. ಒಬ್ಬ ಬ್ಯಾಂಕ್ ಅಧಿಕಾರಿ. ಇನ್ನೊಬ್ಬರು ಮುನಿಸಿಪಲ್ ಕೌನ್ಸಿಲ್‌ರು. ಕೊನೆಯದಾಗಿ 'ಸತ್ಯ' ಪೇಪರಿನ ಸಂಪಾದಕರು. ಆ ಪತ್ರಿಕೆಯಲ್ಲಿ ನಳಿನಿಯ ನಾಟ್ಯದ ಪ್ರಶಂಸೆ ಆಗಾಗ ಬರುತ್ತಲೇ ಇತ್ತು. ಇವರೊಂದಿಷ್ಟು ಜನ ಮೊದಲೇ ಹೇಳಿಕಳುಹಿಸದೆ ಮನೆಗೆ ಬರಬಹುದಾಗಿತ್ತು. ಹಾಲಿಗೆ ಬಂದು ಕುಳಿತು ಕಾಫಿಯನ್ನು ಕೇಳಿ ಕುಡಿಯಬಹುದಾಗಿತ್ತು.

"ಎಲ್ಲಿ ನಳಿನಿ, ಒಂದು ನಿಮಿಷ ಮಾತನಾಡಿ ಬರುತ್ತೇನೆ" ಎಂದು ಮೇಲೆ ಹೋಗಿ ಗಂಟೆಗಟ್ಟಲೆ ಮಾತಾಡಿಬರಬಹುದಾಗಿತ್ತು. ಅವರ ಬಾಯಲ್ಲಿ ನನ್ನ ಹೆಸರು 'ರಾಜ್' ಆಗುತ್ತಿತ್ತು.

ಇವರಲ್ಲದೆ ಆಗಾಗ ಕೆಲವು ಸಂಗೀತ ವಿದ್ವಾಂಸರೊ ಅಥವಾ ನಟಿಯರೊ ಬಂದು ರೋಜಿಯ ಜೊತೆ ಮಾತಾಡುತ್ತ ಗಂಟೆಗಟ್ಟಲೆ ಕುಳಿತುಬಿಡುತ್ತಿದ್ದರು. ನಳಿನಿಗಂತೂ ಅವರ ಸಹವಾಸವೆಂದರೆ ಅಷ್ಟು ಪ್ರೀತಿ. ಜಮುಖಾನೆಯ ಮೇಲೆ ಒರಗಿಕೊಂಡೋ ಅಥವಾ ದಿಂಬಿಗೆ ಒರಗಿಕೊಂಡೋ ಅವರು ಕೇಕೆಹಾಕಿ ನಗುತ್ತಿದ್ದರು. ಅವರಿಗೆ ಅಲ್ಲಿಯೇ ಕಾಫಿ–ತಿಂಡಿ ಆಗುತ್ತಿತ್ತು. ನಾನು ಮನಸ್ಸು ಬಂದರೆ ಯಾವಾಗಲಾದರೂ ಮೇಲೆ ಹೋಗಿ ಅವರ ಜೊತೆ ಒಂದಿಷ್ಟು ಹರಟೆಹೊಡೆಯುತ್ತಿದ್ದೆ. ಆದರೂ ನನಗೆ ಆ ಕಲಾವಿದರ ಮಧ್ಯದಲ್ಲಿ ನಾನೊಂದು ಕಮಂಗಿ ಎನ್ನಿಸದಿರುತ್ತಿರಲಿಲ್ಲ. ಅವರೆಲ್ಲ ಅಷ್ಟು ನಿಶ್ಚಿಂತೆಯಿಂದ ಕುಳಿತು ಹಾಡು-ಪಾಡುವುದನ್ನು ನೋಡಿ ಸಹಿಸುವುದಕ್ಕೂ ಒಂದೊಂದು ವೇಳೆ ಆಗುತ್ತಿರಲಿಲ್ಲ. ಏನೋ ಮಹತ್ಕಾರ್ಯಕ್ಕಾಗಿ ನಳಿನಿಯನ್ನು ಕರೆಯುವವನಂತೆ ಅವಳನ್ನು ಮಲಗುವ ಮನೆಗೆ ಬರಹೇಳುತ್ತಿದ್ದೆ. ಅವಳು ಬಂದು ಬಾಗಿಲನ್ನು ಮುಚ್ಚಿದಾಗ ಅವಳ ಕಿವಿಯಲ್ಲಿ—

“ಅವರು ಇನ್ನೂ ಎಷ್ಟುಹೊತ್ತು ಇರುತ್ತಾರೆ?” ಎನ್ನುತ್ತಿದ್ದೆ.

“ಯಾಕೆ?”

“ಬೆಳಗಿನಿಂದ ಇಲ್ಲೇ ಇದ್ದಾರಲ್ಲ. ರಾತ್ರಿಗೂ ಇಲ್ಲೇನೋ?”

“ನಮ್ಮನ್ನ ನೋಡೋಕೆ ದೊಡ್ಡಮನಸ್ಸು ಮಾಡಿ ಅಲ್ಲಿಂದ ಬಂದಿ-ದ್ದಾರೆ.”

“ಪಾಪ, ಇವರೊಬ್ಬರೇನೋ ನೋಡೋಕೆ ಬಂದಿರೋರು?”

“ಅದೇನೋ ನಿಜ. ಆದರೆ ಹೋಗಿ ಎಂದು ಹೇಗೆ ಹೇಳುವುದು? ಅದೂ ಅಲ್ಲದೆ ಅವರ ಜೊತೇಲಿ ಮಾತಾಡೋದೇ ಒಂದು ಸೊಗಸು. ನನಗೆ ತುಂಬ ಇಷ್ಟ.”

“ಇಷ್ಟವಿರಬಹುದು, ಇಲ್ಲ ಅಂತ ಅನ್ನಲಿಲ್ಲ. ಆದರೆ ನಿನಗೂ ಸ್ವಲ್ಪ ವಿಶ್ರಾಂತಿ ಅಗತ್ಯ. ಅದೂ ಅಲ್ಲದೆ ನಾಳೆ ಪ್ರಯಾಣ. ಸಾಮಾನು ಕಟ್ಟ-ಬೇಕು. ಅಭ್ಯಾಸಾನೂ ಮಾಡಬೇಕು. ತಿರುಚಿ ಕಾರ್ಯಕ್ರಮದಲ್ಲಿ ಹೊಸ ಐಟಂ ಕೊಡುತ್ತೇವೆ ಎಂದು ಹೇಳಿರುವುದನ್ನು ಮರೀಬೇಡ.”

“ಅಯ್ಯೋ ಬಿಡಿ, ಅದೇನು ಮಹಾ” ಎಂದು ಹಿಂತಿರುಗಿ ಅವಳ ಸ್ನೇಹಿತರ ಬಳಿಗೋಡುತ್ತಿದ್ದಳು. ನನಗೆ ಕೋಪ ಬರುತ್ತಿತ್ತು. ಅವಳೇನೋ ಸಂತೋಷವಾಗಿರಬೇಕು, ಆದರೆ ಅದು ನನ್ನ ಜೊತೆಯಲ್ಲಿದ್ದಾಗ ಮಾತ್ರ. ಈ ಕಲಾವಿದರನ್ನು ಕಂಡು ನನಗೆ ಅಷ್ಟಕ್ಕಷ್ಟೇ. ಅವರಿಗೆಲ್ಲ ನಮ್ಮ ವ್ಯವ-ಹಾರದ ಗುಟ್ಟನ್ನೆಲ್ಲಾ ಹೇಳಿಬಿಡುತ್ತಾಳೋ ಎಂದು ನನಗೆ ಭಯ. ನಳಿನಿ ಎಲ್ಲೇ ಹೋಗಲಿ, ಅಲ್ಲಿ ಇಂತಹ ಒಂದು ಗುಂಪನ್ನು ಕೂಡಿಸದೆ ಇರುತ್ತಿರ-ಲಿಲ್ಲ.

“ಅವರು ಸರಸ್ವತಿಯ ಆರಾಧಕರು. ಅಂತಹವರ ಸಂಗಡ ಮಾತ-ನಾಡುವುದಕ್ಕೆ ಪುಣ್ಯ ಬೇಕು.”

“ನಿನಗೆ ಗೊತ್ತಿಲ್ಲ ನಳಿನಿ. ಅವರೆಲ್ಲ ಹೊಟ್ಟೆಕಿಚ್ಚಿನ ಕೋಳಿಗಳು. ನಿಜವಾದ ಕಲಾವಿದರಾದರೆ ಇಬ್ಬರು ಒಂದು ಕಡೆ ಸೇರೊಲ್ಲ. ನೀನೆಲ್ಲಿ, ಇವ-ರೆಲ್ಲಿ? ಅದಕ್ಕೆ ಇವರು ನಿನ್ನ ಹತ್ತಿರ ಬರೋದು.”

“ನಾನೇನು ಮಹಾ, ಇವರೇನು ಕಡಿಮೆ? ನೀವು ಈ ತರಹ ಮಾತಾಡೋದನ್ನು ಕೇಳಿಕೇಳಿ ಬೇಜಾರಾಗಿದೆ.”

"ಅವರು ನೂರು ಜನಾನ ಸೇರಿಸಿದರೆ ನಿನಗೆ ಬರೋವಷ್ಟು ಕಾರ್ಯ-ಕ್ರಮ ಬರೋದಿಲ್ಲ."

"ಕಾರ್ಯಕ್ರಮವೇನು ಬಂತು, ಕಾರ್ಯಕ್ರಮದ ಕಲೆಕ್ಶನ್ ಅನ್ನಿ. ಹೀಗೆ ದುಡ್ಡಿನ ದೊಡ್ಡಪ್ಪನಾಗಿರೋದು ನನಗೆ ಬೇಡ."

ದಿನ ಕಳೆದಹಾಗೆ ನಮ್ಮಿಬ್ಬರ ನಡುವೆ ಭಿನ್ನಾಭಿಪ್ರಾಯಗಳು ತಲೆ-ದೋರಲಾರಂಭಿಸಿದವು. ಅವಳ ಅಭಿಮಾನಿಗಳ ಗುಂಪು ದೊಡ್ಡದಾಗುತ್ತಿತ್ತು. ಮೊದಲನೆಯ ಇಲ್ಲವೇ ಎರಡನೆಯ ತರಗತಿಯ ಕಲಾವಿದರು, ಸಂಗೀತ-ಗಾರರು, ಊರಿನ ರಸಿಕರು ತಮ್ಮ ಶಾಲೆಯ ಚಟುವಟಿಕೆಗಾಗಿ ಸಲಹೆ ಕೇಳಲು ಬಂದ ಶಾಲಾ ಬಾಲಿಕೆಯರು........ಎಷ್ಟು ಸಾಧ್ಯವೋ ಅಷ್ಟು ಜನರನ್ನು ನಾನು ಹಿಂದಕ್ಕೆ ಕಳುಹಿಸುತ್ತಿದ್ದೆ. ಆದರೆ ಅವರೇನಾದರೂ ಮಹ-ಡಿಯ ಮೇಲೆ ನನಗೆ ತಿಳಿಯದ ಹಾಗೆ ಹೋಗಿಬಿಟ್ಟರೆ ಮುಗಿಯಿತು. ಘಂಟೆ-ಗಳ ಪರಿವೆಯೇ ಇರುತ್ತಿರಲಿಲ್ಲ.

ನಮಗೆ ನೂರಾರು ಮೈಲಿಗಳಿಂದ ಕಾರ್ಯಕ್ರಮಕ್ಕೆ ಕರೆ ಬರುತ್ತಿತ್ತು ಮತ್ತು ನಮ್ಮ ಪೆಟ್ಟಿಗೆಗಳು ಯಾವಾಗಲೂ ಸಿದ್ಧವಾಗೇ ಇರುತ್ತಿದ್ದವು. ಒಂದೊಂದು ಸಲ ಮಾಲ್ಗುಡಿಯನ್ನು ಬಿಟ್ಟರೆ ತಿರುಗಿಬರುವುದು ಹದಿನೈದು ದಿನಗಳಾಗುತ್ತಿತ್ತು. ಕನ್ಯಾಕುಮಾರಿಯಿಂದ ಹಿಡಿದು ಬೊಂಬಾಯಿಯ ವರೆಗೂ ನಾವು ತಿರುಗದಿದ್ದ ಜಾಗವಿಲ್ಲ, ಹೋಗದಿದ್ದ ಊರಿಲ್ಲ. ನಾನು ಒಂದು ಡೈರಿಯಲ್ಲಿ ನಮ್ಮ ಕಾರ್ಯಕ್ರಮದ ವಿವರಗಳನ್ನೆಲ್ಲ ಬರೆದಿಡುತ್ತಿದ್ದೆ. ತಿಂಗಳಿಗೆ ಇಪ್ಪತ್ತು ದಿನ ಸುತ್ತಾಟ. ಉಳಿದ ಹತ್ತು ದಿನಗಳಲ್ಲಿ ಒಂದೆರಡು ದಿನಗಳು ಊರಿನ ಸುತ್ತುಮುತ್ತಲಲ್ಲೇ. ಇಷ್ಟೆಲ್ಲ ಆಗಿ ಉಳಿದದ್ದು ವಿಶ್ರಾಂ-ತಿಗೆ. ನಾನು ಎಲ್ಲೇ ಇರಲಿ ನನ್ನ ಕಾರ್ಯದರ್ಶಿ ಮನೆಗೆ ಬಂದ ಕಾಗದಗಳ ವಿಷಯವನ್ನು ಫೋನಿನ ಮೂಲಕ ತಿಳಿಸಿಬಿಡುತ್ತಿದ್ದನು. ನಮ್ಮ ಒಂದೊಂದು ಕಾರ್ಯಕ್ರಮವೂ ಮೂರು ತಿಂಗಳ ಮೊದಲೇ ಏರ್ಪಾಡಾಗಿಬಿಡುತ್ತಿತ್ತು. ನನ್ನ ಹತ್ತಿರವಿದ್ದ ದೊಡ್ಡ ಕ್ಯಾಲೆಂಡರಿನಲ್ಲಿ ನಾನು ಕಾರ್ಯಕ್ರಮದ ತಾರೀಖು-ಗಳನ್ನು ಗುರುತು ಮಾಡುತ್ತಿದ್ದೆ. ಅದನ್ನು ಅವಳ ಅಭ್ಯಾಸದ ಕೋಣೆಯಲ್ಲಿ ತೂಗುಹಾಕೋಣವೆಂದು ನೋಡಿದಾಗ ಅಲ್ಲಿ ನಳಿನಿ ಹಾಕಗೊಡಿಸಲಿಲ್ಲ.

"ಏನು ಚೆನ್ನಾಗಿರುತ್ತೇಂತ ಇದನ್ನು ಇಲ್ಲಿ ಹಾಕ್ಕೋಬೇಕು?"

"ಚೆನ್ನಾಗಿರುತ್ತೇಂತ ಅಲ್ಲ, ಮುಂದಿನ ಕಾರ್ಯಕ್ರಮದ ದಿನಗಳನ್ನು ತಿಳಿದುಕೊಳ್ಳಲು."

"ಅದನ್ನು ಕಟ್ಟಿಕೊಂಡು ನನಗೇನಾಗಬೇಕಾಗಿದೆ?"

"ಇನ್ನೂ ಅಷ್ಟೊಂದು ತಾರೀಖುಗಳನ್ನು ನೋಡಿದರೆ ಭಯವಾಗುತ್ತೆ ಅಷ್ಟೆ"

ರೈಲಿಗೆ ಸಿದ್ಧಳಾಗು ಎಂದಾಗ ಸಿದ್ಧಳಾಗುತ್ತಿದ್ದಳು. ಕೆಳಗೆ ಬಾ ಎಂದಾಗ ಬರುತ್ತಿದ್ದಳು. ರೈಲಿನಿಂದಿಳಿ ಎಂದಾಗ ಇಳಿಯುತ್ತಿದ್ದಳು. ಹತ್ತು ಎಂದಾಗ ಹತ್ತುತ್ತಿದ್ದಳು. ಯಾವ ಊರಿನಲ್ಲಿದ್ದೇವೆಂದಾಗಲೀ, ಯಾವ ಸಭೆಯಲ್ಲಿದ್ದೇವೆಂದಾಗಲೀ ಅವಳಿಗೆ ಗೊತ್ತಿರುತ್ತಿತ್ತೋ ಇಲ್ಲವೋ. ಮದರಾಸು, ಮಧುರೆ, ನೀಲಿಗಿರಿ ಎಲ್ಲಾ ಒಂದೇ. ರೈಲಿಲ್ಲದ ಕಡೆ ನಮಗಾಗಿ ಕಾರು ಬರುತ್ತಿತ್ತು. ನಮ್ಮ ಪಕ್ಕವಾದ್ಯದವರ ಊಟ–ತಿಂಡಿಗಳ ಬಗ್ಗೆ ಬಹಳವಾಗಿ ವಿಚಾರಿಸಿಕೊಂಡು ಅವರ ಮೆಚ್ಚುಗೆಗೆ ಪಾತ್ರನಾಗಿದ್ದೆ. ಅವರಿಗಾಗಿ ಕಾರು ಕಳುಹಿಸಿ ಕಾರ್ಯಕ್ರಮಕ್ಕೆ ಒಂದೆರಡು ಘಂಟೆ ಮುಂಚಿತವಾಗಿಯೇ ಅವರನ್ನೆಲ್ಲಾ ಒಂದು ಕಡೆ ಕೂಡಿಸುತ್ತಿದ್ದೆ.

ಅವರಿಗಂತೂ ಹೊತ್ತಿನ ಅರಿವೇ ಇರುತ್ತಿರಲಿಲ್ಲ. ನಿದ್ದೆಮಾಡುವುದರಲ್ಲಂತೂ ಕುಂಭಕರ್ಣರು. ಇನ್ನು ಇಸ್ಪೀಟು ಆಡುತ್ತ ಕೂತರೆ ದೇವರೇ ಗತಿ. ಅವರನ್ನೆಲ್ಲಾ ಒಟ್ಟುಗೂಡಿಸುವುದೇ ಒಂದು ಮಹತ್ತಾದ ಕಲೆ. ಅದಕ್ಕಿಂತ ಹೆಚ್ಚಾಗಿ ಅವರನ್ನೆಲ್ಲಾ ಸಂತೋಷವಾಗಿಟ್ಟಿರಬೇಕು. ಇಲ್ಲದೆಹೋದರೆ ನಾಟ್ಯ-ಒಂದು ಕಡೆಯಾದರೆ ಹಾಡನ್ನು ಒಂದು ಕಡೆ ಮಾಡಿಬಿಡುವುದರಲ್ಲಿ ನಿಸ್ಸೀಮರು. ನಾನು ಅವರಿಗೆ ಕಾಲಕಾಲಕ್ಕೆ ಒಳ್ಳೆಯ ಸಂಬಳ ಕೊಡುತ್ತಿದ್ದೆ; ಆದರೆ ಅವರಿಗೆ ನನ್ನೊಡನೆ ಸಲುಗೆಯಿಂದ ಇರಲು ಮಾತ್ರ ಎಡೆಕೊಟ್ಟಿರಲಿಲ್ಲ. ನಳಿನಿಯ ಜೊತೆಗೂ ಅವರು ಸಲಿಗೆಯಿಂದ ನಡೆದುಕೊಳ್ಳದಂತೆ ಎಚ್ಚರವಹಿಸುತ್ತಿದ್ದೆ.

ಆರು ಘಂಟೆಯ ಕಾರ್ಯಕ್ರಮವಿದ್ದರೆ ನಾಲ್ಕು ಘಂಟೆಯ ವರೆಗೂ ವಿಶ್ರಾಂತಿ ತೆಗೆದುಕೊಳ್ಳುವ ಹಾಗೆ ನಳಿನಿಯನ್ನು ಒತ್ತಾಯಪಡಿಸಬೇಕಾಗಿತ್ತು. ಯಾರ ಮನೆಗಾದರೂ ಅತಿಥಿಗಳಾಗಿ ಹೋಗಿಬಿಟ್ಟರಂತೂ ಆ ಮನೆಯ ಹೆಂಗಸರ ಕೂಡ ನಳಿನಿಯ ಹರಟೆ ಕೊನೆಮೊದಲೇ ಇರುತ್ತಿರಲಿಲ್ಲ. ನಾನೇ ಅವರ ಹತ್ತಿರ ಹೋಗಿ—

"ನೀನು ಇನ್ನು ಸ್ವಲ್ಪಹೊತ್ತು ವಿಶ್ರಾಂತಿ ತೆಗೆದುಕೊಂಡರೆ ಒಳ್ಳೇದು ನಳಿನಿ. ನಿನ್ನೆ ರೈಲಿನಲ್ಲಿ ನಿದ್ದೆಗೆಟ್ಟಿದ್ದಿ" ಎನ್ನುತ್ತಿದ್ದೆ.

ನಳಿನಿ ಮಾತನ್ನು ಮುಗಿಸಿ ಮಹಡಿಗೆ ಬರುತ್ತಿದ್ದಳು. ಆದರೆ ನಾನು ಹಾಗೆ ಹೋಗಿ ಕರೆಯುವುದು ಅವಳಿಗೆ ಸರಿಬೀಳುತ್ತಿಲಿಲ್ಲ.

"ಅಲ್ಲಾ ಅದೇನು ಹಾಗೆ ಕರೆಯೋದಕ್ಕೆ ಬರುತ್ತೀರಿ? ನಾನೇನು ಸಣ್ಣ ಮಗು ಕೆಟ್ಟುಹೋದೆನೆ?" ಅವಳ ಒಳ್ಳೆಯದಕ್ಕೆ ಹಾಗೆ ಮಾಡಿದನೆಂದು ಹೇಳಿದರೂ ನಿಜ ನನಗೆ ಗೊತ್ತಿಲ್ಲವೆ? ಬೇರೆಯವರ ಕೂಡ ನಳಿನಿ ಹಾಗೆ ಸಂತೋಷದಿಂದ ಇರುತ್ತಿರುವುದನ್ನು ನನ್ನಿಂದ ನೋಡುವುದಕ್ಕಾಗುತ್ತಿರಲಿಲ್ಲ.

ಕಾರ್ಯಕ್ರಮವಾದ ಕೂಡಲೇ ಸಭೆಯಿಂದಲೇ ನೆಟ್ಟಗೆ ಸ್ಟೇಷನ್ನಿಗೆ ಹೋಗುವುದಕ್ಕಾಗಿ ಒಂದು ಕಾರನ್ನು ಸಿದ್ಧವಾಗಿಡಿಸಿರುತ್ತಿದ್ದೆ. ನಮಗೆ ಊಟ ರೈಲಿನಲ್ಲಿ ಆಗುತ್ತಿತ್ತು. ಆದರೆ ಆ ರೈಲಿನ ಏಕಾಂತವೂ ಬಹಳ ಕಾಲ ಇರುತ್ತಿರಲಿಲ್ಲ. ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ಇನ್ನೊಂದು ಸ್ಟೇಷನ್ ಬಂದುಬಿಡುತ್ತಿತ್ತು. ಸರಿ ಅಲ್ಲಿನ ಕಾರ್ಯಕ್ರಮ........ಅಲ್ಲಿಂದ ಪ್ರಯಾಣ. ಯಾವುದಾದರೂ ದೊಡ್ಡ ಪಟ್ಟಣಕ್ಕೆ ಹೋದಾಗ ನಳಿನಿ ಅಲ್ಲಿಯ ದೇವಸ್ಥಾನಕ್ಕೆ ಹೋಗೋಣವೆಂದೋ, ಇಲ್ಲವೆ ಅಂಗಡಿಯ ಬೀದಿ ನೋಡಿಬರೋಣವೆಂದೋ ಹೇಳುತ್ತಿದ್ದಳು. ಒಮ್ಮೆಯೂ ಇದು ಸಾಧ್ಯವಾಗುತ್ತಿರಲಿಲ್ಲ. ಕಾರ್ಯಕ್ರಮ ಮುಗಿದ ತಕ್ಷಣ ಇನ್ನೊಂದು ರೈಲು ಹಿಡಿಯುವುದೇ ಕೆಲಸ. ಒಂದು ದಿವಸದ ಹಾಗೆ ಇನ್ನೊಂದು. ಅದೇ ಪ್ರಯಾಣ. ಅಂತಹದೇ ಕಾರ್ಯಕ್ರಮ. ಅದೇ ರೀತಿಯ ಮಧ್ಯದ ಸೋಫಾ, ಅದೇ ಭಾಷಣ, ಅದೇ ಹಾರಗಳು, ಅಂತಹವೇ ಚಿತ್ರಗಳು........ಸರಿ ಪ್ರಯಾಣ........ಆದರೆ ನಾನು ಮುಖ್ಯವಾಗಿ ಗಮನಿಸುತ್ತಾ ಇದ್ದುದು ಮಾತ್ರ ಜೇಬು ಸೇರುತ್ತಿದ್ದ ಚೆಕ್ಕುಗಳ ಸಂಖ್ಯೆ. ಮೊದಲು-ಮೊದಲು ನಳಿನಿಗೆ "ನಾಳೆ ತಿರುಚಿಯಲ್ಲಿ ಕಾರ್ಯಕ್ರಮವಿದೆ, ಅಲ್ಲಿಗೆ ಹೋಗುತ್ತೇನೆ" ಎಂದು ಹೇಳುತ್ತಿದವನು ಬರಬರುತ್ತ "ಭಾನುವಾರ ನನಗೆ ತಿರುಚಿಯಲ್ಲಿ ಪ್ರೋಗ್ರಾಂ ಇದೆ. ಸೋಮವಾರ ನನಗೆ........" ಹೀಗೆ ಹೇಳಲಾರಂಭಿಸಿದ್ದೆ. ಬೇರೆ ಯಾರೂ ಕೇಳದಿದ್ದಷ್ಟು ದುಡ್ಡನ್ನು ಕೇಳಿ ಅಷ್ಟನ್ನು ಪಡೆಯುತ್ತಿದ್ದೆ. ಆದಾಯ ಬೇಕಾದಷ್ಟಿತ್ತು. ಖರ್ಚೂ ಅದಕ್ಕೆ ತಕ್ಕಹಾಗೇ ಇತ್ತು. ನಳಿನಿ ಇದೆಲ್ಲವನ್ನು

ಯಾವುದೋ ಒಂದು ರೀತಿಯ ವೈರಾಗ್ಯಭಾವದಿಂದ ನೋಡುತ್ತಿರುವ ಹಾಗೆ ಕಂಡಿತು. ನಮ್ಮ ಹಿಂದಿನ ಮನೆಯಲ್ಲಿದ್ದ ಸಂತೋಷ, ಉತ್ಸಾಹ ಅವಳಿಗೆ ಇರುತ್ತಿರಲಿಲ್ಲ.

ಕಾರ್ಯಕ್ರಮದ ಕಡೆಯಲ್ಲಿ ಕೊಡುತ್ತಿದ್ದ ಹಾರವನ್ನು ಮಾತ್ರ ನಳಿನಿ ಮನಸಾರೆ ಒಪ್ಪುತ್ತಿದ್ದಳು. ರೈಲಿನಲ್ಲಿ ಹೋಗುವಾಗ ಕೂಡ ಹಾರಕ್ಕೆ ನೀರು ಚಿಮುಕಿಸಿ ಒದ್ದೆ ಬಟ್ಟೆಯಲ್ಲಿ ಸುತ್ತಿಡುವುದನ್ನು ಮರೆಯುತ್ತಿರಲಿಲ್ಲ. ಹಾರವನ್ನು ಕೈಯಲ್ಲಿ ಹಿಡಿದು ಅದರ ಸುವಾಸನೆಯನ್ನು ಆನಂದಿಸುತ್ತ—

"ಇಷ್ಟೊಂದು ಕಷ್ಟಪಟ್ಟದ್ದಕ್ಕೆ ಇದೊಂದು ಸಾರ್ಥಕ" ಎನ್ನುತ್ತಿದ್ದಳು.

"ಅದೇನು ಹಾಗೆ ಹೇಳುತ್ತೀ?"

"ನನಗೆ ಹೂವು ಎಂದರೆ ಪ್ರಾಣ."

"ಅದರ ಜೊತೆ ಬರೋ ಹಣವೆಂದರೆ?"

"ಅಷ್ಟೊಂದು ಇಟ್ಟುಕೊಂಡು ಏನು ಮಾಡಬೇಕು ಹೇಳಿ? ಜೇಬಿನ ತುಂಬ ಚೆಕ್ ತುಂಬಿಕೊಂಡರೆ ಬಂತೆ ಲಾಭ? ಅದನ್ನೆಲ್ಲ ಅನುಭವಿಸೋದು ಯಾವ ಕಾಲಕ್ಕೋ?"

"ದೊಡ್ಡ ಮನೆಯಿದೆ, ದೊಡ್ಡ ಕಾರಿದೆ........ಏನು ಬೇಕೋ ಎಲ್ಲಾ ಇದೆ. ಇನ್ನೇನು ಅನುಭವಿಸಬೇಕು?"

"ಅದು ನನಗೆ ಗೊತ್ತಿಲ್ಲ" ಎಂದು ನಳಿನಿ ಯೋಚಿಸುತ್ತ ಕುಳಿತುಬಿಡುತ್ತಿದ್ದಳು.

"ದಿನ ಬೆಳಗಾದರೆ ಈ ಪ್ರೋಗ್ರಾಂ, ಆ ಪ್ರೋಗ್ರಾಂ ಅಂತ ಇದ್ದರೆ ನನ್ನ ಪಾಡಿಗೆ ನಾನು ಹಾಯಾಗಿ ಇರೋಹಾಗಿದ್ದರೆ........"

ನಳಿನಿಗೆ ಇತ್ತೀಚೆಗೆ ಅವಳ ನಾಟ್ಯಜೀವನದ ಬಗ್ಗೆ ಬೇಸರಹುಟ್ಟಿದಹಾಗಿತ್ತು. ನಾನು ಅದನ್ನು ಹೆಚ್ಚು ಕೆದಕಬಾರದೆಂದು ಸುಮ್ಮನಾದೆ. ಅವಳಿಗೆ ಅಷ್ಟೊಂದು ಕಾರ್ಯಕ್ರಮಗಳಿಗೆ ಅಭ್ಯಾಸಮಾಡುವುದು ಇರಬಹುದು. ಆದರೆ ಒಪ್ಪಿಕೊಳ್ಳದೆ ಹೋಗುವುದು ಅಸಾಧ್ಯವಾಗಿತ್ತು. 'ಕಾಲು ನೋಯುತ್ತೇನು?' ಎಂದು ಕೇಳಿದೆ. ಇದರಿಂದ ನಾನು ಬಯಸಿದ ಉತ್ತರ ಸಿಕ್ಕಿತು.

"ಕಾಲೂ ನೋಯೋಲ್ಲ, ಗೀಲೂ ನೋಯೋಲ್ಲ. ಬೇಕಾದರೆ ಒಂದೊಂದು ಪ್ರೋಗ್ರಾಮಿನಲ್ಲಿ ಎಂಟು ಘಂಟೆ ನೃತ್ಯಮಾಡೋದಕ್ಕೆ ಸಾಧ್ಯ. ಆದರೆ ನೀವು ಬಿಡೋಲ್ಲ ಅಷ್ಟೆ." ಎಂದಳು

"ನಿಜ, ಸುಮ್ಮನೆ ಮೈಗೆ ಆಯಾಸ ಮಾಡಿಕೊಂಡರೆ ನಿನಗೇ ತೊಂದರೆ."

"ನನಗೆ ತೊಂದರೆ ಹಾಗಿರಲಿ. ನಿಮಗೆ ತೊಂದರೆ ಅಷ್ಟೆ."

"ಮುಂದಿನ ರೈಲು ತಪ್ಪಿಹೋಗುತ್ತಲ್ಲ. ಮಾರನೇ ದಿನದ ರೈಲಿನಲ್ಲಿ ಹೋದರೆ ಏನು ಮುಳುಗಿಹೋಗುತ್ತೆ?"

ನಾನು ಅವಳ ಮಾತು ಮುಂದುವರಿಯಲು ಬಿಡದೆ ಅವಳ ಮೇಲೆ ಮುತ್ತಿನ ಮಳೆಗರೆದು ಅವಳು ಆ ವಿಷಯವನ್ನು ಮರೆತುಬಿಡುವಂತೆ ಮಾಡುತ್ತಿದ್ದೆ. ಎಷ್ಟು ಸಂಪಾದಿಸಲು ಸಾಧ್ಯವೋ ಅದಕ್ಕಿಂತ ಕಡಿಮೆ ಸಂಪಾದಿಸುವುದು ನನಗಿಷ್ಟವಿರಲಿಲ್ಲ. ಎಷ್ಟು ದುಡ್ಡಿದೆಯೋ ಅಷ್ಟೂ ನನಗೇ ಬೇಕೆನಿಸುತ್ತಿತ್ತು. ದುಡ್ಡಿಲ್ಲದೆಹೋಗಿದ್ದರೆ ನಿನಗೆ ಕೊಡೋ ಮರ್ಯಾದೆಯ ಸ್ವರೂಪ ನಾನು ಕಾಣೆನೆ? ಈ ಲಕ್ಷ್ಮಿ ಕಟಾಕ್ಷವಿದ್ದುದರಿಂದಲೇ ನನ್ನನ್ನು ಕಂಡೊಡನೆ ಎಂತಹ ಸಿಡುಕು ಮೋರೆಯ ಮೇಲೂ ನಗು ಮೂಡುತ್ತಿತ್ತು. ಸಂಪಾದನೆಗೆ ಮಾರ್ಗವಿದ್ದಾಗ ಸಂಪಾದಿಸದೆಹೋದರೆ ಅದೊಂದು ಮಹಾ ಅಪರಾಧವೆಂದೇ ನನ್ನ ಭಾವನೆ. ಇನ್ನೊಂದು ಸ್ವಲ್ಪ ಹಣ ಕೂಡಿದೊಡನೆಯೇ ದೊಡ್ಡ ಯೋಜನೆಯನ್ನೇ ಪ್ರಾರಂಭಿಸಬೇಕೆಂದಿದ್ದೆ. ಆದರೆ ಈಗ ಇಷ್ಟೊಂದು ಹಣ ಬರುತ್ತಿದ್ದರೂ ನನ್ನ ಆಡಂಬರದ ಜೀವನವೆಲ್ಲ ನುಂಗಿಬಿಡುತ್ತಿತ್ತು. ಒಂದೊಂದು ಸಲ ನಳಿನಿ—

"ಇಬ್ಬರಿಗೋಸ್ಕರ ತಿಂಗಳಿಗೆ ಎರಡು ಸಾವಿರ ರೂಪಾಯಿ ಖರ್ಚೇ?" ಎನ್ನುತ್ತಿದ್ದಳು.

"ಖರ್ಚು ಮಾಡಬೇಕಾಗಿರುವಾಗ ಮಾಡಬೇಕು. ಮನೆ ಬೇಕು, ಕಾರು ಬೇಕು, ಅಡುಗೆಯವರು ಬೇಕು, ಜವಾನರು ಬೇಕು. ಯಾವುದು ತಾನೆ ಇಲ್ಲದೆ ಆಗುತ್ತೆ? ಎಲ್ಲಾ ಬಿಟ್ಟುಬಿಟ್ಟು ಸಂನ್ಯಾಸಿಗಳ ಹಾಗೆ ಇರೋಕೆ ಸಾಧ್ಯವೆ?" ಎಂದುಬಿಡುತ್ತಿದ್ದೆ.

ಸ್ವಲ್ಪ ದಿನ ಯೋಚಿಸಿ ಕೊನೆಗೆ ಬ್ಯಾಂಕಿನ ಹಣವನ್ನು ಅವಳ ಹೆಸರಿ-

ನಲ್ಲೇ ಇಟ್ಟೆ. ಸಾಲಗಾರರು ಮತ್ತೆ ಬಂದಾರೆಂಬ ಹೆದರಿಕೆ. ನನ್ನ ಲಾಯರು ಆಗಾಗ ಬಂದು ರುಜು ಹಾಕಿಸಿಕೊಂಡು ಹೋಗುತ್ತಿದ್ದರು. ನಳಿನಿಯಂತೂ ಯಾತಕ್ಕೆಂದು ಕೇಳದೆಯೇ ಚೆಕ್ಕಿಗೆ ರುಜು ಹಾಕಿಬಿಡುತ್ತಿದ್ದಳು. ಸಾಲದ್ದಕ್ಕೆ ಈ ನಡುವೆ ಊರಲ್ಲಿದ್ದಾಗ ನಮ್ಮ ಮನೆಯಲ್ಲಿ ಇಸ್ಪೀಟಾಟ ಬೇರೆ ಪ್ರಾರಂಭ-ವಾಗಿತ್ತು. ನಾನು, ನನ್ನ ಆಪ್ತಸ್ನೇಹಿತರು ಆಡಲು ಕುಳಿತುಬಿಟ್ಟೆವೆಂದರೆ ದಿನವಿಡೀ ಆಡುತ್ತಿದ್ದೆವು. ಮನೆಯಲ್ಲಿ ಇಸ್ಪೀಟಿನ ಗೆಳೆಯರಿಗೆಂದೇ ಒಂದು ರೂಮು. ಅಲ್ಲಿಗೆ ಟೀ, ಕಾಫಿ ತಂದುಕೊಡುವುದಕ್ಕಾಗಿಯೇ ಇಬ್ಬರು ಆಳು-ಗಳು. ಆಟದ ಜೊತೆಗೆ ಕುಡಿತ. ಪಾನನಿರೋಧವೇನೋ ಇತ್ತು. ಆದರೆ ನನ್ನಂತಹ ಪ್ರಭಾವಯುತ ವ್ಯಕ್ತಿಗೂ ಪಾನನಿರೋಧಕ್ಕೂ ಸಂಬಂಧವಿರು-ತ್ತಿರಲಿಲ್ಲ. ನನ್ನ ಆರೋಗ್ಯಕ್ಕೆ ಆಲ್ಕೋಹಾಲ್ ಅಗತ್ಯವೆಂದು ಸರ್ಟಿ-ಫಿಕೇಟನ್ನೂ ಸಂಪಾದಿಸಿಟ್ಟುಕೊಂಡಿದ್ದೆ. ಆದರೆ ನನಗೆ ಪಾನೀಯ ಬೇರೆ ಇರಲಿಲ್ಲ. ಒಂದು ಗ್ಲಾಸು ವಿಸ್ಕಿ ಗಂಟಲಲ್ಲಿ ಇಳಿಯಬೇಕಾದರೆ ಒಂದು ದಿನ-ವಾಗುತ್ತಿತ್ತು. ನಾನು 'ಪರ್ಮಿಟ್-ಹೋಲ್ಡರ್' ಎನ್ನುವುದನ್ನು ಕಂಡು ಕೊಂಡು ಊರಿನ ಪ್ರಮುಖ ವ್ಯಕ್ತಿಗಳೆಲ್ಲರೂ ನನ್ನ ಸ್ನೇಹ ಬಯಸಿದರು. ಅವರಿಗೆ ಪಾನೀಯ ವಿತರಣೆಯಾಗುವಾಗ ಕಿಟಕಿಯ ಬಾಗಿಲು ಮುಚ್ಚಿ-ಕೊಳ್ಳುತ್ತಿತ್ತು. ಅವರು ಆಟಕ್ಕೆ ಆರಂಭಿಸಿದಾಗ ಎರಡುಸಾವಿರ ರೂಪಾ-ಯಿಯ ಚೆಕ್ಕು ಕ್ಯಾಷ್ ಆಗುತ್ತಿತ್ತು. ಅವರಂತೂ ಗಂಟು ಬಿಚ್ಚದಿರಲು ಸಾಧ್ಯವೇ ಇರುತ್ತಿರಲಿಲ್ಲ. ಅಂತೂ ಈ ಕೋಣೆಯಲ್ಲಿ ಕುಳಿತೇ ನನಗೆ ಊರಿನ ರಾಜಕೀಯವೆಲ್ಲಾ ತಿಳಿದುಹೋಗುತ್ತಿತ್ತು. ಸರಕಾರದ ರಾಜಕೀಯ, ಮಾರು-ಕಟ್ಟೆಯ ವ್ಯಾಪಾರ, ರೇಸುಕೋರ್ಸಿನ ವ್ಯವಹಾರ, ಒಂದೇ? ಎರಡೇ ? ಇದ-ರಿಂದಾಗಿ ರೈಲಿನಲ್ಲಿ ರಿಸರ್ವೇಷನ್ ಬೇಕಾದರೆ ಒಂದೇ ನಿಮಿಷ. ಕೆಲಸದಿಂದ ತೆಗೆದುಹಾಕಿದ ನೌಕರ ನನ್ನ ಪ್ರಭಾವದಿಂದ ಮತ್ತೆ ಪಡೆಯುತ್ತಿದ್ದ. ನನ್ನ ಸ್ನೇಹವಿದ್ದರೆ ಚುನಾವಣೆಗೆ ನಿಂತ ಉಮೇದುವಾರ ಗೆದ್ದಂತೆಯೇ. ನನ್ನ ಹತ್ತಿರ ಶಿಫಾರಸು ಪಡೆದವರಿಗೆ ಕೆಲಸ ಖಾತ್ರಿ. ನನ್ನ ಹೆಸರು ಹೇಳಿದರೆ ಶಾಲೆಯಲ್ಲಿ ಶೀಟು ಖಂಡಿತ. ನಾನು ಹೇಳಿದೆನೆಂದರೆ ಯಾರಿಗೆ ಎಲ್ಲಿಗೆ ಬೇಕಾದರೂ ವರ್ಗವಾಗುತ್ತಿತ್ತು. ಹೀಗೆ ನಾನು ಬೇಕಾದಷ್ಟು ಪ್ರಜಾಸೇವೆ-ಯನ್ನು ಮಾಡುತ್ತಿದ್ದೆ.

ಅಂತೂ ಈ ಬೆಡಗಿನ ಜೀವನದ ಮಧ್ಯದಲ್ಲಿ ನನಗೆ ಮಾರ್ಕೊ ಇರುವ ವಿಷಯ ಮರತೇಹೋಗಿತ್ತು. ಅವನ ಹೆಸರು ಅಪ್ಪಿತಪ್ಪಿಯೂ ನಮ್ಮ ಬಾಯಲ್ಲಿ ಬರುತ್ತಿರಲಿಲ್ಲ. ಆದರೆ ಅವನ ಮನೆಯ ಹತ್ತಿರದಲ್ಲಿಲ್ಲೂ ನಾನು ಕಾರ್ಯಕ್ರಮಕ್ಕೆ ಒಪ್ಪಿಕೊಳ್ಳುತ್ತಿರಲಿಲ್ಲ. ಅವನನ್ನು ನೋಡುವುದಂತೂ ನನ್ನಿಂದ ಸಾಧ್ಯವಿರಲಿಲ್ಲ. ನಳಿನಿಯ ಮನಸ್ಸಿನಲ್ಲಿ ಏನಿದೆಯೋ ಅದಿನ್ನೂ ನನಗೆ ತಿಳಿದಿರಲಿಲ್ಲ. ಆದರೂ ನಳಿನಿಗೆ ಅವನ ಹೆಸರು ಹೇಳಿದರೆ ಆಗುತ್ತಿರಲಿಲ್ಲವೆಂದು ನಾನು ನಂಬಿದ್ದೆ. ಇಂದಿನ ನಳಿನಿಗೂ ಹಿಂದಿನ ನಳಿನಿಗೂ (ರೋಜಿಗೂ) ಯಾವ ಸಂಬಂಧವೂ ಇಲ್ಲವೆಂದೇ ತಿಳಿದಿದ್ದೆ. ಆದರೆ ನನ್ನ ನಂಬಿಕೆ ತಪ್ಪಾಯಿತು. ಒಂದು ದಿನ ನನ್ನ ಕಾರ್ಯದರ್ಶಿ ಆಗ ತಾನೆ ಟಪ್ಪಾಲಿನಲ್ಲಿ ಬಂದಿದ್ದ ಪುಸ್ತಕವನ್ನು ಹಿಡಿದುಕೊಂಡು ಬಂದ. ಸಾಧಾರಣವಾಗಿ ನಾನು ಟಪಾಲನ್ನು ನೋಡುತ್ತಲೇ ಇರಲಿಲ್ಲ. ದಿನವೂ ಒಂದು ಹೊರೆ ವೃತ್ತಪತ್ರಿಕೆಗಳೂ, ಅವೂ, ಇವೂ ಬರುತ್ತಲೇ ಇದ್ದವು. ನನ್ನ ಕಾರ್ಯದರ್ಶಿಯೇ ಅವನ್ನೆಲ್ಲ ನೋಡಿ ಕಾರ್ಯಕ್ರಮದ ವಿಷಯವಿದ್ದ ಕಾಗದ-ಪತ್ರಗಳನ್ನು ನನ್ನ ಕೈಗಿತ್ತು ನಳಿನಿಗೆ ಬೇಕಾದ ಒಂದೆರಡು ವೃತ್ತಪತ್ರಿಕೆಗಳನ್ನು ಮೇಲೆ ಕಳುಹಿಸಿ ಬಾಕಿಯ ಟಪಾಲನ್ನು ಅವನೇ ನೋಡಿ ಬಿಸಾಡುತ್ತಿದ್ದ. ನಾನಂತೂ ಪುಸ್ತಕವನ್ನಾಗಲೀ, ಪತ್ರಿಕೆಯನ್ನಾಗಲೀ ಓದುವ ಹವ್ಯಾಸವನ್ನೇ ಇಟ್ಟುಕೊಂಡಿರಲಿಲ್ಲ. ಆದರೆ ಅಂದು ಮಾತ್ರ ಅವನು ಟಪಾಲಿನಲ್ಲಿ ಒಂದು ಪುಸ್ತಕವನ್ನು ಹಿಡಿದುಕೊಂಡು ಬಂದುದನ್ನು ನೋಡಿ ಆಶ್ಚರ್ಯವೇ ಆಯಿತು.

"ಈ ಪುಸ್ತಕ ನೋಡುತ್ತೀರಾ ಸಾರ್........"

ಪುಸ್ತಕ ತೆಗೆದು ಹಿಡಿದಾಗ ನಾನು ಅದನ್ನು ಅವನ ಕೈಯಿಂದ ಕಸಿದುಕೊಂಡೆ. ಅದು ಮಾರ್ಕೊ ಬರೆದ ಪುಸ್ತಕ. ಪುಸ್ತಕದ ತುಂಬ ಚಿತ್ರಗಳು. ಚಿತ್ರಗಳ ಕೆಳಗೆಲ್ಲ ವಿವರಣೆಗಳು. ಅದರಲ್ಲೇ ಒಂದು ಕಡೆ '೧೫೮ನೇ ಪುಟ ನೋಡಿ' ಎಂದು ಪೆನ್ಸಿಲಿನಲ್ಲಿ ಬರೆದಿತ್ತು. ನಾನು ಪುಟಗಳನ್ನು ತಿರುವಿದೆ. ನೂರೈವತ್ತೆಂಟನೇ ಪುಟದ ಮೇಲೆ 'ಮೆಂಪಿಯ ಗುಹಾಂತರ ದೇವಾಲಯಗಳು', ಅದರಡಿಯಲ್ಲಿ 'ಮೆಂಪಿಯಲ್ಲಿ ದೊರೆತ ಸೌಲಭ್ಯಗಳಿಗಾಗಿ ಈ ಲೇಖಕ ಮಾಲ್ಗುಡಿ ರೈಲ್ವೆ ಸ್ಟೇಷನ್ನಿನ ಶ್ರೀ ರಾಜು ಅವರಿಗೆ ಋಣಿಯಾಗಿ-

ದ್ದಾನೆ' ಎಂದಿತ್ತು.

ಲೇಖಕನ ಸೂಚನೆಯ ಪ್ರಕಾರ ಬೊಂಬಾಯಿಯಲ್ಲಿನ ಪುಸ್ತಕದ ಪ್ರಕಾಶನದವರು ನನಗೆ ಕಳುಹಿಸಿದ್ದರು. ಪುಸ್ತಕದ ಬೆಲೆ ಇಪ್ಪತ್ತು ರೂಪಾಯಿಗಳು. ಪುಸ್ತಕದ ತುಂಬ ಚಿತ್ರಗಳೇ. ದಕ್ಷಿಣಭಾರತದ ಸಾಂಸ್ಕೃತಿಕ ಚರಿತ್ರೆಯ ಮೇಲೊಂದು ಲೇಖನ. ಪುಸ್ತಕವೇನೋ ಭಾರಿ ಸಂಶೋಧನಾ ಗ್ರಂಥವೇ ಇರಬೇಕು. ಆದರೆ ಅದು ನನ್ನ ಬುದ್ಧಿಗೆ ಮೀರಿದ್ದು.

'ಇರಲಿ ಹೋಗು' ಎಂದು ನನ್ನ ಕಾರ್ಯದರ್ಶಿಯನ್ನು ಕಳುಹಿಸಿಬಿಟ್ಟೆ. ಪುಸ್ತಕದ ಪುಟಗಳನ್ನು ತಿರುವಿದಾಗ ನನಗನ್ನಿಸಿತು: ಈ ಹುಡುಗ ಇದನ್ನು ತಂದು ಯಾಕೆ ತೋರಿಸಿದ? ಅವನಿಗೆ ನಮ್ಮ ವಿಚಾರವೆಲ್ಲ ಗೊತ್ತಿರಬಹುದೇ? ಅಥವಾ ಪುಸ್ತಕದ ಭರ್ಜರಿ ಬೈಂಡು ಚೆನ್ನಾಗಿದೆಯೆಂದು ಅಂದು ತೋರಿಸಿದನೋ? ಈಗೇನು ಮಾಡುವುದು? ಎನ್ನುವುದೇ ನನ್ನ ಯೋಚನೆಯಾಯಿತು. ಮೇಲೆ ಹೋಗಿ ನಳಿನಿಗೆ ತೋರಿಸುವುದೇ? ಅಥವಾ........ ಇಷ್ಟಕ್ಕೂ ಅವಳಿಗೆ ಇದರಲ್ಲಿರೋ ಆಸಕ್ತಿ ಇಷ್ಟರಲ್ಲಿಯೇ ಇದೆ. ಕಾಗದವೇನಾದರೂ ಇದೆಯೋ ಎಂದು ನೋಡಿದೆ. ಕಾಗದವೇನೂ ಇರಲಿಲ್ಲ. ಮತ್ತೆ ನೂರೈವತ್ತೆಂಟನೆಯ ಪುಟವನ್ನು ತೆಗೆದೋದಿದೆ. ನನ್ನ ಹೆಸರನ್ನು ಅಚ್ಚಿನಲ್ಲಿ ನೋಡಿ ನನಗೆ ರೋಮಾಂಚನವಾಯಿತು. ಆದರೆ ಹೀಗೆ ನನ್ನ ಹೆಸರನ್ನು ಪ್ರಕಟಿಸುವ ಉದ್ದೇಶ್ಯ ಏನಿರಬಹುದು? ನನಗೆ ಮಾತುಕೊಟ್ಟಿದ್ದಕ್ಕಾಗಿ ಮಾತ್ರ ಬರೆದಿರಬಹುದೇ? ಅಥವಾ........ಏನೇ ಆಗಲಿ ಅವನು ನನ್ನನ್ನು ಮರೆತಿಲ್ಲವೆಂದುಕೊಂಡು ಸದ್ಯಕ್ಕೆ ಪುಸ್ತಕವನ್ನು ಬಚ್ಚಿಡುವುದೇ ಮೇಲೆಂದುಕೊಂಡೆ. ಇಸ್ಪೀಟು ಕೋಣೆಯ ಪಕ್ಕದಲ್ಲಿದ್ದ ರೂಮಿಗೆ ಹೋಗಿ ಅಲ್ಲಿ ಪಾಸೀಯವನ್ನು ಭದ್ರಪಡಿಸಿದ್ದ ಬೀರುವಿನೊಳಗೆ ಪುಸ್ತಕವನ್ನು ಹುದುಗಿಸಿಟ್ಟು ಬೀಗ ಹಾಕಿದೆ. ಆದರ ಬೀಗದ ಕೈ ಯಾವಾಗಲೂ ನನ್ನ ಹತ್ತಿರವೇ ಇರುತ್ತಿತ್ತು. ನಳಿನಿಯಂತೂ ಆ ರೂಮಿನ ಹತ್ತಿರವೇ ಬರುತ್ತಿರಲಿಲ್ಲ. ಅವಳ ಹತ್ತಿರ ಪುಸ್ತಕದ ವಿಷಯವನ್ನೇ ಎತ್ತಲಿಲ್ಲ. ಎಷ್ಟಾದರೂ ಪುಸ್ತಕ ಬಂದಿದ್ದು ನನ್ನ ಹೆಸರಿಗೆ. ಅಲ್ಲಿರುವುದು ನನ್ನ ಹೆಸರು. ಆದರೆ ಸೂರ್ಯನನ್ನು ಮುಚ್ಚಿಡಲು ಕೊಡೆಯನ್ನು ಹಿಡಿದಷ್ಟು ಸಫಲವಾಯಿತು ನನ್ನ ಪ್ರಯತ್ನ.

ಮೂರು ವಾರಗಳಾದ ಮೇಲೆ ಬೊಂಬಾಯಿಯಲ್ಲಿನ ಸಚಿತ್ರ ವಾರ-

ಕನ್ನಡ ವಿಶ್ವವಿದ್ಯಾಲಯ, ಹಂಪಿ



ಪತ್ರಿಕೆಯಲ್ಲಿ ಮಾರ್ಕೊವಿನ ಫೋಟೋ ಪ್ರಕಟವಾಯಿತು. ನಳಿನಿ ಆ ಪತ್ರಿಕೆಯನ್ನು ತಪ್ಪದೆ ಓದುತ್ತಿದ್ದಳು. ಹೊಸ ವಧೂ-ವರರ ಚಿತ್ರಗಳು, ರೋಮಾಂಚಕಾರಕ ಕಥೆಗಳು, ತಿಳಿಹಾಸ್ಯದ ಲೇಖನಗಳು ನಳಿನಿಯ ಮನಸ್ಸನ್ನಾಕರ್ಷಿಸುತ್ತಿದ್ದವು. ಫೋಟೋದ ಕೆಳಗೆ 'ಶ್ರೀ ಮಾರ್ಕೊ ಅವರ ಈ ಪುಸ್ತಕ ಭಾರತೀಯ ಸಾಂಸ್ಕೃತಿಕ ಚರಿತ್ರೆಯ ಒಂದು ಹೊಸ ಮೈಲಿಗಲ್ಲು' ಎಂದಿತ್ತು. ನಾನು ಹಾಲಿನಲ್ಲಿ ಲೆಕ್ಕ-ಪತ್ರಗಳನ್ನು ನೋಡುತ್ತಿದ್ದೆ. ನೋಡಲು ಬಂದವರನ್ನೆಲ್ಲ ಕಳುಹಿಸಿಯಾಗಿತ್ತು. ಮಹಡಿಯಿಂದ ಧಡಧಡ ಇಳಿದುಬರುವ ಸದ್ದು ಕೇಳಿಸಿತು. ನಳಿನಿ ಕೈಯಲ್ಲಿ ಪತ್ರಿಕೆ ಹಿಡಿದು ಓಡಿಬಂದಳು.

"ಇದನ್ನು ನೋಡಿದಿರಾ?"

ನಾನು ನೋಡಿಲ್ಲದವನಂತೆ ಆಶ್ಚರ್ಯ ವ್ಯಕ್ತಪಡಿಸಿದೆ.

"ನಿಜವಾಗಿ ಮಹತ್ಕಾರ್ಯ. ಇದಕ್ಕೋಸ್ಕರ ಅವರು ಜೀವನವನ್ನು ಮುಡಿಪಾಗಿಟ್ಟರು. ಹಗಲು-ರಾತ್ರಿಯೆನ್ನದೆ ಕೆಲಸ ಮಾಡಿದರು. ಪುಸ್ತಕ ಹೇಗಿದೆಯೋ?"

"ಬರೀ ಸಂಶೋಧನೆ. ನಮಗೂ ಅದಕ್ಕೂ ಬಲುದೂರ. ಯಾರಿಗೆ ಅದರಲ್ಲಿ ಆಸಕ್ತಿಯಿದೆಯೋ ಅವರಿಗೆ ಹಿಡಿಸಬಹುದು."

"ಓ........ಆ ಪುಸ್ತಕ ಇಲ್ಲೆಲ್ಲಾದರೂ ಸಿಗುತ್ತೇನೋ ನೋಡಿ, ನಾನು ನೋಡಬೇಕು" ಎಂದವಳೆ ನನ್ನ ಕಾರ್ಯದರ್ಶಿಯನ್ನು ಕರೆದಳು. ನಳಿನಿ ಹಾಗೆ ಎಂದೂ ಮಾಡಿರಲಿಲ್ಲ.

"ಮಣಿ, ಇಲ್ಲಿ ನೋಡು, ಈ ಪುಸ್ತಕಾನ ನನಗೆ ತಂದುಕೊಡಬೇಕು ತಿಳಿಯಿತಾ?"

ಮಣಿ ಒಂದು ನಿಮಿಷ ಅದನ್ನೇ ನೋಡುತ್ತಿದ್ದು ಅನಂತರ ನನ್ನ ಮುಖ ನೋಡಿ ತಲೆಯಲ್ಲಾಡಿಸಿದನು.

ನಾನು ಇನ್ನು ಸುಮ್ಮನಿರುವುದು ಸರಿಯಲ್ಲವೆಂದು "ಮಣಿ, ಆ ಕಾಗದ ತಗೊಂಡು ಹೋಗಿ ಬೇಗ ಪೋಸ್ಟ ಮಾಡಿ ಬಾ. ಲೇಟ್ ಫೀ ಹಾಕೋದನ್ನ ಮರೀಬೇಡ" ಎಂದೆ.

ಅವನು ಹೊರಟುಹೋದ. ನಳಿನಿ ಅಲ್ಲೇ ಕೂತಿದ್ದಳು. ನಾನು

[illegible stamp]



ಯಾರಾದರೂ ಬಂದಾಗ ಹೇಳಿಕಳುಹಿಸದ ಹೊರತು ಅವಳು ಕೆಳಗೆ ಬರು-ತ್ತಲೇ ಇರಲಿಲ್ಲ. ಆದರೆ ಇದೇನು ಈ ದಿನ ಹೀಗೆ? ಪುಸ್ತಕವನ್ನು ತಂದು ತೋರಿಸಲೇ ಎನಿಸಿತು. ಆದರೆ ಮೊದಲೇ ಯಾಕೆ ತೋರಿಸಲಿಲ್ಲವೆಂದು ಕೇಳಿ-ದರೆ? ಸ್ವಲ್ಪ ಹೊತ್ತಾದ ಮೇಲೆ ನಳಿನಿ ಮೇಲಕ್ಕೆ ಹೊರಟುಹೋದಳು. ಮಾರನೆಯ ದಿನ ಅವಳ ಅಲಂಕಾರದ ಕನ್ನಡಿಯ ಮುಂದೆ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಅವನ ಫೋಟೋ ಇರುವುದನ್ನು ನೋಡಿ ಚಕಿತನಾದೆ. ಅದನ್ನು ನೋಡದವನಂತೆ ಸುಮ್ಮನಾದೆ.

ಅದೊಂದು ವಾರ ಊರು ಬಿಟ್ಟು ಎಲ್ಲಿಯೂ ಹೋಗಿರಲಿಲ್ಲ. ಒಂದು ವೇಳೆ ಹೋಗಿದ್ದರೆ ಮಾರ್ಕೋವಿನ ಫೋಟೋ ಬಂದ ಆ ಸಂಚಿಕೆ ನಮ್ಮ ಕೈಗೆ ಸಿಗುತ್ತಿರಲಿಲ್ಲವೇನೋ? ಆ ಸಂಚಿಕೆ ಬಂದು ಮೂರು ದಿನಗಳಾದ ಮೇಲೆ ಒಂದು ರಾತ್ರಿ ಮಲಗಿದಾಗ ನಳಿನಿ—

"ಆ ಪುಸ್ತಕ ಎಲ್ಲಿಟ್ಟಿರಿ?" ಎಂದಳು.

"ಯಾರು ಹೇಳಿದರು?"

"ಯಾರು ಹೇಳಿದರೇನಂತೆ? ನಿಮಗೆ ಕಳುಹಿಸಿದ್ದಾರೆಂದು ಗೊತ್ತು. ನಾನದನ್ನು ನೋಡಬೇಕು."

"ಸರಿ, ನಾಳೆ ತೋರಿಸುತ್ತೇನೆ."

ಮಣೀನೇ ಅವಳಿಗೆ ಹೇಳಿರಬೇಕು. ನನ್ನ ಕಾರ್ಯದರ್ಶಿ ನೇರವಾಗಿ ಮಾತಾಡಬಾರದೆಂದು ನಾನು ಮೊದಲೇ ತಿಳಿಸಿದ್ದೆ. ಹಾಗೇ ಇದುವರೆಗೂ ನಡೆದುಕೊಂಡು ಬರುತ್ತಿತ್ತು.

ನಳಿನಿ ಎದ್ದು ನಿಂತು ಕೈಯ್ಯಲ್ಲೊಂದು ಪುಸ್ತಕ ಹಿಡಿದುಕೊಂಡು ಓದಲು ಕುಳಿತವಳಂತೆ ಕುಳಿತಳು. ಆದರೆ ಅವಳು ಎದ್ದುಕುಳಿತಿದ್ದು ನಿಜವಾಗಿ ನನ್ನ ಜೊತೆ ಜಗಳ ಕಾಯುವುದಕ್ಕಾಗಿ—

"ಆ ಪುಸ್ತಕವನ್ನು ನನ್ನಿಂದ ಯಾಕೆ ಬಚ್ಚಿಟ್ಟಿರಿ?"

"ಚರ್ಚೆಯನ್ನೆಲ್ಲ ನಾಳೆ ಮಾಡೋಣವಂತೆ. ನನಗೆ ಈಗ ನಿದ್ದೆ ಬರುತ್ತಾ ಇದೆ."

"ಯಾಕೆ ಬಚ್ಚಿಡಬೇಕಾಗಿತ್ತೆಂದು ಹೇಳಿಬಿಟ್ಟು ಮಹಾರಾಯರ ಹಾಗೆ ನಿದ್ದೆಮಾಡಿ. ಯಾರು ಬೇಡ ಎಂದರು?"

"ನಿನಗೆ ಅದರಲ್ಲಿ ಇಷ್ಟು ಆಸಕ್ತಿ ಹುಟ್ಟುತ್ತೆ ಎಂದು ನನಗೇ ತಿಳೀ-ಲಿಲ್ಲ."

"ಯಾಕಾಗಬಾರದು? ಎಷ್ಟಾದರೂ........"

"ಅವನ ಕೆಲಸ ಅಂದರೆ ನನಗೆ ಬೇಜಾರು ಅಂತ ನೀನೇ ಹೇಳಿದ್ದೆ."

"ಈಗಲೂ ಪುಸ್ತಕಾನಾ ಓದಿದರೆ ಬೇಜಾರಾಗಬಹುದು. ಆದರೆ ಅವರ ವಿಚಾರ ಏನಾದರೂ ಹೇಳಿದರೆ ನನಗೆ ಅದರಲ್ಲಿ ಆಸಕ್ತಿ ಹುಟ್ಟದೆ ಇರುತ್ತೆಯೆ? ಅಂತೂ ಅವರಿಗೆ ಈ ಗೌರವ ಸಿಕ್ಕಿತಲ್ಲ. ನನಗಷ್ಟೇ ಸಾಕು."

"ಹೌದು, ಹೌದು. ನೀನು ಇದ್ದಕ್ಕಿದ್ದ ಹಾಗೆಯೇ ಬದಲಾಯಿಸಿ ಹೋಗುತ್ತಿದ್ದೀಯೇ ಅಷ್ಟೆ. ಆದರೆ ಆ ಪುಸ್ತಕ ಬಂದಿದ್ದು ನನಗೆ. ನಿನಗಲ್ಲ ತಿಳೀತೆ?"

"ನಿಮಗೆ ಬಂದಮಾತ್ರಕ್ಕೆ ಹಾಗೆ ಬಚ್ಚಿಡಬೇಕೇನು?"

"ನನ್ನ ಪುಸ್ತಕಾನ ನಾನು ಏನು ಬೇಕಾದರೂ ಮಾಡಿಕೋತೀನಿ. ನನಗೆ ಈಗ ನಿದ್ದೆ ಬರುತ್ತಾ ಇದೆ. ಓದದೆ ಸುಮ್ಮನೆ ಯೋಚನೆಮಾಡೋ ಹಾಗಿದ್ದರೆ ದೀಪದ ಅವಶ್ಯಕತೆ ಇಲ್ಲ."

ಹಾಗೆ ಯಾಕೆ ಮಾತಾಡಿದೆನೋ ಹೇಳಲಾರೆ. ಅಂತೂ ದೀಪವಾರಿತು. ಆದರೆ ನಳಿನಿ ಕತ್ತಲಲ್ಲೇ ಎದ್ದುಕುಳಿತು ಅಳುತ್ತಿದ್ದಳು. ಅವಳ ಕ್ಷಮೆ ಕೋರಿ ಸಂತಯಿಸಲೇ ಎನಿಸಿತು. ಆದರೆ ಮನಸ್ಸಿನಲ್ಲಿನ ದುಃಖವೆಲ್ಲ ಹೊರಗೆ ಬಂದರೆ ಒಳ್ಳೆಯದೆ. ನಾನು ಪಕ್ಕಕ್ಕೆ ತಿರುಗಿ ಮಲಗಿಕೊಂಡು ನಿದ್ದೆ ಬಂದವ-ನಂತೆ ನಟಿಸಿದೆ. ಅರ್ಧ ಘಂಟೆಯಾಯಿತು. ದೀಪ ಹಾಕಿದೆ. ನಳಿನಿ ಇನ್ನೂ ಅಳುತ್ತಲೇ ಇದ್ದಳು.

"ಏನಾಯಿತು ಹೇಳಬಾರದೆ?"

"ಅವರು ಎಷ್ಟಾದರೂ ನನ್ನ ಪತಿ."

"ಇಲ್ಲ ಅಂದೋರು ಯಾರು? ಅಳೋ ಅಂಥಾದ್ದು ಈಗ ಏನಾಗಿದೆ? ಅವರಿಗೆ ಬಂದಿರೋ ಗೌರವ ನೋಡಿ ಹಿಗ್ಗಬೇಕು."

"ಹೌದು, ನನಗೆ ಸಂತೋಷವಾಗಿದೆ."

"ಹಾಗಾದರೆ ಅಳೋದನ್ನ ನಿಲ್ಲಿಸಿ ನಿದ್ದೆಹೋಗು."

"ಅವರ ಹೆಸರೆತ್ತಿದರೆ ಅದೇನು ಹಾಗೆ ಸಿಡಿದುಬೀಳುತ್ತೀರಿ?"

"ಯಾಕೆಂದರೆ ನಿನ್ನನ್ನು ಬಿಟ್ಟುಹೋದ ಸ್ಥಿತಿ ನೆನೆಸಿಕೊಂಡರೆ........"

"ಆ ಸ್ಥಿತಿಗೂ ನಾನು ಅನರ್ಹಳಾಗಿದ್ದೆ. ಅವರಲ್ಲದೆ ಇನ್ನೊಬ್ಬರಾಗಿದ್ದರೆ ಕತ್ತು ಹಿಚಿಕಿ ಸಾಯಿಸಿಬಿಡುತ್ತಿದ್ದರು. ಅವರಾಗೋ ಹೊತ್ತಿಗೆ ನನ್ನಂತಹ ಪಾಪಿಯ ಜತೆಯಲ್ಲೇ ಒಂದು ತಿಂಗಳು ಕಾಲ ಕಳೆದರು."

"ನೀನು ಈಗೊಂದು ಮಾತಾಡುತ್ತಿ, ಇನ್ನೊಂದು ನಿಮಿಷಕ್ಕೊಂದು ಮಾತಾಡುತ್ತಿ. ಯಾವುದು ಸರಿ, ಯಾವುದು ತಪ್ಪು ಅಂತ ಹೇಗೆ ತಿಳಿಯಬೇಕು?"

"ಅವರ ವಿಚಾರ ನಾನೇ ತಪ್ಪು ತಿಳಿದುಕೊಂಡಿರಬಹುದು. ನನ್ನ ವಿಚಾರವಾಗಿ ಎಷ್ಟು ದಯೆತೋರಿಸಿದರು"

"ಹೌದು, ಹೌದು ಅವನು ತೋರಿಸಿದ ದಯೆ ನನಗೆ ಗೊತ್ತಿಲ್ಲವೇ? ನಿನ್ನನ್ನು ಮುಟ್ಟಲೂ ಇಲ್ಲ ಪ್ರಾಣಿ."

"ಅದನ್ನೆಲ್ಲ ಹೇಳಿ ಯಾಕೆ ಹಿಂಸೆಮಾಡುತ್ತೀರಿ?"

ನನಗೆ ಏನು ಮಾಡಲೂ ತೋಚಲಿಲ್ಲ. ಅವಳ ಸ್ವಭಾವವನ್ನು ಸ್ವಲ್ಪವೂ ತಿಳಿದುಕೊಳ್ಳದೆ ಅವಳ ಜೊತೆ ವಾಸಿಸುತ್ತಿದ್ದೇನೆಯೇ? ಎನಿಸಿತು. ಅವಳಿಗೆ ಬುದ್ಧಿ ಸ್ಥಿಮಿತದಲ್ಲಿದೆಯೋ ಇಲ್ಲವೋ? ನನ್ನ ಸಹವಾಸ ಬೇಸರ ಬಂದು ಹೀಗೆ ನನ್ನ ಮೇಲೆ ಇಲ್ಲದ ಅಪರಾಧವನ್ನು ಹೊರಿಸುತ್ತಿದ್ದಾಳೋ? ನನ್ನ ಮನಸ್ಸನ್ನು ಅಪಹರಿಸುವುದಕ್ಕಾಗಿ ಮಾತ್ರವೇ ತನ್ನ ಗಂಡನ ಬಗ್ಗೆ ಇಲ್ಲಸಲ್ಲದ ಆರೋಪಗಳನ್ನು ಮಾಡಿದಳೇ? ಇದ್ದಕಿದ್ದ ಹಾಗೆ ಇದೇನು ಈ ಪತಿಭಕ್ತಿ? ನನಗೆ ಸಂಕಟವಾಯಿತು. ಅವಳಿಗಾಗಿ ನನಗೆ ಎಷ್ಟು ಸಾಧ್ಯವೋ ಅಷ್ಟನ್ನೂ ಮಾಡಿದ್ದೆ. ಅವಳಂತೂ ಈಗ ನಾಟ್ಯರಂಗದಲ್ಲಿ ಧ್ರುವತಾರೆಯಾಗಿದ್ದಳು. ಆದರೂ ಅವಳ ಮನಸ್ಸಿಗೆ ಶಾಂತಿಯಿಲ್ಲವೇ? ಆ ಅಶಾಂತಿಗೆ ಕಾರಣವನ್ನು ಹುಡುಕಿ, ಅದನ್ನು ತೊಡೆದುಹಾಕಲು ಸಾಧ್ಯವೇ?

"ನಾವು ಸ್ವಲ್ಪ ದಿನ ವಿಶ್ರಾಂತಿಗೋಸ್ಕರ ಎಲ್ಲಿಗಾದರೂ ಹೋಗಿಬರೋಣ" ಎಂದೆ.

"ಎಲ್ಲಿಗೆ?"

"ಎಲ್ಲಿಗೆ ಅಂದರೆ........ಎಲ್ಲಿಗಾದರೂ...........ಎಲ್ಲಾದರೂ ಒಂದು ಕಡೆಗೆ."

" ಎಲ್ಲಾದರೂ ಒಂದು ಕಡೆಗೆ ಹೋಗುತ್ತಾನೇ ಇದ್ದೇವಲ್ಲ. ಅದಕ್ಕೂ ಇದಕ್ಕೂ ಏನು ವ್ಯತ್ಯಾಸ ? "

" ಯಾವ ಕಾರ್ಯಕ್ರಮದ ತಂಟೆಯೂ ಇಲ್ಲದೆ ನಾಲ್ಕು ದಿನ ಹಾಯಾಗಿದ್ದು ಬರಬಹುದು."

" ನನಗೆ ಕಾಯಿಲೆಯೋ ಕಸಾರಿಕೆಯೋ ಬರದ ಹೊರತು ಅದು ಸಾಧ್ಯವಿಲ್ಲ. ಗಾಣದೆತ್ತಿನ ಹಾಗೆ ನನ್ನ ಕೆಲಸ. "

" ಇಲ್ಲ, ಈಗ ಒಪ್ಪಿಕೊಂಡಿರೋ ಕಾರ್ಯಕ್ರಮಗಳು ಮುಗಿದುಹೋಗಲಿ. ಕೂಡಲೇ ಹೊರಟುಬಿಡೋಣ. "

" ಇನ್ನು ಮೂರು ತಿಂಗಳಿಗೆ ? "

" ಹೌದು, ಅದು ಮುಗಿದುಹೋಗಲಿ. ಕೂಡಲೇ ಹೊರಟುಬಿಡೋಣ."

ನಳಿನಿಗೆ ನನ್ನ ಮಾತಿನಲ್ಲಿ ನಂಬಿಕೆ ಹುಟ್ಟಿದಹಾಗೆ ಕಾಣಲಿಲ್ಲ.

" ನೋಡು, ನಿನಗೆ ಯಾವುದಾದರೂ ಕಾರ್ಯಕ್ರಮ ಬೇಡವೆನಿಸಿದರೆ ಹೇಳಿಬಿಡು. "

" ಯಾರಿಗೆ ಹೇಳಬೇಕು ? "

" ಯಾರಿಗೆ ಅಂದರೆ ನನಗೆ. "

" ನೀವು ಕಾರ್ಯಕ್ರಮ ಒಪ್ಪಿಕೊಂಡು ಅಡ್ವಾನ್ಸ ತೆಗೆದುಕೊಳ್ಳುವುದಕ್ಕೆ ಮೊದಲು ನನಗೆ ಹೇಳಿದರೆ ತಾನೆ ? "

ನಿಜವಾಗಿ ನಳಿನಿಗೆ ಏನೋ ಆಗಿದ್ದಿತು. ನಾನು ನನ್ನ ಹಾಸಿಗೆ ಬಿಟ್ಟೆದ್ದು ಅವಳ ಹತ್ತಿರ ಹೋಗಿ ಭುಜವನ್ನು ಅಲುಗಿಸಿ ಕೇಳಿದೆ:

" ಏನಾಗಿದೆ ರೋಜಿ ? ನಿನಗೆ ನೆಮ್ಮದಿಯಿಲ್ಲವೆ ? "

" ಇಲ್ಲ, ನೆಮ್ಮದಿ ಇಲ್ಲ. ನೀವೇನು ಮಾಡೋಹಾಗಿದ್ದೀರಿ ? "

ನನಗೇನು ಹೇಳಬೇಕೋ ತಿಳಿಯಲಿಲ್ಲ. " ಏನಾಗಿದೆ ಅಂತ ಹೇಳಿದರೆ ಏನಾದರೂ ಮಾಡಬಹುದು. ನನಗೆ ತಿಳಿದಿರೋ ಮಟ್ಟಿಗೆ ನಿನಗೆ ನೆಮ್ಮದಿ ಇಲ್ಲದಿರುವುದಕ್ಕೆ ಯಾವ ಕಾರಣಾನೂ ಇಲ್ಲ ರತ್ನದಂತಹ ಹೆಸರು ಸಂಪಾದಿಸಿದೀಯಾ. ಬೇಕಾದಷ್ಟುದುಡ್ಡು ಸಂಪಾದಿಸಿದೀಯಾ. ಬೇಕಾದ್ದು ಮಾಡೋ ಅವಕಾಶವಿದೆ. ನಾಟ್ಯ ಮಾಡಬೇಕು ಅಂತಿದ್ದೆ, ಅದನ್ನು ಮಾಡಿದೆ. "

" ಹೌದು ಮಾಡಿದೆ. ತಲೆ ಚಿಟ್ಟುಹಿಡಿಯುವ ತನಕ. ಚಿನ್ನದ ಪಂಜರ-

ದಲ್ಲಿರೋ ಹಕ್ಕಿಯ ಹಾಗಾಗಿದೆ ನನ್ನ ಬಾಳು. ಇಲ್ಲ ಅವರು ಹೇಳುತ್ತ ಇದ್ದ-ಹಾಗೆ ಬೀದಿಯಾಟಕ್ಕೆ ಹೋಗೋ ಕೋತಿ."

ಅವಳು ವಾಕ್ಯವನ್ನು ಮುಗಿಸುವುದರೊಳಗಾಗಿ ನಾನು ನಕ್ಕುಬಿಟ್ಟೆ. ಇಂತಹ ಸಮಯದಲ್ಲಿ ಮಾತಿಗಿಂತ ನಗುವೇ ಉತ್ತಮವೆನಿಸಿತು. ಒಂದು ಮಾತಾಡಿದರೆ ನಾಲ್ಕು ಮಾತಾಗುತ್ತದೆ. ಆದರೆ ಜೋರಾಗಿ ನಕ್ಕುಬಿಟ್ಟರೆ ಆ ನಗುವಿನಲ್ಲಿ ವಿಷವೆಲ್ಲ ಕರಗಿಹೋಗುತ್ತದೆ. ನಾನು ನಗಲು ಆರಂಭಿ-ಸಿದುದನ್ನು ಕಂಡು ರೋಜಿಯೂ ನಕ್ಕಳು. ಕೊನೆಗಿಬ್ಬರೂ ಹೊಟ್ಟೆ-ಹುಣ್ಣಾಗುವಂತೆ ನಕ್ಕುಬಿಟ್ಟೆವು. ನಾವು ಈ ವಿರಸವನ್ನು ಮರೆತು ಮಲಗಿ-ದಾಗ ಎರಡು ಘಂಟೆ.

ಇದಾದ ಮೇಲೆ ನಮ್ಮ ಜೀವನಕ್ರಮ ಯಥಾಪ್ರಕಾರ ಸಾಗತೊಡ-ಗಿತು. ನಾನಂತೂ ಅವಳನ್ನು ಹೆಚ್ಚು ಕೆಣಕಲು ಹೋಗುತ್ತಿರಲಿಲ್ಲ. ಅದೂ ಅಲ್ಲದೆ ಮುಂದಿನ ಮೂರು ತಿಂಗಳ ಕಾರ್ಯಕ್ರಮವೆಲ್ಲ ವಿಶೇಷ ಕಾರ್ಯ-ಕ್ರಮಗಳು. ಒಂದೊಂದು ಕಾರ್ಯಕ್ರಮಕ್ಕೂ ನಾನು ತುಂಬ ಮುಂಗಡ ಹಣ ಪಡೆದಿದ್ದೆ. ಆ ಮೂರು ತಿಂಗಳಲ್ಲಿ ಮಾಲ್ಗುಡಿಯಿಂದ ಹೊರಟು ತಿರುಗಿ ಮಾಲ್ಗುಡಿಗೆ ಬರುವ ವರೆಗೂ ಸುಮಾರು ಎರಡುಸಾವಿರ ಮೈಲು ಪ್ರಯಾಣ. ಈ ಕಾರ್ಯಕ್ರಮದ ಮಧ್ಯೆ ಚಿಂತೆ ಮಾಯವಾಗುವುದು ಖಂಡಿತ. ನಾನಂತೂ ಅವಳನ್ನು ಸಂತೋಷವಾಗಿಡಲು ವಿಶ್ವಪ್ರಯತ್ನವನ್ನು ಮಾಡು-ತ್ತಿದ್ದೆ.

ಮಣಿ ಒಂದೆರಡು ದಿನ ರಜೆ ಪಡೆದು ಹೋಗಿದ್ದ. ನಾನೇ ಟಪಾಲು ನೋಡುತ್ತಿದ್ದೆ. ಕಾರ್ಯಕ್ರಮದ ಬೇಡಿಕೆಗಳನ್ನೆಲ್ಲ ಬೇರೆ ಒಂದು ಕಡೆಗೆ ಇಟ್ಟೆ. ಒಪ್ಪಿಕೊಳ್ಳುವುದಕ್ಕೆ ಮೊದಲು ಅವಳನ್ನು ಒಂದು ಮಾತು ಕೇಳಿ-ಬಿಡಬೇಕೆನಿಸಿತು. ಹೇಳಿದರೆ ಒಪ್ಪಿಕೊಂಡೇ ಒಪ್ಪಿಕೊಳ್ಳುತ್ತಾಳೆ. ಆದರೂ ತನ್ನನ್ನು ಕೇಳಲಿಲ್ಲವೆಂಬ ಭಾವನೆ ಅವಳಿಗೆ ಯಾಕೆ ಬರಬೇಕು?

ಇದ್ದಕ್ಕಿದ್ದ ಹಾಗೆಯೇ ಒಂದು ಕಾಗದದ ಮೇಲೆ 'ರೋಜಿ ಅಲಿ-ಯಾಸ್ ನಳಿನಿ' ಎಂದಿರುವುದು ಕಂಡುಬಂತು. ಮದರಾಸಿನ ಲಾಯ ರೊಬ್ಬರಿಂದ ಬಂದ ಪತ್ರ ಅವಳಿಗೆ ತೋರಿಸುವುದೇ ಬೇಡವೇ? ಎಂದು ಒಂದು ನಿಮಿಷ ಯೋಚಿಸಿದೆ. ಎಷ್ಟಾದರೂ ಅವಳು ವಯಸ್ಕಳು. ಅವಳ

ಕಾಗದ–ಪತ್ರಗಳನ್ನೆಲ್ಲ ಅವಳೇ ನೋಡಬೇಕು ಎಂದಿತು ನನ್ನ ಒಂದು ಮನಸ್ಸು. ಆದರೆ ನಾನು ಅದಕ್ಕೆ ಗಮನ ಕೊಡದೆ ಕಾಗದವನ್ನು ಒಡೆದು ನೋಡಿದೆ. ಕಾಗದ ಲಾಯರರಿಂದ ಬಂದಿತ್ತು.

“ ಶ್ರೀಮತಿಯವರೇ,

ನಮ್ಮ ಕಕ್ಷಿಗಾರರ ಸೂಚನೆಯಂತೆ ಇದರೊಂದಿಗೆ ಒಂದು ಅಪ್ಲಿ-ಕೇಷನ್ ಫಾರಂ ಕಳುಹಿಸಿದ್ದೇವೆ. ದಯವಿಟ್ಟು ಅದಕ್ಕೆ ರುಜು ಹಾಕಿ ಕಳಿಸಿ. ಬ್ಯಾಂಕಿನಲ್ಲಿರುವ ಒಡವೆಯ ಪೆಟ್ಟಿಗೆಗೆ ನೀವಿಬ್ಬರೂ ವಾರಸುದಾರರಾಗಿರು-ವುದರಿಂದ ಅದನ್ನು ಬ್ಯಾಂಕಿನಿಂದ ಪುನಃ ಪಡೆಯಲೂ ನಿಮ್ಮ ರುಜುವು ಬೇಕು. ನಿಮ್ಮಿಬ್ಬರ ಸಹಿಯೂ ಆದಮೇಲೆ ಒಡವೆಯ ಪೆಟ್ಟಿಗೆಯನ್ನು ನಮ್ಮ ಕಕ್ಷಿಗಾರರ ಸಲಹೆಯಂತೆ ನಿಮಗೆ ಕಳುಹಿಸಿಕೊಡಲಾಗುವುದು. ”

ಕಾಗದವನ್ನೋದಿ ನನಗೆ ಬಹಳ ಸಂತೋಷವಾಯಿತು. ನಳಿನಿಗೆ ಇನ್ನೊಂದಿಷ್ಟು ಒಡವೆ! ಅವಳಿಗೂ ಸಂತೋಷವಾಗುವುದರಲ್ಲಿ ಆಶ್ಚರ್ಯ-ವಿಲ್ಲ. ಆದರೆ ದೊಡ್ಡದೋ ಸಣ್ಣದೋ? ಒಡವೆಗಳಿಗೆ ಎಷ್ಟು ಬೆಲೆಯಾಗ-ಬಹುದು? ಆದರೆ ಲಾಯರು ಇದಾವ ವಿಷಯವನ್ನೂ ಬರೆದಿರಲಿಲ್ಲ. ನಳಿ-ನಿಯ ಕಾಗದವನ್ನು ಕೊಡುವುದಕ್ಕಾಗಿ ಬಾಗಿಲ ವರೆಗೂ ಹೋದೆ. ಇನ್ನೇನು ಮಹಡಿಯನ್ನು ಹತ್ತಬೇಕೆನ್ನುವಷ್ಟರಲ್ಲಿ ನನ್ನ ಮನಸ್ಸು ಬದಲಾಯಿಸಿತು. ‘ ಈ ಪೆಟ್ಟಿಗೆಗಾಗಿ ಇಷ್ಟೇ ದಿನ ಕಾಯ್ದಂತೆ ಇನ್ನೊಂದೆರಡು ದಿನ ಕಾದರೆ ತಪ್ಪೆ? ಇವತ್ತೇ ಕಾಗದ ಅವಳಿಗೆ ಕೊಡಬೇಕಾಗಿಲ್ಲ........’ ಎಂದು ಪಾನೀ-ಯದ ಅಲಮಾರಿನಲ್ಲಿಟ್ಟು ಬೀಗಹಾಕಿದೆ. ಸದ್ಯ ಮಣಿ ಇಲ್ಲವಲ್ಲ, ಇದ್ದಿದ್ದರೆ ಇದಕ್ಕೂ ಫಜೀತಿ ಹತ್ತಿಸಿಬಿಡುತ್ತಿತ್ತು.

ಆಮೇಲೆ ನನ್ನ ನೋಡಲು ಜನ ಬಂದರು. ಸಾಯಂಕಾಲ ನಾನೇ ಹೊರಗೆ ಸುತ್ತಾಡಿ ಬರಲು ಹೊರಟೆ. ನಾನು ಎಷ್ಟೇ ಮನಸ್ಸನ್ನು ಆ ಕಾಗದ-ದಿಂದ ತಿರುಗಿಸಲು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಮನೆಗೆ ಬಂದ ಮೇಲೆ ಮಹಡಿಯ ಮೇಲೆ ಹೋಗಲಿಲ್ಲ. ನಳಿನಿ ಅಭ್ಯಾಸ ಮಾಡುತ್ತಿದ್ದಳು. ಗೆಜ್ಜೆಯ ಝುಣಝುಣ ಕೇಳುತ್ತಿತ್ತು. ಅಲಮಾರನ್ನು ತೆರೆದು ಕಾಗದವನ್ನು ಮತ್ತೆ ಓದಿದೆ. ಇದೇನು? ಅವನಿಗೆ ರೋಜಿಯಲ್ಲಿ ಈಗ ಇಷ್ಟೊಂದು ಆಸಕ್ತಿ? ಏನಿದೆಯೋ ಅವನ ಮನಸ್ಸಿನಲ್ಲಿ? ಏನಾದರೂ ಬಲೆ ಬೀಸುತ್ತಾ ಇದ್ದಾನೋ?

ಆದರೆ ಮಾರ್ಕೊ ಅಂತಹವನಲ್ಲ. ನನ್ನ ಋಣ ತೀರಿಸಿಬಿಡೋಣವೆಂದು ಪುಸ್ತಕದಲ್ಲಿ ನನ್ನ ಹೆಸರು ಹಾಕಿದ. ಹಾಗೆಯೇ ಅವಳ ಋಣ ತೀರಿಸಿ-ಬಿಡೋಣವೆಂದು ಆ ಪೆಟ್ಟಿಗೆಯನ್ನೂ ಹಿಂದಿರುಗಿಸಿಬಿಡುತ್ತಿರಬಹುದು. ರೋಜಿಯ ಒಡವೆ-ಪೆಟ್ಟಿಗೆಗೂ ತನಗೂ ಯಾವ ಸಂಬಂಧವೂ ಇಲ್ಲವೆಂದೇ ಅವನ ಅಭಿಪ್ರಾಯವಿರಬೇಕು. ನಿಜ ಅವನಿಗೂ ಅವಳಿಗೂ ಈಗ ಏನು ಸಂಬಂಧ? ಈಗ ಆ ಪೆಟ್ಟಿಗೆಯ ಜಾಗ ಎಲ್ಲಿ? ನನ್ನ ಹತ್ತಿರ. ಆದರೆ ಅದನ್ನ ಹೇಗೆ ತರಿಸೋದು? ರೋಜಿಯೇನಾದರೂ ಈ ಕಾಗದವನ್ನು ನೋಡಿ ಏನು ಮಾಡುತ್ತಾಳೋ ಯಾರಿಗೆ ಗೊತ್ತು? ಅವಳಿಗೆ ತಲೆ ಕೆಟ್ಟುಹೋಗುವುದೇ ನಿಜ. 'ನೋಡಿದರೆ ಎಂತಹ ಚಿನ್ನದಂತಹ ಮನುಷ್ಯರು' ಎಂದು ನನ್ನ ಜೊತೆ ಜಗಳವಾಡಿ ಅತ್ತು-ಕರೆದು ಗೋಳಾಡಿದರೆ? ಆ ಪತ್ರಿಕೆಯಲ್ಲಿ ಬರೀ ಫೋಟೋ ಬಂದಿದ್ದಕ್ಕೆ ಅಷ್ಟು ಕುಣಿದಾಡಿಬಿಟ್ಟಳು. ಆ ಪುಸ್ತಕದ ಪ್ರಕರಣ-ವಾದ ಮೇಲೆ ನಾನು ಬಹಳ ಹುಷಾರಾಗಿರುತ್ತಿದ್ದೆ. ಪುಸ್ತಕವನ್ನಂತೂ ಅವ-ಳಿಗೆ ತೋರಿಸಲೇ ಇಲ್ಲ. ಆದರೆ ಈ ಕಾಗದಕ್ಕೇನು ಮಾಡುವುದು? ಸರಿ ಆ ವಿಸ್ಕಿ ಸೀಸೆಗಳ ಮಧ್ಯೆ ಇದೂ ನಿದ್ದೆಮಾಡಲಿ ಅಂತ ಅಲ್ಲಿ ಹಾಕಿ ಬಂದು ಬಿಟ್ಟೆ.

ಊಟವಾಯಿತು.........ಊಟವಾದ ಮೇಲೆ ರೋಜಿ ಹಾಲಿನಲ್ಲಿ ನನ್ನ ಜೊತೆಗೇ ಕುಳಿತು ಅದೂ ಇದೂ ಮಾತಾಡುತ್ತ ಎಲೆ-ಅಡಿಕೆ ಹಾಕಿ-ಕೊಂಡಳು. ಸದ್ಯ.........ಪರಿಸ್ಥಿತಿ ಹತೋಟಿಗೆ ಬರುತ್ತಿದೆ ಎಂದುಕೊಂಡೆ. ಸ್ವಲ್ಪ ಹೊತ್ತಾದ ಮೇಲೆ ಅವಳು ಮಹಡಿಯ ಮೇಲೆ ಹೊರಟುಹೋದಳು. ನಾನು ನನ್ನ ಲೆಕ್ಕಾಚಾರದ ಪುಸ್ತಕಗಳನ್ನು ನೋಡುತ್ತಿದ್ದು ಮೇಲೆ ಹೋದೆ. ಮಾತಾಡಲೂ ಹೆದರಿಕೆ. ಅಪ್ಪಿತಪ್ಪಿ ಕಾಗದದ ವಿಷಯ ಹೇಳಿಬಿಟ್ಟರೆ?

"ನಾನು ಮಲಕೋತೀನಿ, ನೀನು ಓದಿದ ಮೇಲೆ ದೀಪ ಆರಿಸು-ತ್ತೀಯಾ?" ಎಂದು ಪಕ್ಕಕ್ಕೆ ತಿರುಗಿ ಮಲಗಿದೆ. ರೋಜಿ ಏನೋ ಉತ್ತರ ಕೊಟ್ಟಳು.

ನನ್ನ ತಲೆಯತುಂಬ ಪೆಟ್ಟಿಗೆಯ ಯೋಚನೆಯೇ ಯೋಚನೆ. ಯಾರ ಒಡವೆಗಳಿರಬಹುದು? ನನ್ನ ಹತ್ತಿರ ಒಂದು ಮಾತು ಹೇಳಬಾರದಿತ್ತೆ? ಅದನ್ನೆಲ್ಲ ಮಾರಿಬಿಟ್ಟು ದುಡ್ಡು ಮಾಡಿಕೊಂಡರೆ ಯಾವ ಆದಾಯ ತೆರಿಗೆಯ

ಅಧಿಕಾರಿಗೂ ಅದರ ಸುಳಿವು ತಿಳಿಯುವುದಿಲ್ಲ. ಬ್ಯಾಂಕಿನಲ್ಲಿ ಇಡಬೇಕಾದರೆ ಬಹಳ ಬೆಲೆ ಬಾಳೋದೇ ಇರಬೇಕು. ಆದರೆ ಮಾರ್ಕೊವಿನ ಬುದ್ಧಿ ಹೀಗೆಂದು ಹೇಳೋಕಾಗೋದಿಲ್ಲ. ಮೂರು ಕಾಸಿನ ಸಾಮಾನನ್ನು ಬ್ಯಾಂಕಿನಲ್ಲಿ ಭದ್ರಪಡಿಸೋ ಅಂಥ ಪ್ರಖ್ಯಾತಿ........ಹೌದು ಅಂತಹವನೇ. ಅಂ.... ತ....ಹ....ವ....ನೆ. ನನಗೆ ನಿದ್ದೆ ಬಂದಿತು.

ಮಧ್ಯರಾತ್ರಿಯ ಹೊತ್ತಿಗೆ ನನಗೆ ಎಚ್ಚರವಾಯಿತು. ಆ ಕಾಗದವನ್ನು ಕಳುಹಿಸುವುದಕ್ಕೆ ಏನಾದರೂ ಕಾಲಮಿತಿಯಿದೆಯೇ ಎಂದು ನೋಡಬೇಕೆನಿಸಿತು. ಕಾಗದವನ್ನು ಸುಮ್ಮನೆ ಹಾಗೆ ಇಟ್ಟುಬಿಟ್ಟು ಆಮೇಲೇನಾದರೂ ಕೋರ್ಟು-ಕಚೇರಿ ಹತ್ತಬೇಕಾದರೆ? ಕೆಳಗೆ ಹೋಗಿ ಈಗಲೇ ಕಾಗದವನ್ನು ಮತ್ತೆ ನೋಡಬೇಕೆಂದುಕೊಂಡೆ. ಆದರೆ ನಾನು ಎದ್ದುಬಿಟ್ಟರೆ ಅವಳೂ ಎದ್ದುಬಿಟ್ಟು ಪ್ರಶ್ನೆಗಳ ಸುರಿಮಳೆಗಳನ್ನೇ ಸುರಿಸಿಬಿಡುತ್ತಾಳೆ. ಒಂದುವೇಳೆ ನೋಡದೆಹೋದರೆ ನಾನಿಲ್ಲದಾಗ ಆ ಲಾಯರನಿಂದ ಇನ್ನೊಂದು ಪತ್ರ ಬಂದು ರೋಜಿ ಅದನ್ನು ನೋಡಿಬಿಟ್ಟರೆ? ಅದೇ ರಾತ್ರಿ ಅವಳು ಗಂಟು-ಮೂಟೆ ಕಟ್ಟೋದೆ ನಿಜ. ಅಂತೂ ಈ ಕಾಗದದಿಂದ ನನಗೆ ಸಮಾಧಾನವಿಲ್ಲ. ಆ ಮನುಷ್ಯ ಏನು ಮಾಡಿದರೂ ಹೀಗೆ ಇಲ್ಲದ ತಾಪತ್ರಯ. ಅದನ್ನು ಯೋಚಿಸುತ್ತಾ ಯೋಚಿಸುತ್ತಾ ಕೊನೆಗೆ ನನಗೆ ನನ್ನ ಜೇಬಿನಲ್ಲೇ ಸಿಡಿಮದ್ದು ಇದೆಯೇನೋ ಎನಿಸಿತು. ಮುಂಜಾನೆ ಐದು ಘಂಟೆಯ ವರೆಗೂ ಹಾಗೂ ಹೀಗೂ ಕಾಲ ತಳ್ಳಿ ಐದು ಘಂಟೆಗೆ ಪಾನೀಯದ ಕೋಣೆಗೆ ಹೋಗಿ ಕದವಿಕ್ಕಿಕೊಂಡೆ. ಮೂರು-ನಾಲ್ಕು ಸಲ ಓದಿದ ಮೇಲೆ 'ಮರು ಟಪಾಲಿಗೆ ಕಳುಹಿಸಿಕೊಡಿ' ಎಂದಿರುವುದು ಕಂಡುಬಂದಿತು. ಆಫೀಸುರೂಮಿಗೆ ಹೋಗಿ ಕಾಗದದ ಚೂರಿನ ಮೇಲೆ ರೋಜಿಯ ಹಸ್ತಾಕ್ಷರವನ್ನು ನಾಲ್ಕಾರು ಬಾರಿ ಬರೆದು ಅಭ್ಯಾಸ ಮಾಡಿಕೊಂಡೆ. ಆಮೇಲೆ ಲಾಯರು ಕಳಿಸಿದ್ದ ಅಪ್ಲಿಕೇಷನ್ ಫಾರಂ ಬಿಚ್ಚಿ ಅದರಲ್ಲಿ ಗುರುತು ಹಾಕಿದ್ದ ಕಡೆ 'ರೋಜಿ.... ನಳಿನಿ' ಎಂದು ಬರೆದು ಲಾಯರೇ ಕಳುಹಿಸಿದ ಕವರಿನಲ್ಲಿ ಹಾಕಿ ಅಂಟಿಸಿದೆ. ಏಳೂವರೆ ಘಂಟೆಗೆ ನಮ್ಮ ಎಕ್ಸ್‌ಟೆನ್‌ಷನ್ ಪೋಸ್ಟ್‌ಆಫೀಸು ತೆಗೆದಾಗ ಅಲ್ಲಿಗೆ ಹೋದವರಲ್ಲಿ ನಾನೇ ಮೊದಲು.

"ಇದೇನು ಇಷ್ಟು ಬೇಗ ನೀವೇ ಬಂದಿರಿ?" ಎಂದರು ಪೋಸ್ಟ್-

ಮಾಸ್ಟರು.

“ ನನ್ನ ಕ್ಲಾರ್ಕ ರಜೆ ತೆಗೆದುಕೊಂಡಿದ್ದಾನೆ. ಬೆಳಗ್ಗೆ ತಿರುಗಾಡಿ-ಕೊಂಡು ಬರೋಣವೆಂದು ಹೊರಟಿದ್ದೆ. ಈ ಕವರನ್ನು ರಿಜಿಸ್ಟರ್ ಮಾಡಿ-ಕೊಂಡುಬಿಡುತ್ತೀರಾ ? ” ಎಂದೆ.

ಒಡವೆಯ ಪೆಟ್ಟಿಗೆ ಯಾವಾಗ ಬರುತ್ತದೆಂದಾಗಲೀ, ಹೇಗೆ ಬರುತ್ತ-ದೆಂದಾಗಲೀ ನನಗೆ ತಿಳಿದಿರಲಿಲ್ಲ. ಆದರೆ ದಿನವೂ ಅದರ ದಾರಿ ನೋಡುವು-ದನ್ನು ಮಾತ್ರ ಬಿಡಲಿಲ್ಲ. ಕಾರ್ಯದರ್ಶಿ ಬಂದಕೂಡಲೇ ‘ ಪೋಸ್ಟಿನಲ್ಲಿ ಏನಾದರೂ ಪಾರ್ಸಲ್ ಬಂತೆ ? ’ ಎನ್ನುತ್ತಿದ್ದೆ.

ಇದೊಂದು ಅಭ್ಯಾಸವಾಗಿಬಿಟ್ಟಿತು. ಒಂದೆರಡು ದಿನಗಳಲ್ಲೇ ಬರ-ಬಹುದೆಂದುಕೊಂಡಿದ್ದೆ. ಆದರೆ ಹಾಗೆ ಬರಲಿಲ್ಲ. ನಾಲ್ಕಾರು ದಿನ ಊರು ಬಿಟ್ಟು ಬೇರೆ ಹೋಗಬೇಕಾಗಿತ್ತು. ಹೋಗುವುದಕ್ಕೆ ಮೊದಲು ಮಣಿಯನ್ನು ಕರೆದು—

“ ಒಂದು ಇನ್‌ಸೂರ್ಡ ಪಾರ್ಸಲ್ ಬರಬಹುದು. ನಾವು ಬರೋ-ತನಕ ಇಟ್ಟಿರು ಎಂದು ಅಂಚೆಯವನಿಗೆ ಹೇಳು ” ಎಂದು ಹೇಳಿದೆ.

“ ಆದರೆ ಬರೀ ರಿಜಿಸ್ಟರ್ಡ ಪಾರ್ಸಲ್ ಆದರೆ ನಾನು ಸಹಿ ಮಾಡ-ಬಹುದಲ್ಲವೇ ಸಾರ್ ? ”

“ ರಿಜಿಸ್ಟರ್ಡ ಪಾರ್ಸಲ್ ಅಲ್ಲ, ಇನ್‌ಷೂರ್ಡ ಪಾರ್ಸಲ್ ಬರುತ್ತೆ ಮಂಗಳವಾರ ತೆಗೆದುಕೊಂಡು ಬಾ ಅಂತ ಹೇಳು. ”

“ ಸರಿ ಸಾರ್ ” ಎಂದ ಮಣಿ.

ನಾವು ಮಂಗಳವಾರ ವಾಪಸಾದೆವು. ರೋಜಿ ಮಹಡಿಯ ಮೇಲೆ ಹೋಗುತ್ತಲೇ ನಾನು ಮಣಿಯನ್ನು ಕರೆದು ಕೇಳಿದೆ—

“ ಪಾರ್ಸಲ್ ಬಂತೆ ? ”

“ ಇಲ್ಲ ಸಾರ್. ಪೋಸ್ಟಮನ್ ಬಂದುಹೋದ. ಆದರೆ ಪಾರ್ಸಲ್ ಇಲ್ಲ. ”

“ ನಮಗೊಂದು ಪಾರ್ಸಲ್ ಬರಬೇಕೆಂದು ಅವನಿಗೆ ಹೇಳಿದೆಯಾ ? ”

“ ಹೇಳಿದೆ, ಆದರೆ ಪಾರ್ಸಲ್ ಬಂದಿಲ್ಲ ಅಂತ ಹೇಳಿದ. ”

ಮೂರನೇ ದಿನವೇ ಕಾಗದ ಕಳುಹಿಸಿದರೂ ಪಾರ್ಸಲ್ ಯಾಕೆ

ಬಂದಿಲ್ಲ? ರೋಜಿಯ ರುಜು ಬೇಕಾಗಿತ್ತು. ಮಾರ್ಕೊ ಈ ಬಲೆ ಬೀಸಿದ. ಆದರೆ ನನ್ನ ಲಾಯರ ಕಾಗದ ಇರೋವರೆಗೂ ಭಯವಿಲ್ಲ. ನಾನು ಅಲಮಾರಿನ ಬಾಗಿಲನ್ನು ತೆಗೆದು ಕಾಗದವನ್ನು ಮತ್ತೆ ಓದಿದೆ. ರೋಜಿಗೆ ಪೆಟ್ಟಿಯನ್ನು ಕಳುಹಿಸುತ್ತೇವೆಂದೇ ಬರೆದಿದ್ದಾರೆ. ಲಾಯರು ತಪ್ಪುಮಾಡೋಕೆ ಸಾಧ್ಯವೇ? ಅದೂ ಅಲ್ಲದೆ ಲಾಯರು ಆಫೀಸು ಕೆಲಸ ಮಾಡೋ ವೇಗ ನನಗೆ ಗೊತ್ತಿಲ್ಲವೆ? ಹೀಗಾಗಿರೋದರಿಂದಲೇ ನಮ್ಮ ದೇಶಕ್ಕೆ ಈ ಸ್ಥಿತಿ ಬಂದಿರೋದು. ಒಂದು ಕೆಲಸವಾಗೋದಕ್ಕೆ ಒಂದು ವರುಷ.

ಕಾಗದವನ್ನು ಅಲಮಾರಿನಲ್ಲೇ ಇಟ್ಟು ಬೀಗಹಾಕಿದೆ.

ಆ ದಿನ ಸಂಜೆಯ ಸುಮಾರು ಅರವತ್ತು ಮೈಲು ದೂರದ ಕಾಲೀಪೇಟೆಯಲ್ಲಿ ನಳಿನಿಯ ಕಾರ್ಯಕ್ರಮವಿತ್ತು. ಪಕ್ಕವಾದ್ಯದವರಿಗೆ ಒಂದು ವ್ಯಾನು, ನಮಗಾಗಿ ಒಂದು ಪ್ಲೈಮೌತ್ ಕಾರು ಕೊಡಲೊಪ್ಪಿದ್ದರಿಂದ ನಾವು ಆ ರಾತ್ರಿಯೇ ಮನೆಗೆ ಬಂದುಬಿಡಬಹುದಾಗಿತ್ತು. ಆ ಊರಿನಲ್ಲಿ ಒಂದು ಹೆರಿಗೆ ಆಸ್ಪತ್ರೆಯನ್ನು ಕಟ್ಟುವುದಕ್ಕಾಗಿ ಅವರು ಸಹಾಯಾರ್ಥ ನೃತ್ಯಪ್ರದರ್ಶನವನ್ನೇರ್ಪಡಿಸಿ ಏಳು ಸಾವಿರ ರೂಪಾಯಿ ಕೂಡಿಸಿದ್ದರು. ವ್ಯಾಪಾರಿಗಳು ಇನ್ನೂರು ರೂಪಾಯಿಯ ಟಿಕೆಟ್ ಕೊಂಡುಕೊಂಡಿದ್ದರಂತೆ. ಮುಂದಿನ ಸಾಲಿನಲ್ಲಿ ಕುಳಿತರೆ ನಳಿನಿ ಅವರನ್ನು ಗಮನಿಸಿ ಅವರಾರೆಂದು ವಿಚಾರಿಸುತ್ತಾಳೆಂದುಕೊಂಡರೇನೊ! ಬಡಪ್ರಾಣಿಗಳು.

"ನಾನು ನೃತ್ಯ ಮಾಡೋಕೆ ಶುರು ಮಾಡಿದರೆ ಎದುರಿಗೆ ಕಾಣೋದು ಬರೀ ಕತ್ತಲುಗವಿ........ಒಂದು ಮೊಳೆ ಏನಾದರೂ ಕಂಡರೂ ಬರೀ ಮರದ ತುಂಡುಗಳ ಹಾಗೆ ಕಾಣುತ್ತದೆ" ಎಂದು ರೋಜಿ ಹೇಳುತ್ತಿದ್ದುದು ಅವರಿಗೆ ಹೇಗೆ ತಿಳಿಯಬೇಕು?

ಈ ಕಾರ್ಯಕ್ರಮವಂತೂ ನಿಜವಾಗಿಯೂ ಒಂದು ವಿಶೇಷ ಕಾರ್ಯಕ್ರಮವೇ. ಅಧಿಕಾರಿಗಳಿಗೆಲ್ಲ ಅದರಲ್ಲಿ ಆಸಕ್ತಿಯಿತ್ತು. ಆ ಊರಿನಲ್ಲಿ ಒಂದು ಫಸ್ಟ್‌ಕ್ಲಾಸ್ ಹೆರಿಗೆ ಆಸ್ಪತ್ರೆಯನ್ನು ಕಟ್ಟಿಸಬೇಕೆಂಬ ಹಂಬಲದಿಂದ ಮಂತ್ರಿಮಹಾಶಯರನ್ನೇ ಹಿಡಿದಿದ್ದರು. ನಾನು ಹೆಚ್ಚಾಗಿ ಏನೂ ಕೇಳದೆ ನಮ್ಮ ಖರ್ಚಿಗಾಗಿ ಒಂದುಸಾವಿರ ರೂಪಾಯಿ ಮಾತ್ರ ಕೇಳಿದ್ದೆ. ನಳಿನಿಗೆ ಎಲ್ಲಾ

ಬಂದೇ. ರೈಲಿಗೆ ಬದಲಾಗಿ ಕಾರು ಆ ರಾತ್ರಿಯೇ ಮನೆಗೆ ಬರಬಹುದುದೆಂದು ಅವಳಿಗೆ ಇಷ್ಟವಾಯಿತು.

ಈ ಸಮಾರಂಭಕ್ಕಾಗಿಯೇ ಕಾಲೀಪೇಟೆಯ ಮೈದಾನದಲ್ಲಿ ಹಸರು-ವಾಣಿ ಚಪ್ಪರ ನಿರ್ಮಿತವಾಗಿತ್ತು. ಬಣ್ಣ-ಬಣ್ಣದ ವಿದ್ಯುದ್ದೀಪಗಳು, ತಳಿರು-ತೋರಣಗಳು ಮಂಟಪಕ್ಕೆ ಒಂದು ವಿಶೇಷ ಕಳೆಯನ್ನು ತಂದುಕೊಟ್ಟಿದ್ದವು. ಬೇರೆ ಯಾವುದನ್ನೂ ಗಮನಿಸದೆ ಹೂವಿನ ಹಾರವನ್ನು ಮೆಚ್ಚುತ್ತಿದ್ದ ನಳಿನಿ ಕೂಡ ರಂಗಮಂಟಪವನ್ನು ಪ್ರವೇಶಿಸಿ ನೋಡುತ್ತಾ—

" ಅಬ್ಬ, ಎಷ್ಟು ಸುಂದರವಾಗಿದೆ. ಇಲ್ಲಿ ನೃತ್ಯಮಾಡಿದರೆ ಸ್ವರ್ಗದಲ್ಲಿ ಮಾಡಿದ ಹಾಗಿರುತ್ತೆ" ಎಂದಳು. ಸಾವಿರಕ್ಕೂ ಮೇಲ್ಪಟ್ಟು ಜನ ಬಂದಿ-ದ್ದರು.

ಯಥಾಪ್ರಕಾರ ನನ್ನ ಕಣ್ಣುಸನ್ನೆಯಾದಕೂಡಲೇ ಪರದೆ ಮೇಲಕ್ಕೆ ಹೋಯಿತು. ನಳಿನಿ ಕೈಯಲ್ಲಿ ದೀಪ ಹಿಡಿದು ರಂಗದ ಮೇಲೆ ಬಂದಳು. ಅದು ವಿಘ್ನರಾಜ ಗಣಪತಿಯ ನರ್ತನ.

ಎಂಟುಘಂಟೆಯಾಗಿರಬಹುದು. ರೋಜಿ ತನ್ನ ಐದನೇ ನೃತ್ಯವನ್ನು ಮಾಡುತ್ತಿದ್ದಳು. ಹಾವಿನ ನೃತ್ಯ. ನನಗೆ ಅದನ್ನು ಎಷ್ಟು ಸಲ ನೋಡಿದರೂ ತೃಪ್ತಿಯಿರಲಿಲ್ಲ. ಪಕ್ಕವಾದ್ಯದವರ ವಾದ್ಯಗಳಲ್ಲಿ ಪುನ್ನಾಗವರಾಳಿ ಮಿಡಿಯು-ತ್ತಿತ್ತು. ನಳಿನಿ ರಂಗಮಂಟಪಕ್ಕೆ ತೇಲಿಬಂದಳು. ಹಾವು ಹೆಡೆಯಾಡುತ್ತಿತ್ತು. ರೋಜಿ ನೆಲದ ಮೇಲೆ ಬಾಗಿ ಕುಳಿತಳು. ಶಿವನ ಜಡೆಯಲ್ಲಿ, ಶಿವನ ಪತ್ನಿ ಪಾರ್ವತಿಯ ಹೆಗಲಲ್ಲಿ ರಾಜಿಸಬೇಕಾದ ನಾಗಸರ್ಪ ಹಾಡಿನ ನಾದಕ್ಕೆ ಮನ-ಸೋತು ಭೂಮಿಗಿಳಿದು ಬಂದಹಾಗಿತ್ತು. ನಾಗರನೃತ್ಯ, ನಾದದ ನವನೀತ ನೆರೆದವರನ್ನು ಸ್ವರ್ಗಕ್ಕೆ ಕರೆದೊಯ್ದಿದ್ದವು. ನಳಿನಿ ನಾಗಕನ್ಯೆಯಾಗಿದ್ದಳು.

ನಾಗನೃತ್ಯಕ್ಕೆ ನಲವತ್ತೈದು ನಿಮಿಷ ಹಿಡಿಸಿತ್ತು. ನಾನು ಅದೇ ಮೊದಲನೆಯ ಸಲ ಎನ್ನುವ ಹಾಗೆ ಬೆರಗಾಗಿ ನೃತ್ಯವನ್ನು ನೋಡುತ್ತಿದ್ದೆ. ರೋಜಿ ಸಾಮಾನ್ಯವಾಗಿ ಆ ನೃತ್ಯವನ್ನು ಮಾಡುತ್ತಿರಲಿಲ್ಲ. ಅಷ್ಟೊಂದು ಬಗ್ಗಿದರೆ ಆಮೇಲೆ ಒಂದು ವಾರ ನೆಟ್ಟಗೆ ನಿಲ್ಲೋದಕ್ಕೆ ಆಗುವುದಿಲ್ಲವೆಂದು ಬಿಡುತ್ತಿದ್ದಳು. ಅದೂ ಅಲ್ಲದೆ ಈಚೀಚೆಗೆ ಅವಳ ಈ ನೃತ್ಯಕ್ಕೆ ಬೇಕಾದ ಮನೋಭಾವವೂ ಅವಳಲ್ಲಿರಲಿಲ್ಲ. ಆದರೆ ಇಂದು ಅವಳನ್ನು ನೋಡು-

ತ್ತಿರುವಾಗ ಅಮ್ಮ ‘ ಅವಳು ಹಾವಿನ ಹುಡುಗಿ, ಹುಷಾರಾಗಿರು ’ ಎಂದದ್ದು ಜ್ಞಾಪಕಕ್ಕೆ ಬಂತು. ಅಮ್ಮ ಈಗ ರೋಜಿಯನ್ನು ನೋಡಿದರೆ ಈ ಮಾತು ಆಡುತ್ತಿದ್ದಳೇ? ಅಮ್ಮನಿಗೂ ನನಗೂ ಬೆಳೆದುಬಂದ ವಿರಸವನ್ನು ನೆನೆಸಿ-ಕೊಂಡು ಒಂದು ನಿಮಿಷ ಸಂಕಟವಾಯಿತು. ನಾನು ಆಗಾಗ ಒಂದಿಷ್ಟು ಹಣ ಕಳುಹಿಸುತ್ತಿದ್ದೆ. ಅಮ್ಮ ಸೇಟ್‌ಜಿಯಿಂದ ಯಾವಾಗ ಮನೆಯನ್ನು ಬಿಡಿಸಿಕೊಡುತ್ತೀಯೆಂದು ಕಾಗದ ಬರೆಯುತ್ತಿದ್ದಳು.

ಆದರೆ ಅಮ್ಮ ಈಗ ಅಣ್ಣನ ಮನೇಲಿ ಹಾಯಾಗಿರುವಳಲ್ಲ. ನನಗೂ ಅವಳಿಗೂ ಇಷ್ಟೇ ವಿಶ್ವಾಸ ಸಾಕು ಎಂದೂ ಅನಿಸಿತು. ನಾನು ನಳಿನಿಯ ನೃತ್ಯವನ್ನು ನೋಡುತ್ತಿರುವಾಗ ಅಮ್ಮನ ವಿಷಯವನ್ನು ಯೋಚಿಸುತ್ತಿದ್ದೆ. ಆಗ ವ್ಯವಸ್ಥಾಪಕರು ಒಬ್ಬರು ಸದ್ದುಮಾಡದೆ ನನ್ನ ಹತ್ತಿರ ಬಂದು—

“ ನಿಮ್ಮನ್ನ ಕರೀತಾರೆ ಸಾರ್. ”

“ ಯಾರು ? ”

“ ಡಿ. ಎಸ್. ಪಿ. ಸಾಹೇಬರು. ”

“ ಇದಾದ ಕೂಡಲೇ ಬರುತ್ತೇನೆ ಎಂದು ಹೇಳು. ”

ಅವನು ಹೊರಟುಹೋದ. ಡಿ. ಎಸ್. ಪಿ. ಸಾಹೇಬ ಅವನೂ ನನ್ನ ಇಸ್ಪೀಟು ಸ್ನೇಹಿತ.. ಎಲ್ಲಾ ಬಿಟ್ಟು ಈಗ ಯಾಕೆ ಬಂದ? ಎಲ್ಲಾ ಅಧಿಕಾರಿ-ಗಳು ಬಂದಿದ್ದರು. ಮಂತ್ರಿಗಳು ಮಾತ್ರ ಬಂದಿರಲಿಲ್ಲ. ಆದರೆ ಅವರಿಗಾಗಿ ಒಂದು ಸೋಫಾ ಕಾದಿಡಲ್ಪಟ್ಟಿತ್ತು. ಹೊರಗೆ ಜನರ ನೂಕುನುಗ್ಗಲನ್ನು ತಡೆಯಲು ಪೋಲೀಸಿನವರನ್ನು ಹಾಕಲಾಗಿತ್ತು. ನಳಿನಿಯ ಆ ನೃತ್ಯ ಮುಗಿದ ಕೂಡಲೇ ಪರದೆ ಇಳಿಯಿತು. ಚಪ್ಪಾಳೆಯ ಸದ್ದು ಮುಗಿಲಿಗೇರಿತ್ತು. ನಾನು ಎದ್ದು ಹೊರಗೆ ಹೋದೆ. ಡಿ. ಎಸ್. ಪಿ. ಸಾಧಾರಣ ಉಡುಪನ್ನು ಹಾಕಿಕೊಂಡು ಅಲ್ಲಿ ನಿಂತಿದ್ದುದು ಕಂಡಿತು.

“ ಹಲ್ಲೋ........ಏನು ಸ್ವಾಮಿ....ನೀವು ಬರುತ್ತೀರಂತ ಗೊತ್ತಾಗ-ಲಿಲ್ಲ. ಹೇಳಿದ್ದರೆ ನಮ್ಮ ಕಾರಿನಲ್ಲೇ ಬರಬಹುದಾಗಿತ್ತು.”

ಡಿ. ಎಸ್. ಪಿ. ನನ್ನ ಕೈಹಿಡಿದು ಪಕ್ಕಕ್ಕೆ ಕರೆದುಕೊಂಡು ಹೋದ. ಜನ ನಮ್ಮನ್ನೇ ನೋಡುತ್ತಿದ್ದುದರಿಂದ ಜನರಿಲ್ಲದ ಒಂದು ಜಾಗಕ್ಕೆ ಹೋದೆವು.

" ಏನು ಮಾಡೋದು ? ಕೆಟ್ಟ ಸುದ್ದಿ. ಆದರೆ ಹೇಳಲೇಬೇಕಾಗಿದೆ. ವಿಧಿಯಿಲ್ಲ........"

" ಏನು ಹೇಳಬಾರದೆ ? "

" ನಿಮ್ಮನ್ನ ಆರೆಸ್ಟ್ ಮಾಡಬೇಕೆಂದು ಹೆಡ್ ಕ್ವಾರ್ಟರ್ಸನಿಂದ ಅಪ್ಪಣೆ-ಯಾಗಿದೆ. "

ಡಿ. ಎಸ್. ಪಿ. ತಮಾಷೆ ಮಾಡುತ್ತಿರಬಹುದೆಂದುಕೊಂಡು ನಕ್ಕು-ಬಿಡಲು ಹೋದೆ, ಆದರೆ ಆವನು ಜೇಬಿನಿಂದ ಕಾಗದವನ್ನು ಹೊರತೆಗೆದ. ರೋಜಿಯ ಹೆಸರನ್ನು ನಾನೇ ರುಜು ಮಾಡಿ 'ಫೋರ್ಜರಿ' ಆಪಾದನೆಗೆ ಗುರಿಯಾಗಿದ್ದೆ. ಆಪಾದಿಸಿದ್ದವನು ಮಾರ್ಕೊ. ನಾನು ಏನು ಮಾಡಲೂ ತೋಚದೆ ನಿಂತೆ.

" ಆಕೆ....ಆಕೆಗೋಸ್ಕರ ನೀವು ಇತ್ತೀಚೆಗೆ ಯಾವುದಾದರೂ ಕಾಗ-ದಕ್ಕೆ ಸಹಿ ಹಾಕಿದ್ದೀರಾ ? "

" ಹೌದು, ಅವರಿಗೆ ಪುರುಸೊತ್ತಿರಲಿಲ್ಲ. ಆದರೆ ಅದು ಫೋರ್ಜರಿ ಹೇಗಾಯಿತು ? "

" ಅವರ ಹೆಸರನ್ನು ಮಾತ್ರ ಬರೆದಿರಾ ಅಥವಾ ಅವರಿಗಾಗಿ ಅಂತ ಬರೆದು ನಿಮ್ಮ ಹೆಸರು ಹಾಕಿದಿರಾ ? "

ನಾನು ಸುಮ್ಮನಿದ್ದೆ.

" ಅಂತೂ ತುಂಬ ಸೀರಿಯಸ್ ಆಗಿದೆ........ಏನು ಮಾಡೋದು ? ಹೆಚ್ಚು ಶಿಕ್ಷೆಯಾಗಲಾರದು. ಆದರೂ ಸದ್ಯಕ್ಕೆ ನಿಮ್ಮನ್ನು ಆರೆಸ್ಟ್ ಮಾಡಲೇ-ಬೇಕು. "

ನನಗೆ ಪರಿಸ್ಥಿತಿ ಕೈಮೀರಿದುದರ ಅರ್ಥವಾಯಿತು.

" ಈಗ ಏನೂ ಮಾಡಬೇಡಿ, ನಿಮಗೆ ಪುಣ್ಯ ಬರುತ್ತೆ. ಕಾರ್ಯಕ್ರಮ ಮುಗಿದುಹೋಗಲಿ ನಾವು ಮನೆಗೆ ಬಂದುಬಿಡುತ್ತೇವೆ. "

" ಹಾಗಾದರೆ ನಿಮ್ಮ ಜೊತೆ ನಾನೂ ಬರಬೇಕು. ನಿಮ್ಮ ಕಾರಿನಲ್ಲೇ ಬರುತ್ತೀನಿ. ವಾರಂಟ್ ಕೊಟ್ಟಮೇಲೆ ಬೇಕಾದರೆ ಜಾಮೀನಿನ ಮೇಲೆ ಬಿಡುಗಡೆ ಹೊಂದಬಹುದು ಆದರೆ ಈಗ ನೀವು ನನ್ನ ಜೊತೆ ಮ್ಯಾಜಿ-ಸ್ಟ್ರೇಟರ ಹತ್ತಿರ ಬರಬೇಕು. ಜಾಮೀನು ಕೊಡೋದು ಅವರು. ನನಗೆ

ಆ ಹಕ್ಕಿಲ್ಲ."

ನಾನು ಮತ್ತೆ ಮಂಟಪದೊಳಗೆ ಹೋಗಿ ಕುಳಿತೆ. ಯಾರೋ ನನಗೆ ಹೂವಿನಹಾರ ತಂದುಕೊಟ್ಟರು. ಯಾರೋ ಭಾಷಣ ಮಾಡಿದರು. ಎಪ್ಪತ್ತು-ಸಾವಿರ ರೂಪಾಯಿಯಷ್ಟು ಹಣ ಸಂಗ್ರಹ ಮಾಡಿದ್ದಕ್ಕೆ ನಳಿನಿಯನ್ನೂ ನನ್ನನ್ನೂ ಅಭಿನಂದಿಸಿದರು. ಜೊತೆಗೆ ನಾಟ್ಯಕಲೆಯ ಮೇಲೆ ಒಂದು ದೊಡ್ಡ ಭಾಷಣವನ್ನು ಯಾರೋ ಮಾಡಿದರು. ಅದು ಸಹ ನನಗೆ ಗೊತ್ತಿಲ್ಲ. ಅವರ ಭಾಷಣದ ಕೊನೆಯಲ್ಲಿ ಚಪ್ಪಾಳೆಯೇ ಚಪ್ಪಾಳೆ. ನಾನು ಅದಾವುದನ್ನೂ ಗಮನಿಸಲಿಲ್ಲ. ಭಾಷಣ ಮುಗಿದಕೂಡಲೇ ರಂಗದ ಒಳಗೆ ಹೋದೆ. ನಳಿನಿ ಬಟ್ಟೆ ಬದಲಾಯಿಸುತ್ತಿದ್ದಳು. ಅವಳ ಹಸ್ತಾಕ್ಷರಕ್ಕಾಗಿ ನೂರಾರು ಜನ ಹುಡುಗಿಯರು ಕಾದುನಿಂತಿದ್ದರು.

"ನಳಿನಿ, ಹೊರಡು ಬೇಗ ಹೋಗಬೇಕು" ಎಂದೆ.

ಹಿಂತಿರುಗಿ ಡಿ. ಎಸ್. ಪಿ. ಯ ಬಳಿಗೆ ಹೋದಾಗ ಹತ್ತಾರು ಜನ ಪ್ರಮುಖರು ಬಂದು ನನ್ನ ಕೈ ಕುಲುಕಿದರು. ನಳಿನಿಯ ನಾಟ್ಯವನ್ನು ಹೊಗಳಿದರು.

"ಈಕೆಯೆಲ್ಲಿ, ಬೇರೆಯವರೆಲ್ಲಿ ಸ್ವಾಮಿ?"

"ನಾನು ಸುಮಾರು ಐವತ್ತು ವರ್ಷದಿಂದ ಈ ಡ್ಯಾನ್ಸ ಪ್ರೋಗ್ರಾಂ-ಗಳಿಗೆ ಹೋಗುತ್ತಿದ್ದೇನೆ. ಆದರೆ ಇವತ್ತಿನಂತಹದು."

"ನೋಡಿ, ನಮ್ಮ ಹೆರಿಗೆ ಆಸ್ಪತ್ರೆಯಂತಹ ಆಸ್ಪತ್ರೆ ಎಲ್ಲೂ ಇರ-ಲಾರದು. ಅಷ್ಟು ಭರ್ಜರಿಯಾಗಿರುತ್ತೆ. ಒಂದು ವಾರ್ಡಿಗೆ 'ಶ್ರೀಮತಿ ನಳಿನಿ' ಅಂತಲೇ ಹೆಸರಿಡಬೇಕೆಂದಿದ್ದೇವೆ. ಅವರ ಫೋಟೋ ಒಂದು ಕಳಿಸಿ-ಕೊಟ್ಟರೆ........"

"ಯಾರಿಗೆ ಗೊತ್ತು ಸ್ವಾಮಿ? ಈ ಆಸ್ಪತ್ರೆಯಲ್ಲಿ ನಳಿನಿಯವರ ಶಿಷ್ಯ-ರಾಗೋವಂತ ಮಗು ಹುಟ್ಟಬಹುದು........ಅಂತೂ ನಿಮ್ಮ ಪತ್ನಿ ಸಾಕ್ಷಾತ್ ನೃತ್ಯದೇವಿ........" ಇತ್ಯಾದಿ ಇತ್ಯಾದಿ.

ನನಗೆ ಅವರು ಏನು ಹೇಳಿದರೂ ಅದೊಂದರ ಮೇಲೂ ಗಮನವಿರ-ಲಿಲ್ಲ. ನಳಿನಿ ಬರುವ ವರೆಗೂ ಅವರ ಹತ್ತಿರ ಹೂಂಗುಟ್ಟುತ್ತಿದ್ದೆ. ನಳಿನಿ-ಯನ್ನು ಹತ್ತಿರದಲ್ಲೇ ನೋಡುವ ನಿರೀಕ್ಷೆಯಲ್ಲಿ ಜನ ನನ್ನ ಹತ್ತಿರ ಗುಂಪು-

ಕೊಡುತ್ತಿದ್ದ ವಿಷಯ ನಮಗೆ ತಿಳಿಯದೆ? ಕೊನೆಗೆ ನಳಿನಿ ಬಂದಳು. ಕೈಯಲ್ಲಿ ಹಾರ. ನನ್ನ ಹಾರವನ್ನೂ ಅವಳಿಗೆ ಕೊಟ್ಟೆ. ಡಿ. ಎಸ್. ಪಿ. ನಮಗೆ ದಾರಿಮಾಡಿಕೊಟ್ಟು ಕಾರಿನ ಬಳಿಗೆ ಕರೆದೊಯ್ದ. ಜನ ನೊಣದ ಹಾಗೆ ಮುತ್ತಿದ್ದರು. 'ಹತ್ತು ಹತ್ತು' ಎಂದು ನಳಿನಿಯನ್ನು ಆತುರಪಡಿಸಿ ನಾನೂ ಅವಳ ಪಕ್ಕದಲ್ಲಿ ಕುಳಿತೆ. ಹತ್ತಿರದಲ್ಲಿದ್ದ ಮರಕ್ಕೆ ತೂಗುಹಾಕಿದ್ದ ದೀಪದ ಬೆಳಕು ಅವಳ ಮುಖವನ್ನು ಬೆಳ್ಳಗೆ ಮಾಡಿತ್ತು. ದಾರಿಯೆಲ್ಲ ಧೂಳುಮಯ; ಕಾರು, ಬಸ್ಸು, ಸೈಕಲ್ಲು, ಜಟಕಾಗಳ ಗಡಿಬಿಡಿಯೋ ಗಡಿಬಿಡಿ. ನಾನು ಮುಂದೆ, ತಾನು ಮುಂದೆ ಎಂದು ಪಂಥವನ್ನೇ ಹೂಡಿದ ಹಾಗಿತ್ತು. ಕೆಲವು ಪೋಲೀಸಿನವರು ಕಾರಿನ ಹತ್ತಿರ ನಿಂತು ತಮ್ಮ ಸಾಹೇಬರಿಗೆ ಮಿಲಿಟರಿ ಸೆಲ್ಯೂಟ್ ಹೊಡೆದರು. ಕಾರು ಹೊರಟಿತು. ಡ್ರೈವ್ಹರನ ಪಕ್ಕ-ದಲ್ಲಿ ಆತ ಕುಳಿತಿದ್ದ.

"ನಮ್ಮ ಸ್ನೇಹಿತರು..........ಡಿ. ಎಸ್. ಪಿ. ಸಾಹೇಬರು. ನಮ್ಮ ಜೊತೆ ಬರುತ್ತಾರೆ" ಎಂದು ನಳಿನಿಗೆ ಹೇಳಿದೆ.

ಊರು ಸೇರಲು ಎರಡು ಘಂಟೆ ಬೇಕಾಗಿತ್ತು. ನಳಿನಿ ಸಂಜೆಯ ಕಾರ್ಯಕ್ರಮದ ಬಗ್ಗೆ ಹೇಳಿದಳು. ನಾನು ಜನರ ಪ್ರಶಂಸೆಯ ನುಡಿಗಳಲ್ಲಿ ಜ್ಞಾಪಕವಿದ್ದಷ್ಟನ್ನು ಹೇಳಿದೆ. ಅನಂತರ ಮೌನ. ಅವಳಿಗೂ ಮನೆ ಬಂದರೆ ಸಾಕು ಎನಿಸಿತ್ತು. ನನಗಂತೂ ಯಾವುದರ ಪರಿವೆಯೂ ಇರಲಿಲ್ಲ.

ಮನೆ ಸೇರುತ್ತಲೇ ನಳಿನಿ ಸುಪರಿಂಟೆಂಡೆಟರ ಕಡೆ ತಿರುಗಿ ಮುಗುಳು-ನಕ್ಕು ಮನೆಯೊಳಗೆ ಮಾಯವಾದಳು. ಡಿ. ಎಸ್. ಪಿ. ಅವಳು ಹೋದ ಕೂಡಲೇ—

"ಮಿ. ರಾಜು, ಇನ್ನು ಬನ್ನಿ. ನಮ್ಮ ಜೀಪಿನಲ್ಲಿ ಹೋಗೋಣ" ಎಂದ.

"ಇರಿ ಸ್ವಾಮಿ, ಸ್ವಲ್ಪ ಇರಿ ಅವಳಿಗೆ ಹೇಳಿಬರಬೇಕು."

"ಸರಿ, ಹಾಗಾದರೆ ಬೇಗ ಬನ್ನಿ. ಇಲ್ಲದೆಹೋದರೆ ನಾವು ತೊಂದರೆಗೆ ಸಿಕ್ಕಿಕೊಳ್ಳಬೇಕಾಗುತ್ತೆ."

ನಾನು ಮಹಡಿಯ ಮೇಲೆ ಹೋದೆ. ಅವನೂ ನನ್ನ ಹಿಂದೆ ಬಂದ. ನಾನು ರೂಮಿನೊಳಗೆ ಹೋದೆ. ಅವನು ಅಲ್ಲೇ ನಿಲ್ಲಬೇಕಾಯಿತು. ನಾನು

ಹೇಳಿದಾಗ ರೋಜಿ ಹೇಗೆ ಅವಾಕ್ಕಾಗಿ ನಿಂತಳು ಎಂಬುದು ಈಗಲೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಅವಳು ಅತ್ತು ಗೋಳಾಡುತ್ತಾಳೇನೋ ಎಂದು-ಕೊಂಡೆ. ಸಣ್ಣ-ಸಣ್ಣ ವಿಷಯಕ್ಕೆಲ್ಲಾ ಅಳುತ್ತಿದ್ದ ನಳಿನಿ ಇಂದು ಅಳಲಿಲ್ಲ.

"ನೀವು ಮಾಡುತ್ತಿರೋದು ಸರಿಯಾಗಿಲ್ಲವೆಂದು ನನಗೆ ಅನ್ನಿಸು-ತ್ತಲೇ ಇತ್ತು. ಏನು ಮಾಡೋದು? ಎಲ್ಲಾ ನಮ್ಮ ಕರ್ಮ. ಅನುಭವಿಸ-ಬೇಕು" ಎಂದು ಹೊರಗೆ ಬಂದು ಸುಪರಿಂಟೆಂಡೆಂಟರನ್ನು ಕೇಳಿದಳು:

"ಏನು ಸಾರ್, ದಾರಿಯೇ ಇಲ್ಲವೆ?"

"ಈಗ ಏನೂ ಹೇಳೋಕೆ ಸಾಧ್ಯವಿಲ್ಲ ತಾಯಿ. ಈ ವಾರಂಟಿಗೆ ಜಾಮೀನೂ ಸಿಗೋಹಾಗಿಲ್ಲ. ಆದರೆ ನಾಳೆ ಬೇಕಾದರೆ ಜಾಮೀನಿಗೆ ಒಂದು ಅರ್ಜಿ ಹಾಕಿಕೊಳ್ಳಬಹುದು. ಆದರೆ ನಾಳೆ ಮ್ಯಾಜಿಸ್ಟ್ರೇಟರು ಹೇಳೋತನಕ ಏನೂ ಸಾಧ್ಯವಿಲ್ಲ."

ಅವನು ಆಗ ನನ್ನ ಗೆಳೆಯನಾಗಿರಲಿಲ್ಲ. ಬದಲಾಗಿ ನ್ಯಾಯಶಾಸ್ತ್ರ ಪಂಡಿತನಾಗಿದ್ದ.

## 10

ಜೈಲಿನಲ್ಲಿ ಕೆಳತರಗತಿಯ ಕೈದಿಗಳ ಜೊತೆ ನಾನೂ ಒಂದೆರಡು ದಿನ-ಗಳನ್ನು ಕಳೆಯಬೇಕಾಯಿತು. ಸೆಂಟ್ರಲ್ ಸ್ಟೇಷನ್‌ನನ್ನು ತಲುಪಿದ ನಿಮಿ-ಷವೇ ನನಗೂ ಸುಪರಿಂಟೆಂಡೆಂಟನಿಗೂ ಇದ್ದ ಗೆಳೆತನ ಕಡಿದುಹೋಯಿತು.

ಪೋಲೀಸು ಲಾಕಪ್ಪಿನಲ್ಲಿದ್ದ ನನ್ನನ್ನು ನೋಡಲು ಬಂದ ರೋಜಿ ಅತ್ತಳು. ನಾನು ಆ ಕತ್ತಲುಗವಿಯ ಮೂಲೆಯಲ್ಲಿ ಎತ್ತಲೋ ನೋಡುತ್ತ ಕುಳಿತಿದ್ದೆ. ಸ್ವಲ್ಪ ಹೊತ್ತಾದ ಮೇಲೆ ಮನಸ್ಸನ್ನು ಸ್ಥಿಮಿತಕ್ಕೆ ತಂದುಕೊಂಡು-

"ರೋಜಿ, ಬ್ಯಾಂಕಿಗೆ ಹೋಗಿ ಮ್ಯಾನೇಜರನ್ನು ನೋಡಿ ಬರು-ತ್ತೀಯಾ?" ಎಂದೆ.

"ಅಯ್ಯೋ ಅಷ್ಟೊಂದು ದುಡ್ಡಿತ್ತಲ್ಲಾ, ಎಲ್ಲಾ ಎಲ್ಲಿ ಹೋಯಿತು?"

ಮೂರು ದಿನಗಳಾದ ಮೇಲೆ ಮನೆಗೆ ವಾಪಸು ಹೋದೆ. ಆದರೆ ಜೀವನ ಹಿಂದಿನಂತಿರಲಿಲ್ಲ. ಮಣಿ ತನ್ನ ರೂಮಿನಲ್ಲಿ ತಲೆ ಬಗ್ಗಿಸಿಕೊಂಡು ಕೆಲಸ ಮಾಡುತ್ತಿದ್ದ. ಅವನಿಗೆ ಕೆಲಸವೇ ಇರಲಿಲ್ಲ. ಕಾಗದಗಳೂ ಅಷ್ಟು ಬರುತ್ತಿರಲಿಲ್ಲ. ಮನೆಯಲ್ಲಿ ಮಸಣದ ಮೌನ. ನಳಿನಿಯ ಕಾಲಂದುಗೆಯ ಝುಣ-ಝುಣವಿಲ್ಲ. ಅತಿಥಿ–ಅಭ್ಯಾಗತರ ಆಗಮನವಿಲ್ಲ. ಜಾಮೀನಿಗೆ ೧೦೦೦೦ ರೂಪಾಯಿ ನಳಿನಿ ಕೊಡಬೇಕಾಗಿತ್ತು. ನಾನೂ ಬುದ್ಧಿವಂತನ ಹಾಗೆ ಜೀವನ ಸಾಗಿಸಿದ್ದರೆ ೧೦೦೦೦ ಹೆಚ್ಚಿನ ಮಾತಾಗಿರಲಿಲ್ಲ. ಆದರೆ ನನ್ನ ದುಂದುಗಾರಿಕೆಯಲ್ಲಿ ಬಂದ ಹಣ ನೀರಿನ ಹಾಗೆ ಖರ್ಚಾಗಿತ್ತು. ಮುಂದಿನ ತಿಂಗಳಿನ ಕಾರ್ಯಕ್ರಮಕ್ಕಾಗಿ ತೆಗೆದುಕೊಂಡಿದ್ದ ಮುಂಗಡ ಹಣ ಕೂಡ ಖರ್ಚಾಗಿ ಹೋಗಿತ್ತು.

"ರೋಜಿ, ನೀನು ಒಂದಿಷ್ಟು ಕಾರ್ಯಕ್ರಮಗಳಲ್ಲಿ ಯಾಕೆ ಭಾಗ-ವಹಿಸಬಾರದು? ಬರೋ ಹಣ ಬಂದುಬಿಡುತ್ತೆ."

ನಾವು ಊಟಮಾಡುತ್ತ ಕುಳಿತಿದ್ದೆವು. ಊಟದ ಸಮಯದಲ್ಲಿ ಮಾತ್ರ ಮಾತಾಡುವುದು ಸಾಧ್ಯ. ಇಲ್ಲದೆಹೋದರೆ ನಾನು ಕೆಳಗೆ, ಅವಳು ಮಹ

ಡಿಯ ಮೇಲೆ. ಮಲಗುವುದಕ್ಕೂ ಮೇಲೆ ಹೋಗುತ್ತಿರಲಿಲ್ಲ.

ನಾನು ಕೇಳಿದ ಪ್ರಶ್ನೆಗೆ ನಳಿನಿ ಉತ್ತರ ಕೊಡಲಿಲ್ಲ. ನಾನು ಮತ್ತೆ ಕೇಳಿದೆ.

"ಅಡುಗೆಯವನ ಮುಂದೆಯೇ ಚರ್ಚೆ ಮಾಡಬೇಕೇನು? ಆಮೇಲಾಗಬಹುದಲ್ಲವೇ?" ಎಂದಳು. ನಾನು ಸುಮ್ಮನಾದೆ.

ಈಗ ನಾನು ನನ್ನ ಮನೆಯಲ್ಲಿ ಸ್ವಾತಂತ್ರ್ಯವಿದ್ದ ಕೈದಿಯಾಗಿದ್ದೆ. ಅವಳೇ ಯಜಮಾನಿ. ಈಚೀಚೆಗೆ ಹೆಚ್ಚು ಮಾತೇ ಇಲ್ಲ. ಇದ್ದಬಿದ್ದ ಹಣವನ್ನೆಲ್ಲ ಕೂಡಿಹಾಕಿ ನನ್ನನ್ನು ಉಳಿಸಬೇಕಾಗಿತ್ತು. ನಮ್ಮಲ್ಲಿ ಈಗ ಮೊದಲಿನ ಸಲಿಗೆಯಿರಲಿಲ್ಲ. ಊಟವಾದ ಮೇಲೆ ರೋಜಿ ಹಾಲಿಗೆ ಬಂದು ಕುಳಿತಳು. ನಮ್ಮಿಬ್ಬರ ಮಧ್ಯೆ ತಾಂಬೂಲದ ತಟ್ಟೆ ಇತ್ತು. ನಾನು ಅದನ್ನು ಪಕ್ಕಕ್ಕೆ ತಳ್ಳುವ ಸಾಹಸ ಮಾಡಿ ಪಕ್ಕಕ್ಕೆ ಹೋಗಿ ಕುಳಿತೆ. ರಾಗ-ರಂಜಿತವಾಗಿತ್ತು ಅವಳ ತುಟಿ.

"ಏನೋ ಹೇಳಿದಿರಲ್ಲ........?" ನಾನು ಇನ್ನೂ ಬಾಯಿಬಿಡುವುದಕ್ಕೆ ಮೊದಲೇ—

"ಜವಾನರ ಮುಂದೆ ಅದೂ ಇದೂ ಮಾತಾಡಬೇಡಿ. ಈಗಾಗಲೇ ಅವರ ತಲೆಹರಟೆ ಹೆಚ್ಚಾಗಿಬಿಟ್ಟಿದೆ. ಮುಂದಿನ ತಿಂಗಳು ಒಬ್ಬನನ್ನು ಕಳುಹಿಸಿಬಿಡುತ್ತೇನೆ."

"ಇರು, ಇರು. ಅಷ್ಟು ಅವಾಂತರ ಬೇಡ."

"ಇನ್ನೂ ಯಾತಕ್ಕೆ ಇರಬೇಕು ಹೇಳಿ........?"

ಅವಳ ಕಣ್ಣಲ್ಲಿ ನೀರು ತುಂಬಿತು. ನಾನು ಏನೂ ಮಾಡಲಾರದೆ ಕುಳಿತೆ. ಎಷ್ಟಾದರೂ ಅವಳು ಯಜಮಾನಿ. ಅವಳಿಗೆ ಅಳಬೇಕೆನಿಸಿದರೆ ಅಳುತ್ತಾಳೆ. ಬೇಡವೆಂದು ಹೇಳಲು ನಾನು ಯಾರು? ಬೇಕಾದ ಆತ್ಮಸ್ಥೈರ್ಯವನ್ನು ತಂದುಕೊಳ್ಳಲು ಅವಳಿಗೆ ಶಕ್ತಿ ಇದೆ. ಆದರೆ ನನಗೆ ಇನ್ನೂ ಈಗ ನನ್ನನ್ನು ಕಂಡು ಅಯ್ಯೋ ಪಾಪ ಎನ್ನಬೇಕು. ಅದೂ ಅಲ್ಲದೆ ಅವಳು ಯಾಕೆ ಅಳಬೇಕು?

ಜೈಲಿಗೆ ಹೋಗಬೇಕಾಗಿರಲಿಲ್ಲ. ಅಲ್ಲಿ ಇಲ್ಲಿ ಅಲೆದು ಅವಳೂ ನೃತ್ಯ-ನಾಚಿಗಾಗಿ ಜನರನ್ನು ಬೇಡಿ ಕಾಡಿದವಳಾಗಿರಲಿಲ್ಲ. ಅರ್ಥ ಮರೆತು-

ಹೋಗಿದ್ದ ಮಾರ್ಕೊವಿನ ಬಲೆಗೆ ಮೊದಲೇ ಸಿಕ್ಕಿರಲಿಲ್ಲ........ಇನ್ನು ಅಳು-ವುದು ಯಾತಕ್ಕಾಗಿ? ನನಗೆ ಅವಳ ಚಿಂತೆಯ ಅರಿವು ಮೂಡಲೇ ಇಲ್ಲ. ನನಗೆ ನನ್ನದೇ ಚಿಂತೆ. ಆದರೆ ಅವಳ ಚಿಂತೆ? ಎಂತಹ ವಜ್ರಾಘಾತ ಮನಸ್ಸಿಗೆ!

ಎಷ್ಟು ಕಷ್ಟಪಟ್ಟು ದುಡಿದರೂ ಆಪತ್ಕಾಲಕ್ಕೆ ಮೂರು ಕಾಸೂ ಇಲ್ಲ-ದಂತಹ ಪರಿಸ್ಥಿತಿ. ವಿವೇಚನೆಯಿಲ್ಲದೆ ಕೆಲಸ ಮಾಡುವ ನನ್ನಂತಹವನ ಸಹವಾಸ ಪ್ರಭಾವ. ದುಂದುಗಾರಿಕೆಯ ಫಲ. ಇದೆಲ್ಲ ಒಂದೊಂದಾಗಿ ನೆನಪು ಬಂದರೂ ಅವನ್ನೆಲ್ಲ ತಳ್ಳಿಬಿಟ್ಟು ನನ್ನ ಸ್ಥಿತಿಗಾಗಿ ನಾನೇ ಮರುಗಿದೆ. ಅಷ್ಟು ಹೊತ್ತಿಗೆ ಅವಳು ಅತ್ತು ಅತ್ತು ಕಣ್ಣೊರೆಸಿಕೊಂಡಿದ್ದಳು.

"ಊಟ ಮಾಡೋವಾಗ ಏನೋ ಹೇಳಿದಿರಲ್ಲ?"

"ಹೇಳೋದಕ್ಕೆ ಪ್ರಾರಂಭ ಮಾಡಿದ್ದೆ. ಆದರೆ ನೀನು ಬಿಡಲಿಲ್ಲ. ಹೋಗಲಿ ಏನೂ ಅಂದರೆ........ನಿನ್ನ ಕಾರ್ಯಕ್ರಮ ನೀನೇ ಯಾಕೆ ಮಾಡಿ ಮುಗಿಸಬಾರದು ಅಂತ. ಅದನ್ನು ನಿಲ್ಲಿಸೋದು ಬೇಡ. ಏಕೆಂದರೆ ಮುಂಗಡ ಹಣ ಪಡೆದಿದ್ದೇವೆ."

"ಯಾಕೆ ನಿಲ್ಲಿಸಬಾರದು?"

"ಯಾಕೆ ಅಂದರೆ ಈಗ ಬರೀ ಮುಂಗಡ ಹಣ ಸಾಕಾಗೋದಿಲ್ಲ. ಕಾರ್ಯಕ್ರಮ ಮುಗಿಸದ ಹೊರತು ಪೂರ್ತಿ ಹಣ ಬರೋದಿಲ್ಲ."

"ಇಷ್ಟು ದಿನ ಬಂದ ದುಡ್ಡೆಲ್ಲ ಎಲ್ಲಿ?"

"ಎಲ್ಲೋ, ಅದು ನಿನಗೇ ಗೊತ್ತಿರಬೇಕು. ಬ್ಯಾಂಕಿನ ಅಕೌಂಟ್ ನಿನ್ನ ಹೆಸರಿನಲ್ಲಿತ್ತು." ಯಾಕೆ ಹಾಗೆ ಮಾತಾಡಿದೆನೋ ತಿಳಿಯದು. ಅಂತೂ ನಾನು ಅವಳಿಗಾಗಿ ಮಾಡಿದ ತ್ಯಾಗಕ್ಕೆ ಅವಳು ಸಾಕಷ್ಟು ಪ್ರತಿಫಲವನ್ನು ಕೊಟ್ಟಿಲ್ಲವೆನಿಸಿತು.

"ಆ ಕಾರ್ಯಕ್ರಮಗಳು ಯಾವವು ಅಂತ ಹೇಳಿ. ಅವರ ಮುಂಗಡ ಹಣ ಬೇಕಾದರೆ ವಾಪಸು ಮಾಡಿಬಿಡುತ್ತೇನೆ."

ಆದರೆ ವಾಪಸುಮಾಡಲು ಹಣವಿತ್ತೇ?

"ಯಾಕೆ ಮಾಡಬೇಕು? ಕಾರ್ಯಕ್ರಮ ಮಾಡಿ ಮುಗಿಸುವುದಾಗೋ-ಲ್ಲವೇ?"

“ ಹಣ ಒಂದೇ ಮುಖ್ಯವೇನು ? ಅವರೆದುರಿಗೆ ಮತ್ತೆ ನಾನು ಹೇಗೆ ಮುಖವೆತ್ತಲಿ ? ”

“ ಅದಕ್ಕೇನಂತೆ, ಅರೆಸ್ಟ್ ಆಗಿರೋನು ನಾನು. ನೀನಲ್ಲ. ನೀನು ಎಂದಿನ ಹಾಗೆ ಇರೋದಕ್ಕಾಗುವುದಿಲ್ಲವೇ ? ”

“ ಇಲ್ಲ, ಆಗೋದಿಲ್ಲ. ”

“ ಹಾಗಾದರೆ ಮುಂದೇನು ಮಾಡುತ್ತೀ ? ”

“ ಅವರ ಹತ್ತಿರಕ್ಕೆ ಹೊರಟುಹೋಗುತ್ತೇನೋ ಏನೊ ”

“ಅವನು ನಿನ್ನನ್ನು ಮತ್ತೆ ಕರೆದುಕೊಳ್ಳುತ್ತಾನೆಎಂದುಕೊಂಡಿದಿಯಾ?”

“ ನೃತ್ಯ ಮಾಡೋದನ್ನು ಬಿಟ್ಟರೆ ಸರಿ. ”

ನಾನು ಹುಚ್ಚು ನಗೆ ನಕ್ಕೆ.

“ ಯಾಕೆ ನಗುತ್ತೀರಿ ? ”

“ ಬರೀ ನೃತ್ಯದ ಪ್ರಶ್ನೆಯಾಗಿದ್ದರೆ ಆಗ ಬೇರೆ ಕತೆಯಾಗುತ್ತಿತ್ತು. ”

ನಾನು ಯಾಕಾದರೂ ಹಾಗೆ ಹೇಳಿದೆನೋ? ಅದರಿಂದ ಅವಳ ಮನಸ್ಸು ತುಂಬ ನೊಂದಿತು.

“ ಹೌದು, ಇವತ್ತು ಈ ಮಾತಾಡುತ್ತೀರಿ. ಆಡೋಕೆ ನಿಮಗೆ ಹಕ್ಕಿದೆ. ನಿಜ; ಅವರು ನನ್ನನ್ನು ಅವರ ಮನೆಯ ಹೊಸತಿಲಿನೊಳಗೂ ಸೇರಿಸ-ಲಾರರು. ಆದರೆ ಇದಕ್ಕಿಂತ ಅವರ ಮನೆಯ ಬಾಗಿಲಿನಲ್ಲಿ ಸಾಯೋದೇ ಉತ್ತಮ........ಈ ಸಮಸ್ಯೆಗಳಿಗೆಲ್ಲ ಇರೋದು ಒಂದೇ ಪರಿಹಾರ. ನಮ್ಮಿಬ್ಬ-ರಿಗೂ ಅಷ್ಟೆ. ನಿದ್ದೆ ಬರೋ ಮಾತ್ರೆಗಳನ್ನು ನುಂಗಿಬಿಡೋದು........ರಾತ್ರೆ ಮಾತಾಡುತ್ತ ಮಲಗೋಕೆ ಮೊದಲು ಒಂದು ಲೋಟ ಹಾಲಿನಲ್ಲಿ ಹಾಕಿ ಕುಡಿದುಬಿಟ್ಟರೆ ಮಾರನೆಯ ದಿನ ಬೆಳಗ್ಗೆ ಏಳೋದು ಯಮಪುರಿಯಲ್ಲೇ. ಆದರೆ ನಾನೇನೋ ಮುಂದೆ ಹೋಗುತ್ತೇನೆ. ನೀವು ಕುಡೀದೆ ಇದ್ದುಬಿಟ್ಟರೂ ಬಿಟ್ಟರಿ. ”

“ ಹೌದು, ನಿನ್ನ ಹೆಣ ಸಾಗಿಸೋಕೆ ಒಬ್ಬರು ಬೇಕಲ್ಲ........ಇದಕ್ಕಿಂತ ಬೇರೆ ಮಾತು ಬೇಕೆ? ” ಆದರೂ ನಾನು ಬಿಡಲಿಲ್ಲ.

“ ಇಂತಹ ಕೆಟ್ಟ ಯೋಚನೆ ಮಾಡುವುದರ ಬದಲು ನಾಟ್ಯ ಮಾಡ-ಬಾರದೆ? ಮಾಡಿದರೆ ಏನು ತಪ್ಪು? ನಾನಿಲ್ಲದೆ ನೀನೊಬ್ಬಳೇ ಮಾಡೋಕೆ

ಸಾಧ್ಯವಿದೆ. ಅದೂ ಸ್ವಲ್ಪ ದಿನ ಮಾತ್ರ. ಅದೂ ಅಲ್ಲದೆ ಈ ಆಪಾದನೆಯೆಲ್ಲ ಬರೀ ಸುಳ್ಳು. ಮೊದಲನೇ ದಿನವೇ ವಜಾ ಆಗುತ್ತೆ, ನೋಡು ಬೇಕಾದರೆ."

"ನಿಜವಾಗಿ?"

"ನನಗೆ ವಿರುದ್ಧವಾಗಿ ಹೇಳೋದಕ್ಕೆ ಹೇಗೆ ಸಾಧ್ಯ?"

"ಅದೇನೋ ನನಗೆ ಗೊತ್ತಿಲ್ಲ. ಆದರೆ ನೀವೂ ಸ್ವತಂತ್ರ್ಯರಾಗಿದ್ದರೂ ನಾನು ಇನ್ನು ಮೇಲೆ ನೃತ್ಯ ಮಾಡೋಲ್ಲ. ನನಗೆ ಈ ಸರ್ಕಸ್ ಜೀವ ಬೇಜಾರಾಗಿದೆ."

"ಇದನ್ನೇ ನೀನು ಬಯಸಿದ್ದು?"

"ನಾನು ಬಯಸಿದ್ದು ನಾಟ್ಯಕಲೆಯನ್ನು. ನಿಮ್ಮ ಹಳೆಯ ಮನೆಯ ಜೊತೆಗೇ ಅದು ಹೋಯಿತು."

"ನಿಜ, ನಿಜ. ಆಗೇನು ಹಾರಾಡಿಬಿಟ್ಟೆ. ಸುಮ್ಮನೆ ನನ್ನ ಪಾಡಿಗೆ ನಾನು ಇರೋಕೆ ಬಿಟ್ಟೆಯಾ? ರಂಗದ ಮೇಲೆ ಬಂದರೆ ಸಾಕು ಎಂತಿದ್ದೆ. ಈಗ ನೋಡಿದರೆ ಹೀಗೆ ಮಾತಾಡುತ್ತಿದ್ದೀಯಾ.........ಏನು ಹೇಳಬೇಕೋ ನನಗೆ ತಿಳಿಯೋದಿಲ್ಲ........"

"ಯೋಚನೆ ಮಾಡಬೇಡಿ. ನನ್ನ ಮೈಯಲ್ಲಿ ಒಂದು ತೊಟ್ಟು ರಕ್ತವಿರುವ ವರೆಗೂ ನಿಮ್ಮನ್ನು ಉಳಿಸೋಕೆ ಪ್ರಯತ್ನ ಮಾಡುತ್ತೇನೆ. ಆದರೆ ಈ ಕೋರ್ಟು-ಕಚೇರಿ ಕೆಲಸ ಮುಗಿದ ಕೂಡಲೇ ನನ್ನನ್ನು ಮರೆತುಬಿಡಿ. ಬದುಕೋದು ಸಾಯೋದು ನನ್ನ ಹಣೇಬರಹ........"

ರೋಜಿ ಹೇಳಿದಂತೆಯೇ ಮಾಡಿದಳು. ಇದ್ದಕ್ಕಿದ್ದ ಹಾಗೆಯೇ ಎಲ್ಲೂ ಇಲ್ಲದ ಚೈತನ್ಯ ಉಕ್ಕಿ ಹರಿಯಿತು. ಮಣಿಯನ್ನು ಅಲ್ಲಿ ಇಲ್ಲಿ ಕಳುಹಿಸಿ ಕಾರ್ಯಕ್ರಮಗಳ ಏರ್ಪಾಟು ಮಾಡಿಸಿದಳು. ಇದ್ದಬಿದ್ದ ವಜ್ರದ ಒಡವೆಗಳನ್ನೆಲ್ಲ ಮಾರಿ ನನಗಾಗಿ ಹಣ ಕೂಡಿಸಿದಳು. ಮಣಿಯನ್ನು ಮದರಾಸಿಗೆ ಕಳುಹಿಸಿ ನನ್ನ ಪರವಾಗಿ ವಾದಿಸಲು ಒಬ್ಬ ದೊಡ್ಡ ಲಾಯರನ್ನು ಕರೆಸಿದಳು. ಅವಳನ್ನು ನೋಡಿದಾಗ—

"ನೋಡಿದೆಯಾ, ಇದನ್ನೇ ನಾನು ನಿನಗೆ ಮಾಡು ಅಂತ ಹೇಳಿದ್ದು" ಎನ್ನತೊಡಗಿದೆ.

ಕಾರ್ಯಕ್ರಮಗಳಿಗೆ ಬರಗಾಲ ಇರಲಿಲ್ಲ. ನನ್ನ ಅರೆಸ್ಟ್ ಆದ ಸ್ವಲ್ಪ

ಕಾಲ ಜನರ ಸುಳಿವಿರಲಿಲ್ಲ. ಆದರೆ ಯಾವಾಗ ರೋಜಿ ತಾನೇ ಸ್ವತಃ ಕಾರ್ಯಕ್ರಮದ ಏರ್ಪಾಟಿಗೆ ಹೊರಟಳೋ ಕೇಳಬೇಕೋ? ಅವರಿಗೆ ಬೇಕಾಗಿದ್ದುದು ಅವಳ ನೃತ್ಯ. ನನಗೇನಾದರೆ ಅವರಿಗೇನಂತೆ? ನಾನು ಹೀಗಿದ್ದಾಗಲೂ ನಳಿನಿ ಕಾರ್ಯಕ್ರಮವನ್ನು ನಡೆಸುತ್ತಿದ್ದುದು ನನಗೆ ದುಃಖ-ವಾಗಿತ್ತು. ಅವಳ ಆತ್ಮಸ್ಥೈರ್ಯವನ್ನು ಕಂಡು ಅಸೂಯೆಯಾಗತೊಡಗಿತು. ಮಣಿಯನ್ನು ಮನಸ್ಸು ಎಚ್ಚರಿಸತೊಡಗಿತು. ಅವಳು ಎಂದಿಗೂ ತನ್ನ ನೃತ್ಯದ ಅಭ್ಯಾಸವನ್ನು ನಿಲ್ಲಿಸುವುದೇ ಇಲ್ಲವೇನೋ ಎನಿಸಿತು. ಅವಳ ಬಾಳಿನಲ್ಲಿ ನನಗಾಗಲೀ, ಮಾರ್ಕೋನಿಗಾಗಲೀ ಸ್ಥಾನವಿಲ್ಲ. ಅವಳ ಜೀವನ ನೃತ್ಯಕ್ಕೆ ಮೀಸಲು ಎಂದೆನಿಸಿತು.

ನನ್ನ ಲಾಯರು ಅಸಾಧಾರಣ ವ್ಯಕ್ತಿ. ಅವರ ಹೆಸರು ಮನೆಮಾತಾ-ಯಿತು. ಆತ ಎಷ್ಟೋ ಜನರನ್ನು ಒಂದಕ್ಕಿಂತ ಹೆಚ್ಚು ಸಲವೋ ನೇಣಿ-ನಿಂದ ಪಾರುಮಾಡಿದ್ದರಂತೆ. ದರೋಡೆಕಾರರನ್ನೆಲ್ಲ ಸಂಭಾವಿತರನ್ನಾಗಿ ಮಾಡಿ ತೋರಿಸಿ ಕೇಸು ಗೆಲ್ಲುವ ಸಾಮರ್ಥ್ಯ ಅವರದು. ನನ್ನ ವಿರುದ್ಧ-ವಾಗಿದ್ದ ಆಪಾದನೆಯನ್ನು ಸುಳ್ಳೆಂದು ಹೇಳಿ ತಮ್ಮದೇ ವಾದವನ್ನು ಸಿದ್ಧ-ಮಾಡಿದರು. ನೋಡುವುದಕ್ಕೆ ತೀರ ಹಳೆಯ ತರಹದ ಪಂಚೆ, ಅದರ ಮೇಲೆ ಕಪ್ಪು ಕೋಟು, ತಲೆಗೆ ರುಮಾಲು. ಕೋರ್ಟಿನಲ್ಲಿ ನಿಂತು ವಾದ ಮಾಡ-ಲಾರಂಭಿಸಿದರೆ ಆತ್ಮಸ್ಥೈರ್ಯ ಅವರ ಮುಖದಲ್ಲಿ ತುಂಬಿ ತುಳುಕುತ್ತಿತ್ತು. ನ್ಯಾಯಾಧೀಶನೇನಾದರೂ ವಾದ ಕೇಳುವುದನ್ನು ಅಲಕ್ಷಿಸಿ ಮೇಜಿನ ಮೇಲಿದ್ದ ಕಾಗದ-ಪತ್ರಗಳ ಕಡೆ ತಿರುಗಿದರೆ ನಮ್ಮ ಲಾಯರು ಮೂಗಿಗೆ ನಶ್ಯವನ್ನೇರಿ-ಸುತ್ತಿದ್ದರು. ನನ್ನ ಕೇಸು ಅವರ ಯೋಗ್ಯತೆಗೆ ಬಹಳ ಸಣ್ಣದೆಂದು ಎಲ್ಲಿ ನಡುನೀರಿನಲ್ಲಿ ಕೈ ಬಿಟ್ಟುಬಿಡುತ್ತಾರೋ ಎಂಬ ಹೆದರಿಕೆ ಬೇರೆ. ಆದರೆ ನಳಿನಿಗಾಗಿ ಅವರು ಮಾತಾಡುವ ಧಾಟಿಯಲ್ಲಿ ಆರಂಭಿಸಿದ ವಾಕ್ಯ ಎಷ್ಟು ಹೊತ್ತಾದರೂ ಮುಗಿಯುತ್ತಲೇ ಇರಲಿಲ್ಲ. ಹೀಗಾಗಿ ಕೇಸು ತನ್ನದೇ ಆದ ಗತಿಯಲ್ಲಿ ಮುಂದುವರೆಯುತ್ತಿತ್ತು.

ಬೆಳಗಿನ ರೈಲಿನಲ್ಲಿ ಬಂದು ರಾತ್ರಿಯ ರೈಲಿನಲ್ಲಿ ಊರಿಗೆ ಹೊರಟು-ಬಿಡುತ್ತಿದ್ದರು. ಒಂದು ದಿನಕ್ಕೆ ಏಳುನೂರೈವತ್ತು ರೂಪಾಯಿ ಶುಲ್ಕ. ಜೊತೆಗೆ ಅವರ ಸಂಗಡ ಬರುತ್ತಿದ್ದವರ ಪ್ರಯಾಣದ ವೆಚ್ಚ.

ಆತ ನನ್ನ ಕೇಸನ್ನು ಕೋರ್ಟಿನ ಮುಂದಿಟ್ಟ ರೀತಿಯಲ್ಲಿ ಅದೊಂದು ಮರುಕದ ಪ್ರಹಸನವಾಗಿಬಿಟ್ಟಿತು. ಖಳನಾಯಕ ಮಾರ್ಕೊ ನಾಗರಿಕತೆಯ ದ್ವೇಷ. ಅವೊತ್ತು ಮಾರ್ಕೊನೇ ಪ್ರಾಸಿಕ್ಯೂಷನ್ನನವರ ಪರ ಮೊದಲನೆಯ ಸಾಕ್ಷಿ. ನನ್ನ ಲಾಯರನ್ನು ಅವನು ದುರುಗುಟ್ಟಿಕೊಂಡು ನೋಡಿದ್ದನ್ನು ನಾನು ಮರೆಯಲಾರೆ. ಅವನಿಗೂ ಲಾಯರಿದ್ದ. ಆದರೆ ನನ್ನ ಲಾಯರಿನ ಮುಂದೆ ಅವನು ಏನೇನೂ ಇಲ್ಲ. ಯಾಕಪ್ಪ ಆಪಾದಿಸಿದೆ ಎನಿಸಿರಬೇಕು ಅವನಿಗೆ.

ಮೊದಲನೇ ಅಂಕ : ಮಾರ್ಕೊ ತನ್ನ ಹೆಂಡತಿಗೆ ಹುಚ್ಚು ಹಿಡಿಸ-ಬೇಕೆಂದಿದ್ದ.

ಎರಡನೇ ಅಂಕ : ಹೆಂಡತಿ ಇದನ್ನೆಲ್ಲ ಸಹಿಸಿದಳು. ಸಾವಿನ ದವಡೆ-ಯಲ್ಲಿ ಸಿಕ್ಕಿದ ಅವಳನ್ನು ಪುಣ್ಯಾತ್ಮ ರಾಜು ಬದುಕಿಸಿದ. ತನ್ನ ಸರ್ವಸ್ವ-ವನ್ನು ಅವನು ತ್ಯಾಗಮಾಡಿ ಅವಳನ್ನು ನಾಟ್ಯರಾಣಿಯನ್ನಾಗಿ ಮಾಡಿದ. ಆಕೆಯ ಜೀವನ ನಮ್ಮ ಸಾಂಸ್ಕೃತಿಕ ಜೀವನಕ್ಕೆ ಒಂದು ಅದ್ಭುತ ಕಾಣಿಕೆ. ಹೀಗೆ ಈಕೆ ತನ್ನ ಸ್ವಪ್ರಯತ್ನದಿಂದ ನಿರ್ಮಿಸಿದ ಯಶೋರಾಶಿಯನ್ನು ನೋಡಿ ಅವರಿಗೆ ಸಹಿಸಲಾಗಲಿಲ್ಲ. ಯುವರ್ ಆನರ್........ಅವರು ಯಾವುದೋ ಹಳೇ ಪತ್ರವನ್ನು ತೆಗೆದರು........ಆಕೆಯನ್ನು ತೊಡಕಿನಲ್ಲಿ ಸಿಕ್ಕಿಸಬೇಕೆಂದು-ಕೊಂಡರು. ಆಮೇಲೆ ಅದನ್ನು ಹೇಳುತ್ತೇನೆ. (ಆದರೆ ಆಮೇಲೆ ಹೇಳುವು-ದಕ್ಕೆ ಅವರಿಗೆ ಅವಕಾಶ ಸಿಗುತ್ತಿರಲಿಲ್ಲ.) ಇಷ್ಟು ದಿನ ಇಲ್ಲದ ಆಸಕ್ತಿ ಈಗ ಬರಲು ಕಾರಣವೇನು? ಹಾಗೆ ಒಡವೆಯ ಪೆಟ್ಟಿಗೆಯನ್ನು ಹಿಂತಿರುಗಿಸ-ಬೇಕೆಂದಿದ್ದರೆ ಆಗಲೇ ಯಾಕೆ ಹಿಂತಿರುಗಿಸಲಿಲ್ಲ?....ಯುವರ್ ಆನರ್.... ಆ ಪತ್ರಕ್ಕೆ ರುಜು ಹಾಕದೇನೇ ಇವರು ಹಿಂತಿರುಗಿದರು. ಎದುರುಪಕ್ಷದ ಪರ-ಬಲೆಗೆ ಆಪಾದಿತರು ಸಿಕ್ಕಿಬೀಳಲಿಲ್ಲ. ಒಡವೆಯ ಆಸೆಯಿಂದ ತೊಡಕಿನಲ್ಲಿ ಸಿಕ್ಕಿಬೀಳುವಷ್ಟು ಮೂರ್ಖರಲ್ಲ. ಇನ್ನು ಯಾರ ಕೈಗಾದರೂ ಕೊಟ್ಟರೆ, ಪತ್ರ ತಲುಪುವುದೋ ಇಲ್ಲವೋ ಎಂದು ಶ್ರೀ ರಾಜು ಅವರೇ ಸ್ವತಃ ಹೋಗಿ ತಲುಪಿಸಿ ಬಂದರು. ಅದಕ್ಕೆ ಆ ಪೋಸ್ಟ್‌ಆಫೀಸಿನ ಪೋಸ್ಟಮಾಸ್ಟರೇ ಸಾಕ್ಷಿ. ಹೀಗೆ ರುಜು ಹಾಕದೆ ಬಂದ ಪತ್ರ ನೋಡಿ ಶ್ರೀ ಮಾರ್ಕೊ ಅವರಿಗೆ ಆದ ನಿರಾಸೆ ಅಷ್ಟಿಷ್ಟಲ್ಲ. ಅದಕ್ಕಾಗಿ ಅವರು ಒಂದು ಹೊಸ ಯುಕ್ತಿ ಹೂಡಿದರು.

ಯಾರ ಕೈಯಲ್ಲೋ ಆಕೆಯ ರುಜು ಎಂದಿನಂತೆಯೇ ರುಜು ಮಾಡಿಸಿ ಅದನ್ನೇ ಪೋಲೀಸಿನವರಿಗೆ ತೋರಿಸಿದರು. ಆಪಾದಿತರ ಮೇಲೆ ಬಂದಿರುವ ಆಪಾದನೆ ಶುದ್ಧ ಸುಳ್ಳು, ಮೋಸ ಇತ್ಯಾದಿ ಇತ್ಯಾದಿ.

ಆದರೆ ಪ್ರಾಸಿಕ್ಯೂಷನ್ನಿನವರ ಸಾಕ್ಷ್ಯ ಜೋರಾಗಿತ್ತು. ವಾದದಲ್ಲಿ ಹುರುಳಿತ್ತು. ಮಣಿಯನ್ನು ಪ್ರಶ್ನೆ ಮಾಡಿಮಾಡಿ ಅವನಿಂದ ಸತ್ಯ ಹೊರಡಿ-ಸಿದರು ಕೊನೆಗೆ ಅವನು ನಾನು ಹೇಗೆ ಇನ್ಶೂರ್ಡ ಪಾರ್ಸಲಿಗಾಗಿ ದಿನವೂ ಅಂಚೆಯವನ ನಿರೀಕ್ಷೆಯಲ್ಲಿರುತ್ತಿದ್ದೆ ಎನ್ನುವುದನ್ನು ಹೇಳಿಬಿಟ್ಟ. ಪೋಸ್ಟ್-ಮಾಸ್ಟರೂ ನಾನು ಎಂದೂ ಅಂಚೆಕಚೇರಿಗೆ ಹೋಗದಿದ್ದವನು ಅಂದು ಹೋದುದನ್ನು ಬಣ್ಣಿಸಿದರು. ಕೊನೆಗೆ ಹಸ್ತಾಕ್ಷರದ ನಿಪುಣರೊಬ್ಬರು ಆ ಪತ್ರದ ಮೇಲಿದ್ದುದು ನನ್ನ ಕೈಬರಹವೇ ಎನ್ನುವುದನ್ನು ರುಜುವಾತು ಮಾಡಿದರು.

ನನಗೆ ಎರಡು ವರುಷದ ಸಜವಾಯಿತು. ಏಳು ವರ್ಷದ ಶಿಕ್ಷೆಯಾಗ-ಬೇಕಾಗಿತ್ತಂತೆ, ಎರಡು ವರ್ಷದ ಶಿಕ್ಷೆಯಾಗಿದ್ದು ನನ್ನ ಪುಣ್ಯ ಎಂದರು ಲಾಯರು ಮಹಾಶಯರು. ಆದರೆ ಇದೆಲ್ಲ ಒಂದೆರಡು ದಿನದಲ್ಲಿ ಆಗಿ ಮುಗಿಯ-ಲಿಲ್ಲ. ಆಗಿ ಮುಗಿಯುವ ವರೆಗೂ ಮನೆಯ ಆಡಳಿತೆಯನ್ನು ವಹಿಸಿ, ಲಾಯರನ್ನು ತೃಪ್ತಿಪಡಿಸುವುದಕ್ಕಾಗಿ ನಳಿನಿ ಹಗಲು-ರಾತ್ರಿ ದುಡಿಯ-ಬೇಕಾಯಿತು.

ಜೈಲಿನಲ್ಲಿ ನಾನೊಬ್ಬ ಆದರ್ಶ ಕೈದಿ. ನಾನು ಯಾವುದಕ್ಕೂ ಉಪ-ಯೋಗವಿಲ್ಲದವನು ಎನ್ನುತ್ತಿದ್ದವರು ಜೈಲಿಗೆ ಬಂದು ನೋಡಬೇಕಾಗಿತ್ತು. ಸ್ವಾತಂತ್ರ್ಯವೇನೋ ಇರಲಿಲ್ಲ. ಮಲಗಬೇಕೆನಿಸಿದಾಗ ಏಳಬೇಕು. ಅದು ಬೆಳಗಿನ ಜಾವ ಏಳು ಗಂಟೆಗೆ. ಏಳಬೇಕೆನಿಸಿದಾಗ ಮಲಗಬೇಕಾಗಿತ್ತು. ಆದರೆ ಸಾಮಾನ್ಯವಾಗಿ ನನಗೆ ಕೈದಿಯ ಪಟ್ಟ ಸಿಗುತ್ತಲೇ ಇರಲಿಲ್ಲ. ಕಾವಲುಗಾರರು ಆಚೀಚೆ ಹೋದರೆ ನಾನು ನೋಡಿಕೊಳ್ಳುವುದು, ಮರ ಗೆಲಸದವರ ಮೇಲೆ ಮೇಸ್ತ್ರಿಯ ಕೆಲಸ ಮಾಡುವುದು ಇತ್ಯಾದಿ ಇತ್ಯಾದಿ. ದರೋಡೆಕಾರರೇ ಆಗಿರಲಿ, ಕಳ್ಳರೇ ಆಗಿರಲಿ, ಖೂನಿ ಮಾಡಿದವರೇ ಆಗಿ-ರಲಿ ನಾನು ಹೇಳಿದೆನೆಂದರೆ ಗಪ್‌ಚುಪ್. ನಾನು ಮಾತಾಡಲಾರಂಭಿಸಿದರೆ ಅವರ ಮನಸ್ಸಿನ ಕೊರಗೆಲ್ಲ ಮಾಯವಾಗುತ್ತಿತ್ತು. ನನ್ನನ್ನು ಮೇಸ್ತ್ರೀ ಎಂದೇ ಕರೆಯುತ್ತಿದ್ದರು. ಸುಮಾರು ಐನೂರು ಜನರ ಪರಿಚಯವಿತ್ತು.

ಅಧಿಕಾರಿಗಳಿಗೂ ಹಾಗೆಯೇ. ಜೈಲಿನ ಮುಖ್ಯಾಧಿಕಾರಿ ಪರೀಕ್ಷೆಗೆ ಹೊರ-ಟರೆ ನಾನೂ ಒಬ್ಬ ಅಧಿಕಾರಿಯಂತೆ ಅವರ ಹಿಂದೆ ನಡೆದುಹೋಗಿ ಅವರ ಸಂಶಯಗಳನ್ನು ನಿವಾರಿಸುವ ಸೌಲಭ್ಯ ನನಗಿತ್ತು. ಅವರು ಹೇಳುವು-ದಕ್ಕಿಂತ ಮೊದಲೇ ಅವರ ಮನಸ್ಸಿನಲ್ಲಿ ಏನಿದೆಯೆಂದು ಊಹಿಸಿ ಕೆಲಸ ಮಾಡುತ್ತಿದ್ದೆ. ಇದರಿಂದ ಅವರಿಗಾಗುತ್ತಿದ್ದ ಆನಂದವೇ ಆನಂದ. ಅವರು ಬರುವುದಕ್ಕೆ ಮೊದಲೇ ಓಡಿಹೋಗಿ ಕೈದಿಗಳನ್ನೂ, ಕಾವಲುಗಾರರನ್ನೂ, ಎಚ್ಚರಿಸಿ ಬರುತ್ತಿದ್ದೆ. ಇದರಿಂದಲೂ ನಾನು ಅವರ ಮೆಚ್ಚುಗೆಗೆ ಪಾತ್ರ-ನಾಗುತ್ತಿದ್ದೆ.

ನಾನು ಜೈಲಿಗೆ ಹೋದ ಹೊಸದರಲ್ಲಿ ಮಣಿ ನನ್ನನ್ನು ನೋಡಲು ಬರುತ್ತಿದ್ದ. ಸ್ನೇಹಿತರೆಲ್ಲ ಕೈಬಿಟ್ಟಿದ್ದರು. ಆದರೆ ಮಣಿ ಮಾತ್ರ ನನ್ನ ಸ್ಥಿತಿಗೆ ಮರುಗಿ ನನ್ನನ್ನು ನೋಡಲು ಬರುತ್ತಿದ್ದ. ಮುಖವನ್ನು ಮೇಲೆತ್ತದೆ ಸಪ್ಪೆ ಮೋರೆ ಹಾಕಿಕೊಂಡು ನಿಂತ ಅವನನ್ನು ನೋಡಿ ನಾನು ಒಂದು ದಿನ—

" ಏನೂ ಪರವಾಗಿಲ್ಲ ಮಣಿ. ಇದೇನು ಅಂತಹ ಕೆಟ್ಟ ಸ್ಥಳವೇನೂ ಅಲ್ಲ. ಸಾಧ್ಯವಾದರೆ ನೀನೂ ಇಲ್ಲಿಗೆ ಬರಬೇಕು " ಎಂದೆ. ಆಮೇಲೆ ಅವನು ತಿರುಗಿ ನನ್ನನ್ನು ನೋಡಲು ಬರಲಿಲ್ಲ. ಆದರೆ ಅದಕ್ಕೆ ಮೊದಲೇ ನನಗೆ ಬೇಕಾಗಿದ್ದ ವರ್ತಮಾನವನ್ನೆಲ್ಲಾ ಕೊಟ್ಟಿದ್ದ. ನಳಿನಿ ತನ್ನ ಸಾಮಾನು ಸರಂಜಾಮುವನ್ನೆಲ್ಲ ತೆಗೆದುಕೊಂಡು ಹೊರಟುಹೋಗಿದ್ದಳು. ಮದರಾಸಿನಲ್ಲೇ ನೆಲೆಸಿಬಿಟ್ಟಳಂತೆ. ಹೊರಟುಹೋಗುವುದಕ್ಕೆ ಮುಂಚೆ ಮಣಿಗೆ ಸಾವಿರ ರೂ. ಬಹುಮಾನ ಕೊಟ್ಟು ಹೋದಳಂತೆ. ರೈಲ್ವೆ ನಿಲ್ದಾಣ-ದಲ್ಲಿ ಸುಮಾರು ನೂರು ಹಾರಕ್ಕೂ ಹೆಚ್ಚಿನ ಹಾರಗಳನ್ನು ಹಾಕಿದರಂತೆ ಮಾಲ್ಗುಡಿಯ ಜನ. ಆಹೊತ್ತಂತೂ ನಿಲ್ದಾಣದಲ್ಲಿ ಜನವೇ ಜನವಂತೆ. ಊರು ಬಿಡುವುದಕ್ಕೆ ಮೊದಲು ಇದ್ದ ಸಾಲವನ್ನೆಲ್ಲ ತೀರಿಸಿಬಿಟ್ಟಳಂತೆ. ನಮ್ಮ ಮನೆಯಲ್ಲಿದ್ದ ಕುರ್ಚಿ, ಮೇಜು, ಬೀರುಗಳು, ಮಂಚ ಎಲ್ಲವನ್ನು ಹರಾಜು ಮಾಡುವವನೊಬ್ಬನಿಗೆ ಕೊಟ್ಟುಬಿಟ್ಟಳಂತೆ. ಅವಳು ಮನೆಯಿಂದ ತೆಗೆದು-ಕೊಂಡು ಹೋಗಿದ್ದು ಒಂದೇ ಒಂದು ಪದಾರ್ಥ. ಅದು ಮಾರ್ಕೊವಿನ ಪುಸ್ತಕ. ಅಲಮಾರನ್ನೊಡೆದು ಅದರಲ್ಲಿದ್ದ ಪಾನೀಯವನ್ನೆಲ್ಲ ಹೊರಗೆ ಬಿಸಾಡುವಾಗ ಒಂದು ಪುಸ್ತಕ ಸಿಕ್ಕಿತಂತೆ. ಅದನ್ನು ಹೊರಗೆ ತೆಗೆದು

ಜೋಪಾನವಾಗಿಟ್ಟು ತೆಗೆದುಕೊಂಡು ಹೋದಳಂತೆ.

"ಆ ಪುಸ್ತಕ ನಂದು. ಅದನ್ನು ಯಾಕೆ ತೆಗೆದುಕೊಂಡು ಹೋಗ-ಬೇಕಾಗಿತ್ತು........ಮಹಾ ಸಾಹಸದ ಕಾರ್ಯ ಅಂತ ತಿಳಿದುಕೊಂಡುಬಿಟ್ಟ-ಳೇನೋ........ಅವನಿಗೆ ಸಂತೋಷವಾಗಿರಬೇಕು..........ಅಥವಾ ಇನ್ನೇ-ನಾದರೂ........"

"ಇಲ್ಲ ಸಾರ್, ಇಲ್ಲ........ಕೇಸಾದ ಮೇಲೆ ಅವರು ತಮ್ಮ ಕಾರಿನಲ್ಲಿ ಹತ್ತಿಕೊಂಡು ಹೊರಟುಹೋದರು. ಇವರು ನಮ್ಮ ಕಾರಿನಲ್ಲಿ ಮನೆಗೆ ವಾಪಸು ಬಂದುಬಿಟ್ಟರು. ಒಬ್ಬರನ್ನೊಬ್ಬರು ನೋಡಲೇ ಇಲ್ಲ."

"ನನಗೆ ನಿಜವಾಗಿಯೂ ಸಂತೋಷವಾಯಿತು. ಮಣಿ, ಸದ್ಯ ತಿರುಗಿ ಅವನ ಕಾಲಿಗೆ ಎಲ್ಲಿ ಬೀಳುತ್ತಾಳೋ ಎಂದಿದ್ದೆ."

ಹೋಗುವುದಕ್ಕೆ ಮೊದಲು ಮಣಿ "ಈಚೆಗೆ ನಿಮ್ಮ ತಾಯಿಯವರನ್ನು ನೋಡಿದ್ದೆ ಸಾರ್. ಹಳ್ಳೀಲಿ ಚೆನ್ನಾಗಿದಾರೆ" ಎಂದು ಹೇಳಿಹೋದ.

ಅಮ್ಮ ಕೋರ್ಟಿಗೆ ಬಂದಿದ್ದಳು. ನಾನೂ ನೋಡಿದ್ದೆ. ಸೇಟ್‌ಜಿಯ ವ್ಯವಹಾರವನ್ನು ಇನ್ನೂ ಮುಕ್ತಾಯಗೊಳಿಸದಿದ್ದ ನಮ್ಮ ಅಡ್ಜರ್ನಮೆಂಟ್ ಲಾಯರು ಯಾತಕ್ಕೋ ದೇವರಿಗೆ ಗೊತ್ತು, ಅಂತೂ ಹಳ್ಳಿಗೆ ಹೋಗಿ ನನ್ನ ಕೇಸಿನ ದಿನ ಅಮ್ಮನನ್ನು ಕರೆದುಕೊಂಡು ಬಂದಿದ್ದರು. ನಾನು ಕಟಕಟೆ-ಯಲ್ಲಿ ನಿಂತಿದ್ದೆ. ಅಮ್ಮನಿಗೆ ಏನೋ ಹೇಳಬೇಕೆಂದು ರೋಜಿ ಹತ್ತಿರ ಹೋದಾಗ ಅಮ್ಮ—

"ಈಗ ನಿನ್ನ ಹೊಟ್ಟೆ ತಣ್ಣಗಾಯಿತೇನೇ ತಾಯಿ........ಅವನು ಅಲ್ಲಿ ನಿಂತಿರೋದನ್ನು ನೋಡಿ ಸಂತೋಷಪಟ್ಟೆಯೋ ಇಲ್ಲವೋ?" ಎಂದಿದ್ದಳು.

ನಳಿನಿ ಮಾತಾಡದೆ ಹಿಂದಕ್ಕೆ ಬಂದುಬಿಟ್ಟಳು. ಇದನ್ನು ಅಮ್ಮನೇ ನನಗೆ ಹೇಳಿದಳು........ಜೈಲಿಗೆ ಹೋಗುವುದಕ್ಕೆ ಮೊದಲು ಅಮ್ಮನನ್ನು ಒಂದು ನಿಮಿಷ ಸಂಧಿಸಿದ್ದೆ.

"ತಲೆ ಎತ್ತಿಕೊಂಡು ಓಡಾಡೋಕೆ ಆಗದ ಹಾಗೆ ಮಾಡಿಬಿಟ್ಟೆ-ಯಲ್ಲೋಪ್ಪ. ನಿಮೋನಿಯಾ ಬಂದಾಗ ನಿನ್ನನ್ನು ಉಳಿಸು ಅಂತ ಕಂಡ-ಕಂಡ ದೇವರಿಗೆಲ್ಲ ಕೈಮುಗಿದು ಹರಕೆ ಹೊತ್ತೆ. ಹೀಗೆ ಅಪಮಾನವಾಗೋದ-ಕ್ಕಿಂತ ಹಾಗೇ ದೇವರ ಪಾದ ಸೇರಿಕೊಂಡಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು...."

ಅಮ್ಮ ಅಲ್ಲಿ ನಿಲ್ಲಲಾರದೆ ಮುಖ ಮುಚ್ಚಿಕೊಂಡು ಅಳುತ್ತಾ ಹೊರಟು-ಹೋದಳು.

ಸ್ವಲ್ಪ ದಿನವಾದ ಮೇಲೆ ಅಧಿಕಾರಿ ನನ್ನನ್ನು ತಮ್ಮ ಆಫೀಸಿನ ಜವಾನ-ನನ್ನಾಗಿ ನೇಮಿಸಿಕೊಂಡರು. ಶಾಯಿಕುಡಿಕೆಗೆ ಶಾಯಿ ತುಂಬಿ, ಮೇಜಿನ ಧೂಳೊರೆಸಿ, ಪೆನ್ಸಿಲನ್ನು ಹೊರೆದು, ಹೊರಗೆ ಬಾಗಿಲಲ್ಲಿ ಕುಳಿತಿರುವುದು ನನ್ನ ಕೆಲಸ. ಅವರು ನನ್ನನ್ನು ಮನಸ್ಸಿನಲ್ಲಿ ನೆನೆಸಿದರೂ ಸಾಕು; ಅವರ ಮುಂದೆ ನಾನು ಹಾಜರು. ಅವರು ಹೇಳಿದಾಗ ಕಾಗದ-ಪತ್ರಗಳನ್ನು ಅವ-ರಿರುವ ರೂಮುಗಳಿಗೆ ತೆಗೆದುಕೊಂಡು ಹೋಗಬೇಕಾಗಿತ್ತು. ಅವರು ಕೊಟ್ಟ ಫೈಲುಗಳನ್ನು ಇಲ್ಲಿಗೆ ತರಬೇಕಾಗಿತ್ತು. ಸಾಮಾನ್ಯವಾಗಿ ಅವರಿಲ್ಲದಾಗಲೇ ವೃತ್ತಪತ್ರಿಕೆಗಳು ಬರುತ್ತಿದ್ದವು. ನಾನು ಹಾಗೇ ಕುಳಿತು ಅವುಗಳ ಮೇಲೆ ಕಣ್ಣೋಡಿಸುತ್ತಿದ್ದೆ. ಪಂಚವಾರ್ಷಿಕ ಯೋಜನೆ, ಮಂತ್ರಿಗಳ ಪ್ರವಾಸ, ಸೇತುವೆಯ ನಿರ್ಮಾಣ, ಬಹುಮಾನ ವಿನಿಯೋಗ ಇತ್ಯಾದಿ ಇತ್ಯಾದಿ.

ಆದರೆ ಶುಕ್ರವಾರ, ಶನಿವಾರ ಮಾತ್ರ 'ಹಿಂದೂ' ಪತ್ರಿಕೆಯನ್ನು ತಿರುವಿ ಕಡೆಯ ಪುಟವನ್ನು ನೋಡಿದಾಗಲೇ ನಳಿನಿಯ ಫೋಟೋದ ಕೆಳಗೆ ಅವಳ ಕಾರ್ಯಕ್ರಮವಿದ್ದ ಸಭೆ. ಟಿಕೇಟಿನ ದರಗಳ ವಿವರಣೆ. ಇವತ್ತು ಬೆಂಗಳೂರು, ನಾಳೆ ಸಿಲೋನ್, ನಾಡದು ದೆಹಲಿ, ಆಚೆನಾಡದು ಬೊಂಬೈ. ಹೀಗೆ ಅವಳ ಕಾರ್ಯಕ್ಷೇತ್ರ ವಿಸ್ತರಿಸುತ್ತಿತ್ತು. ನಾನಿಲ್ಲದೆ ಅವಳು ಹೀಗೆ ತಿರುಗುವುದನ್ನು ಕಂಡು ನನ್ನ ಹೊಟ್ಟೆ ಉರಿಯುತ್ತಿತ್ತು. ಈಗ ಮಧ್ಯದ ಸೋಫಾದಲ್ಲಿ ಯಾರು ಕುಳಿತುಕೊಳ್ಳುತ್ತಾರೆ? ನನ್ನ ಕಣ್ಣಸನ್ನೆಯಿಲ್ಲದೆ ಕಾರ್ಯಕ್ರಮ ಹೇಗೆ ಪ್ರಾರಂಭವಾಗುತ್ತದೆ? ಯಾವಾಗ ನಿಲ್ಲಿಸಬೇಕೆಂದು ಅವಳಿಗೆ ಹೇಗೆ ತಿಳಿಯುತ್ತದೆ? ಅವಳು ನಿಲ್ಲಿಸದೆ ನೃತ್ಯ ಮಾಡುತ್ತಲೇ ಇರುತ್ತಾಳೆ ಅಂತ ಕಾಣುತ್ತೆ. ಬಾಕಿಯವರು ಅವಳಿಗೆ ಹೇಳುವ ಮಾರ್ಗ ತಿಳಿಯದೆ ನೋಡುತ್ತ ಕುಳಿತಿರುತ್ತಾರೇನೋ? ಅವಳು ಎಷ್ಟು ಸಂಪಾದಿ-ಸುತ್ತಿರಬಹುದೆನ್ನುವುದನ್ನು ನೋಡುವುದಕ್ಕಾಗಿ 'ಹಿಂದು'ವಿನ ಪುಟ ತಿರುವಿ ಹಾಕುತ್ತಿದ್ದೆ.

ಮುಖ್ಯಾಧಿಕಾರಿಯ ಮನೆಯ ಹಿಂಭಾಗದಲ್ಲಿದ್ದ ತೋಟವನ್ನು ನೋಡಿ-ಕೊಳ್ಳುವುದು ನನ್ನ ಪಾಲಿನ ಕೆಲಸ. ಭಾವಿಯಿಂದ ನೀರು ಸೇದಿಹಾಕಿ,

ಮಣ್ಣು, ಗೊಬ್ಬರ ಬೆರೆಸಿ ತೋಟವನ್ನು ಲಕ್ಷಣವಾಗಿ ಬೆಳೆಸಿದ್ದೆ. ತೋಟದ ತುಂಬ ಬದನೆ, ಹುರುಳಿ, ಕೋಸಿನ ಗಿಡಗಳು, ತುಂಬ ತರಕಾರಿ ಗಿಡಗಳು. ಅವು ಹೂವು ಬಿಡುವಾಗಲೇ ನನಗೆ ಆನಂದ. ಅವುಗಳಲ್ಲಿ ಕಾಯಿ ಕಂಡಾಗ-ಲಂತೂ ನನ್ನ ಉತ್ಸಾಹ ಅಷ್ಟಿಷ್ಟಲ್ಲ. ಅವನ್ನೆಲ್ಲ ಕಿತ್ತು ತೊಳೆದು ನನ್ನ ಜೈಲಿನ ಜುಬ್ಬದ ಕೊನೆಯಿಂದ ಒರಸಿ ಚಿತ್ರದ ಕೆಲಸ ಮಾಡುವ ಕೈದಿ-ಗಳಿಂದ ಕೇಳಿ ತಂದಿದ್ದ ಬಿದಿರಿನ ತಟ್ಟೆಯ ಮೇಲಿಟ್ಟುಕೊಂಡು ಅಧಿಕಾರಿಯ ಬಳಿಗೆ ತೆಗೆದುಕೊಂಡು ಹೋದರೆ ಅವರಿಗಾಗುತ್ತಿದ್ದ ಆನಂದ ಅಷ್ಟಿಷ್ಟಲ್ಲ. ಅವರಿಗೆ ಹಣ್ಣು–ತರಕಾರಿಯೆಂದರೆ ಪ್ರಾಣ. ನನಗಂತೂ ಆ ಕೆಲಸ ತುಂಬ ಹಿಡಿಸಿತ್ತು. ಕಣ್ಣಿಗೆ ಹಬ್ಬವಾಗುವಂತಹ ಹಸಿರು ತೋಟ. ಮೇಲೆ ನೀಲಿ ಆಕಾಶ. ದಣಿವಾದರೆ ಅಧಿಕಾರಿಯ ಮನೆಯ ನೆರಳು. ಹೊಸದಾಗಿ ಮಣ್ಣನ್ನು ಅಗೆದಾಗಲಂತೂ ಅದರ ಸುವಾಸನೆ ಹುಚ್ಚೆಬ್ಬಿಸುತ್ತಿತ್ತು. ಇದೇ ಜೈಲಿನ ವಾಸವಾದರೆ ಯಾತಕ್ಕೆ ಜನ ಇಲ್ಲಿಗೇ ಬರಬಾರದು ? ಜೈಲು ಅಂದರೆ ಕಂಬಕ್ಕೆ ಕಟ್ಟಿ ಕಬ್ಬಿಣದ ಕೋಲಿನಿಂದ ಹೊಡೆಯುವ ಕಟುಕರ ಅಂಗಡಿ ಅಂತ ತಿಳಿದು-ಕೊಂಡಿರುವ ಹಾಗಿದೆ ಜನ. ಓಬೀರಾಯನ ಕಾಲದ ಭಾವನೆಗಳು. ಇದಕ್ಕಿಂತ ಬೇರೆ ಸ್ಥಳ ಬೇಕೆ ? ಊಟ ಸಿಗುತ್ತಿತ್ತು, ಇರಲು ಜಾಗವಿತ್ತು, ಮಾತಾಡುವು-ದಕ್ಕೆ ಜನರಿದ್ದರು, ಮಾಡುವುದಕ್ಕೆ ಕೆಲಸವಿತ್ತು. ಇನ್ನೇನು ಬೇಕು ? ಬಂಧ-ನದ ವಿಚಾರವನ್ನು ಮರೆತುಬಿಟ್ಟರೆ ಜೈಲಿನ ವಾಸ ಸ್ವರ್ಗವಾಸ. ಎರಡು ವರ್ಷದ ಕೊನೆಯಲ್ಲಿ ಜೈಲಿನಿಂದ ಹೊರಗೆ ಹೋಗಬೇಕಾದಾಗಂತೂ ನನಗೆ ಅಳುವೇ ಬಂದುಬಿಟ್ಟಿತ್ತು. ಆ ಹಾಳು ಲಾಯರಿಗೆ ಅಷ್ಟು ದುಡ್ಡು ಕೊಡದೇ-ಹೋಗಿದ್ದರೆ ಸಾಯುವತನಕ ಇಲ್ಲೇ ಇದ್ದುಬಿಡಬಹುದಾಗಿತ್ತು.

# 11

ಮುಂಜಾನೆಯ ಕೋಳಿ ಕೂಗಿತು. ರಾಜು ತನ್ನ ಕತೆಯನ್ನು ಮುಗಿಸಿದನು. ವೇಲನ್ ಎವೆಯಿಕ್ಕದೆ ಕುಳಿತು ಕೇಳುತ್ತಿದ್ದನು. ರಾತ್ರಿಯೆಲ್ಲಾ ಮಾತನಾಡಿ ರಾಜುವಿನ ಗಂಟಲು ಒಣಗಿಹೋಗಿತ್ತು. ದೊಡ್ಡದಾಗಿ ಆಕಳಿಸಿದನು ವೇಲನ್.

ಒಂದು ಚೂರು ವಿವರವನ್ನು ಬಿಡದೆ ರಾಜು ಕತೆಯನ್ನು ಹೇಳಿದ್ದನು. ಮನೆಯ ಹೊಸತಿಲನ್ನು ದಾಟಿದ ದಿನದಿಂದ ಜೈಲಿನ ಬಾಗಿಲನ್ನು ದಾಟಿ ಬರೋವ ವರೆಗೂ ನಡೆದ ಜೀವನಕತೆಯೆಲ್ಲವನ್ನು ವೇಲನ್‌ನ ಎದುರಿನಲ್ಲಿ ಬಿಚ್ಚಿತೋರಿಸಿದ ಹಾಗಿತ್ತು. ಇಂತಹ ಕತೆಯನ್ನು ಕೇಳಿದ ಮೇಲೆ ವೇಲನ್ ಕೂಡಲೆ ಎದ್ದು—

"ಇಷ್ಟು ದಿನ ಇದನ್ನೆಲ್ಲ ಬಚ್ಚಿಟ್ಟು ಮೋಸ ಮಾಡಿದೆಯಾ, ಕಪಟ ಸ್ವಾಮಿ. ತೊಲಗಿಹೋಗು ಇಲ್ಲಿಂದ" ಎಂದು ಹೇಳುವುದನ್ನೇ ಕಾಯುತ್ತಿದ್ದ ರಾಜು ಮತ್ತೊಮ್ಮೆ ನ್ಯಾಯಾಧೀಶನ ಎದುರಿನಲ್ಲಿ ತನ್ನ ತಪ್ಪನ್ನು ಒಪ್ಪಿಕೊಂಡು ಅವರ ಶಿಕ್ಷೆಯನ್ನೇ ಎದುರು ನೋಡುವ ಹಾಗಿತ್ತು ರಾಜುವಿನ ಸ್ಥಿತಿ. ವೇಲನ್ ಮೌನವಾಗಿದ್ದುದನ್ನು ನೋಡಿ ಅವನೆಲ್ಲಿ ನಿದ್ದೆಹೋಗಿಬಿಟ್ಟನೋ ಎನಿಸಿತು.

"ನಾನು ಹೇಳಿದ್ದೆಲ್ಲ ಸರಿಯಾಗಿ ಕೇಳಿದೆಯಲ್ಲವೇ?"

ಕೇಳಿದನೋ ಇಲ್ಲವೋ ಎಂಬ ಸಂಶಯ ಅವನಿಗೆ.......

"ಕೇಳಿದೆ ಸ್ವಾಮೀಜಿ."

ರಾಜು 'ಸ್ವಾಮೀಜಿ' ಎನ್ನುವ ಪದವನ್ನು ವೇಲನ್ ಮತ್ತೆ ಬಳಸಿದ್ದನ್ನು ಕೇಳಿ ಚಕಿತನಾದನು.

"ಏನೆನಿಸುತ್ತೆ ನಿನಗೆ?"

ಆ ಪ್ರಶ್ನೆಗೆ ಉತ್ತರ ಹೇಳುವುದು ಎಷ್ಟು ದುಃಖಕರವಾದುದೆಂಬುದನ್ನು ಅವನ ಮುಖವೇ ಹೇಳುತ್ತಿತ್ತು.

"ಇದನ್ನೆಲ್ಲ ನೀವು ನನಗೆ ಯಾಕೆ ಹೇಳಿದಿರೊ ನನಗೆ ಗೊತ್ತಿಲ್ಲ ಸ್ವಾಮೀಜಿ. ಈ ನಿಮ್ಮ ಸೇವಕನ ಹತ್ತಿರ ಇಷ್ಟು ಹೊತ್ತು ಮಾತಾಡಿದ್ದು ನನ್ನ ಪುಣ್ಯ."

ವೇಲನ್‌ನ ಒಂದೊಂದು ಮಾತು ಚೂರಿಯ ಇರಿತದ ಹಾಗೆ ಕಂಡಿತು ರಾಜುವಿಗೆ.

"ಸ್ವಾಮೀಜಿ, ಈಗ ನಾನು ಊರಿಗೆ ಹೋಗಿಬರುತ್ತೇನೆ. ಇಷ್ಟು ಹೊತ್ತು ನಾನು ಏನು ಕೇಳಿದೆ ಅದನ್ನು ಪ್ರಾಣಹೋದರೂ ಸರಿ ಒಬ್ಬರ ಹತ್ತಿರಾನೂ ಹೇಳೋದಿಲ್ಲ. ಅದೆಲ್ಲ ಈ ಎದೆಯೊಳಕ್ಕೆ ಹೊರಟುಹೋಗಿದೆ. ಅಲ್ಲಿರುತ್ತೆಯೇ ಹೊರತು ಮೇಲಕ್ಕೆ ಬರೋದಿಲ್ಲ" ಎಂದು ರಾಜುವಿಗೆ ಸಾಷ್ಟಾಂಗನಮಸ್ಕಾರ ಮಾಡಿ ವೇಲನ್ ಮೆಟ್ಟಿಲಿಳಿದು ಬತ್ತಿಹೋದ ನದಿ-ಯನ್ನು ದಾಟಿ ಹೊರಟುಹೋದನು.

ಊರಿನ ಕ್ಷಾಮದ ಸ್ಥಿತಿ-ಗತಿಗಳನ್ನು ತಿಳಿದುಬರಲು ಸರಕಾರದವರು ಒಂದು ಸಮಿತಿಯನ್ನು ಮಾಡಿದ್ದರು. ಆ ಸಮಿತಿಯ ಸದಸ್ಯರ ಜೊತೆ ಪತ್ರಿಕಾ ಪ್ರತಿನಿಧಿಯೊಬ್ಬ ಮಂಗಲಕ್ಕೆ ಬಂದಿದ್ದ. ಅಲ್ಲಲ್ಲಿ ತಿರುಗಾಡುತ್ತ ಮಂಗಲದ ಸ್ವಾಮೀಜಿಯ ವಿಚಾರವನ್ನು ತಿಳಿದುಕೊಂಡು ಕೂಡಲೇ ತನ್ನ ಮದರಾಸು ಪತ್ರಿಕೆಗೆ ತಂತಿಯನ್ನು ಕಳುಹಿಸಿದ.

'ಕ್ಷಾಮನಿವಾರಣೆಗಾಗಿ ಸ್ವಾಮೀಜಿಯವರ ತಪಸ್ಸು.' ಪತ್ರಿಕೆಯಲ್ಲಿ ಪ್ರಕಟವಾದ ಈ ಸುದ್ದಿ ಕಾಳ್ಗಿಚ್ಚಿನಂತೆ ದೇಶದಲ್ಲೆಲ್ಲಾ ಹಬ್ಬಿತು. ಜನರ ಕುತೂಹಲ ಕೆರಳಿತು. ಪತ್ರಿಕೆಯವರು ಪ್ರತಿನಿಧಿಯನ್ನು ಹಿಂದಕ್ಕೆ ಕಳುಹಿ-ಸಿದರು. ಆತ ಎರಡನೇ ಸಲ ಮಂಗಲಕ್ಕೆ ಬಂದವನು—

'**ಉಪವಾಸದ ಐದನೇ ದಿನ**' ಎಂದು ತಂತಿ ಕೊಟ್ಟ. ಮೇಲೆ ಆ ಉಪವಾಸದ ಯಜ್ಞದ ವಿವರಣೆ : ಸೂರ್ಯೋದಯಕ್ಕೆ ಮೊದಲೇ ಸ್ವಾಮೀಜಿ ನದಿಗೆ ಬರುತ್ತಾರೆ. ಮೆಂಪಿ ಬೆಟ್ಟದ ಕಡೆಗೆ ಈ ನದಿಯ ಮೂಲಕ್ಕೆ ಅಭಿ-ಮುಖವಾಗಿ ಮಂಡಿಯುದ್ದದ ನೀರಿನಲ್ಲಿ ನಿಂತುಕೊಂಡು ಕೈಜೋಡಿಸಿ ಕಣ್ಣುಮುಚ್ಚಿ ಮಂತ್ರೋಚ್ಚಾರಣೆಯಲ್ಲಿ ತೊಡಗುತ್ತಾರೆ. ಮಂಡಿಯುದ್ದದ ನೀರು ಸಿಗುವುದೇ ಕಷ್ಟವಾಗಿದೆ. ನದಿಯಲ್ಲಿ ಹಾಗೆ ನೀರು ಸಿಗದೇಹೋದರೆ ನದಿಯಲ್ಲಿ ಮರಳನ್ನು ಅಗೆದು ಅದಕ್ಕೆ ಎಲ್ಲಿಂದಾದರೂ ನೀರು ತಂದು ತುಂಬು-

ತ್ತಾರೆ. ಎರಡು ಘಂಟೆಯ ಹೊತ್ತು ನೀರಿನಲ್ಲಿ ನಿಂತಿದ್ದು ಸ್ವಾಮೀಜಿ ಮಂಟಪದೊಳಗೆ ಹೋಗಿ ಚಾಪೆಯ ಮೇಲೆ ಮಲಗುತ್ತಾರೆ. ಅವರ ಭಕ್ತಾದಿ-ಗಳಿಗೆ ಆಗ ಗಾಳಿಬೀಸುವ ಕೆಲಸ. ಸ್ವಾಮೀಜಿಯವರು ಯಾರಿದ್ದಾರೆ ಯಾರಿಲ್ಲ ಎಂದೆಲ್ಲ ನೋಡುವುದಿಲ್ಲ. ಸಂಪೂರ್ಣ ಉಪವಾಸ. ಕಣ್ಣುಮುಚ್ಚಿ ಮಲಗಿ ಧ್ಯಾನಾಸಕ್ತರಾಗುತ್ತಾರೆ. ಈ ಮಹಾತ್ಮರ ಹತ್ತಿರ ಇರುವುದಕ್ಕಾಗಿ ಹಳ್ಳಿಯ ಜನ ತಮ್ಮ ಮನೆ–ಮಠಗಳನ್ನೆಲ್ಲ ಮರೆತುಬಿಟ್ಟಿದ್ದಾರೆ. ಅಷ್ಟೊಂದು ಭಾರಿ ಗುಂಪು ಕೂಡಿದರೂ ಸ್ವಾಮೀಜಿಯವರ ಧ್ಯಾನಕ್ಕೆ ಭಂಗ ಬರದಹಾಗೆ ಮೌನವಾಗಿ ಪ್ರಶಾಂತವಾಗಿದೆ ವಾತಾವರಣ.

ಈ ಗುಂಪು ದಿನದಿನಕ್ಕೆ ಹೆಚ್ಚುತ್ತಾ ಹೋಯಿತು. ಹೀಗೆ ಗುಂಪು ಹೆಚ್ಚಿದ ಹಾಗೆಲ್ಲ ಜನ ಹೋಗಿ ಜಾತ್ರೆಯಾಯಿತು. ಮಕ್ಕಳು ಅಲ್ಲಲ್ಲೇ ಆಡ-ತೊಡಗಿದರು. ಮನೆಯ ಹೆಂಗಸರು ಮಡಕೆಗಳಲ್ಲಿ ಸಾಮಾನು ತಂದು ಅಲ್ಲೇ ಕಲ್ಲುಗಳಿಟ್ಟು ಒಲೆ ಹೊತ್ತಿಸಿ ಅಡುಗೆಮಾಡಿ ಗಂಡುಸರಿಗೆ, ಮಕ್ಕಳಿಗೆ ಬಡಿಸಿ ತಾವೂ ತಿಂದರು. ಹೆಂಗುಸರ ಬಣ್ಣಬಣ್ಣದ ಸೀರೆಗಳು ಸೂರ್ಯನ ಕಾಂತಿ-ಯಲ್ಲಿ ಕಂಗೊಳಿಸುತ್ತಿದ್ದವು. ಎತ್ತಿನ ಗಾಡಿಗಳಲ್ಲಿ ಗುಂಪುಗುಂಪಾಗಿ ಜನ ಬಂದಿಳಿದರು.

ರಾಜು ಕಣ್ಣುತೆರೆದಾಗಲೆಲ್ಲ ಎದುರಿಗೆ ಕಾಣುತ್ತಿರುವುದು ಅಪಾರ ಜನಸಂದಣಿ. ಎದುರಿಗೆ ನದಿಯ ದಂಡೆಯ ಮೇಲೆ ಹೊಗೆಯಾಡುತ್ತಿದ್ದುದು ಯಾಕೆಂದು ಅವನಿಗೆ ಗೊತ್ತಿಲ್ಲವೆ? ಅಡುಗೆ ಮಾಡಿ ತಿಂದು ತೇಗಿ ಜನ ನಲಿಯುತ್ತಿದ್ದಾರೆ. ಕೇಸರಿಬಾತು ಮಾಡಿರಬಹುದೇ? ಏನು ತರಕಾರಿ ಬಳ-ಸಿರಬಹುದು? ರಾಜುವಿಗೆ ಅದನ್ನು ನೋಡುವುದು ಸಾಧ್ಯವಾಗಲಿಲ್ಲ.

ಉಪವಾಸದ ಐದನೇ ದಿನವೆಂದು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದರೂ ಇದು ನಿಜವಾದ ಉಪವಾಸದ ನಾಲ್ಕನೆಯ ದಿನ. ಮೊದಲನೆಯ ದಿನ ರಾಜು ಗರ್ಭಗುಡಿಯೊಳಗೆ ಅಲ್ಯೂಮಿನಿಯಂ ಪಾತ್ರೆಯಲ್ಲಿ ಉಳಿದಿದ್ದ ಅಲ್ಪಸ್ವಲ್ಪ ತಿಂಡಿಯನ್ನು ತಿಂದಿದ್ದನು. ಅಂದು ರಾತ್ರಿ ಹೆಚ್ಚು ಜನವಿರಲಿಲ್ಲ. ವೇಲನ್ ಇಬ್ಬರಿಗೆ ಸ್ವಾಮೀಜಿಯವರ ಜೊತೆಗಿರಲು ಹೇಳಿ ಊರೊಳಗೆ ಹೋಗಿ-ದ್ದನು. ಚಾಪೆಯ ಮೇಲೆ ಮಲಗಿದ್ದ ರಾಜು ಸ್ವಲ್ಪಹೊತ್ತು ಬಿಟ್ಟು "ನೀವು ಬೇಕಾದರೆ ಮಲಗಿಕೊಳ್ಳಿ. ನಾನು ಈಗ ಬರುತ್ತೇನೆ" ಎಂದು ಎದ್ದು ಗರ್ಭ-

ಗುಡಿಯೊಳಗೆ ಹೋದನು. ಉಪವಾಸದಿಂದ ಮೈಯಲ್ಲಿ ನಿಶ್ಶಕ್ತಿ ತಲೆ-ದೋರಿತ್ತು.

"ಎಲ್ಲಿ ಹೋಗುತ್ತೇನೆಂದಾಗಲೀ, ಯಾವಾಗ ಬರುತ್ತೇನೆಂದಾಗಲೀ ಯಾಕೆ ಹೇಳಬೇಕು?" ಎನಿಸಿತು. ಸ್ವಲ್ಪವೂ ಏಕಾಂತವು ಬೇಡವೇ? ಒಳ್ಳೇ ಕಳ್ಳನ್ನ ಕಾಯೋ ಹಾಗೆ ಎಂದರೆ! ಗರ್ಭಗುಡಿಯೊಳಗೆ ಹಿಂದಿನಿಂದ ಅಲ್ಯೂಮಿನಿಯಂ ಪಾತ್ರೆಯನ್ನು ಹೊರಗೆಳೆದು ಉಳಿದಿದ್ದ ಅನ್ನವನ್ನು ಗಬ-ಗಬನೆ ತಿಂದು ಮುಗಿಸಿದನು. ಎರಡು ದಿನದ ಅನ್ನ ಹಳಸಿಹೋಗಿತ್ತು. ಆದರೂ ಹಸಿವನ್ನು ಅಡಗಿಸುವ ಶಕ್ತಿ ಅದಕ್ಕೆ ಇತ್ತಲ್ಲ ಅಷ್ಟೇ ಸಾಕು. ನೀರು ಕುಡಿದು ಹೊರಗೆ ಹೋಗಿ ಸದ್ದಿಲ್ಲದೆ ಬಾಯಿ ಮುಕ್ಕಳಿಸಿ ಪುನಃ ಬಂದು ಮಲಗಿದನು.

ಮಲಗಿದರೆ ತಲೆಯತುಂಬ ಯೋಚನೆ. ಎಲ್ಲರೂ ಬಂದು ಸೇರಿದಾಗ ಎದ್ದುನಿಂತು "ಇಲ್ಲಿಂದ ಎಲ್ಲರೂ ಹೊರಗೆ ಹೋಗಿ. ನನಗೆ ಏಕಾಂತ ಬೇಕು. ನಾನೊಬ್ಬನೇ ಇರಬೇಕು" ಅಂತ ಹೇಳಿಬಿಡಲೆ ಎನಿಸಿತು. "ನಾನು ಸ್ವಾಮೀಜಿ-ಯಲ್ಲ, ನಿಮ್ಮನ್ನು ಬದುಕಿಸೋದು ನನ್ನಿಂದ ಸಾಧ್ಯವಿಲ್ಲ. ನೀವೆಲ್ಲ ಕ್ಷಾಮಕ್ಕೆ ಬಲಿಯಾಗಬೇಕೆನ್ನುವುದು ದೇವರ ಇಚ್ಛೆಯಾದರೆ ನಾನು ಏನೂ ಮಾಡೋ-ಕಾಗೋದಿಲ್ಲ. ಯಾರೂ ಏನೂ ಮಾಡೋದು ಸಾಧ್ಯವಿಲ್ಲ.........ಸುಮ್ಮನೆ ಈ ತಪಸ್ಸಿಗೆ ನನ್ನನ್ನು ಗುರಿಮಾಡಿದ್ದೀರಿ........" ಹೀಗೆ ಹೇಳಬಹುದು. ಆದರೆ ಅದನ್ನು ಅವರು ನಂಬುವರೆ? ಎರಡನೆಯ ದಿನ ಯಥಾಪ್ರಕಾರ ನೀರಿ-ನಲ್ಲಿ ನಿಲ್ಲಲೇಬೇಕಾಯಿತು. ರಾತ್ರಿ ಹಿಂದಿನ ದಿನದಂತೆಯೇ ವೇಲನ್ ಕಣ್ಣು-ತಪ್ಪಿಸಿ ಗರ್ಭಗುಡಿಗೆ ಹೋದರೆ ಅಲ್ಲೇನಿದೆ? ಹಿಂದಿನ ದಿನ ಪಾತ್ರೆಯಲ್ಲಿ ಒಂದಗಳನ್ನೂ ಬಿಡದೆ ತಿಂದಾಗಿತ್ತು. ಆದರೂ ಏನಾದರೂ ಅದ್ಭುತ ಪವಾಡ ತನ್ನಿಂದ ಆಗಬಹುದಾದರೆ ತನ್ನ ಪಾತ್ರೆಯಲ್ಲೇ ಪವಾಡವಾಗಬಾರದೇಕೆ? ವೇಲನ್‌ನಿಗೆ ಸ್ವಲ್ಪ ಅನ್ನ ತಂದುಕೊಡಲು ಕೇಳಿದರೆ? ಆದರೆ ಆ ಮೂರ್ಖ-ನಿಗೆ ನಾನು ಸ್ವಾಮೀಜಿಯೆಂಬ ಭಾವನೆ ಸತ್ತರೂ ತಪ್ಪುವಹಾಗಿಲ್ಲ. ನಿರಾಸೆ-ಯಿಂದ ಪಾತ್ರೆಯನ್ನು ಕೆಳಗೆ ಕುಕ್ಕಿ ಹೊರಗೆ ಬಂದಿದ್ದ. ಪಾತ್ರೆ ಹಾಳಾದರೆ ಆಯಿತು. ಅನ್ನವಿಲ್ಲದೆ ಹೋದಮೇಲೆ ಪಾತ್ರೆ ಇದ್ದರೆಷ್ಟು ಬಿಟ್ಟರೆಷ್ಟು? ರಾಜು ಹೊರಗೆ ಬಂದು ಚಾಪೆಯ ಮೇಲೆ ಕುಳಿತಾಗ ವೇಲನ್ ಭಕ್ತಿಯಿಂದ

ಕೈಜೋಡಿಸಿ ಕೇಳಿಸಿದ—

"ಏನು ಸ್ವಾಮೀಜಿ, ಏನೋ ಸದ್ದಾಯಿತಲ್ಲ ?"

"ಖಾಲಿ ಪಾತ್ರೆ. ತುಂಬಿದ ಕೊಡ ತುಳುಕುವುದಿಲ್ಲ ಅಂತ ಕೇಳಿಲ್ಲವೆ ? ಕೊಡ ತುಂಬಿರಲಿಲ್ಲ. ಅದಕ್ಕೆ ಅಷ್ಟು ಸದ್ದು."

ವೇಲನ್ ಮೃದುವಾಗಿ ನಕ್ಕು ಹೇಳಿದ "ಏನ್ ಗುರು, ಆ ನಿಮ್ಮ ಪುಟ್ಟ ತಲೇಲಿ ಎಷ್ಟೊಂದು ವೇದಾಂತ ತುಂಬಿಟ್ಟುಕೊಂಡಿದೀರಿ ?"

ರಾಜುವಿಗೆ ಏನು ಹೇಳಬೇಕೋ ತಿಳಿಯದಾಯಿತು. ಅವನನ್ನು ದುರುಗುಟ್ಟಿಕೊಂಡು ನೋಡಿದ. ಈ ಒಬ್ಬನಿಂದ ಇಷ್ಟೆಲ್ಲ ಪ್ರಮಾದ. ಇಷ್ಟೆಲ್ಲ ತಾಪತ್ರಯ. ತನ್ನ ಪಾಡಿಗೆ ತಾನು ಹೊರಟುಹೋಗಬಾರದೆ? ಅವನು ಆ ನದಿ ದಾಟಿ ಹೋಗುವಾಗ ಮೊಸಳೆಯ ಬಾಯಿಗೆ ಸಿಕ್ಕಿಬಿಟ್ಟಿರಬಾರದಾಗಿತ್ತೆ ? ಆದರೆ ಆ ಬಡಪ್ರಾಣಿ ಯಮಲೋಕಕ್ಕೆ ಹೊರಟುಹೋಗಿತ್ತು. ಅದರ ಹೊಟ್ಟೆ ಸೀಳಿದಾಗ ಹತ್ತುಸಾವಿರ ರೂಪಾಯಿಯಷ್ಟು ಒಡವೆ ಸಿಕ್ಕಿತಂತೆ. ಅಬ್ಬ ! ಹಾಗಾದರೆ ಆ ಮೊಸಳೆ ಬರೀ ಹೆಂಗಸರನ್ನೇ ನುಂಗುತ್ತಿತ್ತೆ ? ಇಲ್ಲ, ಗಂಡುಸರ ನಶ್ಯದ ಡಬ್ಬಿಗಳೂ, ಕಡಕುಗಳೂ ಸಿಕ್ಕಿದುವಂತೆ. ಇದೆಲ್ಲ ಯಾರಿಗೆ ಸೇರ-ತಕ್ಕದ್ದು ? ಹಳ್ಳಿಗರು ಬಾಯೇ ಬಿಡಲಿಲ್ಲ. ಸರಕಾರಕ್ಕೆ ತಿಳಿದು ಎಲ್ಲಿ ಹತ್ತು-ಸಾವಿರ ರೂಪಾಯಿ ಅವರ ಬೊಕ್ಕಸದೊಳಗೆ ಹೋಗಿಬಿಡುತ್ತದೋ ಎಂಬ ಯೋಚನೆ. ಅದನ್ನು ಸೀಳಿದವನಿಗೆ ಲಕ್ಷ್ಮಿಯ ಕೃಪಾಕಟಾಕ್ಷವೇ ಒದಗಿದರೂ ಅದನ್ನು ಹೊರಗೆ ಬಿಡದೆ ಏನೋ ಹಾಳು-ಮಾಳು ಸಿಕ್ಕಿತೆಂದು ಬಿಟ್ಟಿದ್ದರು. ಅವನಿಗೆ ದುಡ್ಡಿನ ಸಮಸ್ಯೆಯೇ ಇಲ್ಲ. ಆ ಮೊಸಳೆಯ ಹೊಟ್ಟೆ ಸೀಳೆಂದು ಅವನಿಗೆ ಯಾರು ಹೇಳಿದರು ? ಹೇಳೋದಕ್ಕೂ ಕೇಳೋದಕ್ಕೂ ಅದು ಸಮಯವಲ್ಲ.

ಸ್ವಾಮೀಜಿಗೆ ಗಾಳಿಬೀಸುತ್ತ ವೇಲನ್ ನಿದ್ದೆಹೋಗಿದ್ದ. ಕೈಯಲ್ಲಿ ಬೀಸಣಿಕೆ. ಅವನನ್ನು ನೋಡುತ್ತ ನೋಡುತ್ತ ರಾಜುವಿಗೆ ಕರುಣೆ ಉಕ್ಕಿ-ಬಂತು. ತನ್ನ ತಪಸ್ಸನ್ನು ನಿರ್ವಿಘ್ನವಾಗಿಡುವುದಕ್ಕಾಗಿ ಈ ಹಳ್ಳಿಗ ಎಷ್ಟು ಕಷ್ಟಪಡುತ್ತಿದ್ದ. ಈ ಹಾಳು ಊಟ ಇಲ್ಲದಿದ್ದರೆ ಏನು ಎನಿಸಿತು ಅವನಿಗೆ.

"ಇನ್ನೊಂದು ಹತ್ತು ದಿನ ಊಟ–ತಿಂಡಿಯ ಯೋಚನೆ ಮಾಡೋಲ್ಲ" ಎಂದು ರಾಜು ಶಪಥ ಮಾಡಿದನು.

ಮನಸ್ಸಿನಲ್ಲೇ ಮಾಡಿದ ಈ ಶಪಥ ಅವನಿಗೆ ಅಪೂರ್ವ ಶಕ್ತಿಯನ್ನು ಕೊಟ್ಟಿತು. ಊಟವನ್ನು ಬಿಡುವುದರಿಂದ ಈ ಹಳ್ಳಿಯ ಗಿಡಗಳು ಚಿಗುರುವುದಾದರೆ, ಹುಲ್ಲು ಹಸಿರಾಗುವುದಾದರೆ........ನದಿಯಲ್ಲಿ ನೀರು ತುಂಬಿ ಹರಿಯುವುದಾದರೆ ಊಟವನ್ನು ಬಿಡಬಾರದೇಕೆ ? ಅವನ ಜೀವನದಲ್ಲೇ ಮನಃಪೂರ್ವಕವಾಗಿ ರಾಜು ಇಂತಹ ಪ್ರಯತ್ನ ಮಾಡಿದ್ದನು. ಹಣ ಮತ್ತು ಹೆಣ್ಣನ್ನು ಬಿಟ್ಟು ಮೂರನೆಯ ವಿಷಯದಲ್ಲಿ ರಾಜುವಿಗೆ ಇಂತಹ ಉತ್ಸಾಹ ಎಂದೂ ಬಂದಿರಲಿಲ್ಲ. ನಾಲ್ಕನೆಯ ದಿನದ ಉಪವಾಸ ಅವನಿಗೆ ಹೊಸ ಚೈತನ್ಯವನ್ನು ತಂದುಕೊಟ್ಟಿತು. ಉಪವಾಸವಿದ್ದುದರಿಂದ ನೀರಿನಲ್ಲಿ ನಿಂತಾಗ ಅವನಿಗೆ ನಿಂತಲ್ಲಿ ನಿಂತಿರದೆ ತೇಲಿಕೊಂಡು ಹೋಗುತ್ತಿರುವ ಹಾಗಾಯಿತು. ಆದರೆ ಅದೊಂದು ಮರೆಯಲಾಗದಂತಹ ಅಪೂರ್ವ ಅನುಭವ....ವೇಲನ್ ತನ್ನಿಂದ ಏನನ್ನೋ ಕಸಿದುಕೊಂಡರೂ ಈ ಅನುಭವದ ಸುಖವನ್ನು ಮಾತ್ರ ಕಸಿದುಕೊಳ್ಳಲಾರ.

ರಾಜುವಿಗೆ ತನ್ನ ಸುತ್ತ ಸೇರಿದ್ದ ಗುಂಪಿನ ಅರಿವು ಆಗುತ್ತಿರಲಿಲ್ಲ. ಆದರೆ ಆ ಗುಂಪಿಗೆ ಅವನನ್ನು ಬಿಟ್ಟರೆ ಬೇರೆಯದರ ಪರಿವೆಯೇ ಇರುತ್ತಿರಲಿಲ್ಲ. ಊರು ತಿರುಗಲು ಬಂದ ಪತ್ರಿಕಾ ಪ್ರತಿನಿಧಿಯ ಲೇಖನಿ ಈ ಪವಾಡವನ್ನು ಬಣ್ಣಬಣ್ಣವಾಗಿ ವರ್ಣಿಸಿತ್ತು. ರೈಲಿನ ತುಂಬ ಜನ. ಮಂಗಲದ ಪವಾಡಪುರುಷನನ್ನು ನೋಡಲು ವಿಶೇಷ ರೈಲು–ಬಸ್ಸುಗಳ ಏರ್ಪಾಡಾಯಿತು. ಗಫೂರನ ಟ್ಯಾಕ್ಸಿ ದಿನಕ್ಕೆ ಹತ್ತು ಸಲ ತಿರುಗಾಡಿತು. ನದಿಯ ತೀರವೆಲ್ಲ ಜನಮಯವಾಯಿತು.

ಎಂದೂ ಜನಜಾತ್ರೆ ಹೀಗೆ ಸೇರಿರಲಿಲ್ಲ. ಇಂತಹ ಜಾತ್ರೆಯೆಂದ ಮೇಲೆ ಅಂಗಡಿಗಳಿಲ್ಲದಿದ್ದರೆ ಆಗುತ್ತೆಯೇ ? ನದಿಯ ತೀರದಲ್ಲಿ ಸಣ್ಣಪುಟ್ಟ ಅಂಗಡಿಗಳು ಹತ್ತಾರು ಹುಟ್ಟಿಕೊಂಡವು. ಸೋಡಾ ಸೀಸೆಗಳು, ಬಾಳೇಹಣ್ಣಿನ ಗೊನೆಗಳು, ಚಾಕಲೇಟು........ಜೊತೆಗೆ ಕಾಫಿ ಕುಡಿಯುವ ಜನರನ್ನು ಕುರಿತು ಟೀ ಬೋರ್ಡಿನವರ ಪ್ರಚಾರ ಬೇರೆ. ಮಂಟಪದ ಗೋಡೆಯ ಮೇಲೆಲ್ಲ ಅವರ ಪ್ರಚಾರ ಚಿತ್ರಗಳೇ. ಅಲ್ಲೇ ಟೀ ಪೊಟ್ಟಣವನ್ನು ಕೊಂಡುಕೊಳ್ಳುವವರಿಗಾಗಿ ಒಂದು ಲೋಟ ಬಿಟ್ಟಿ ಟೀ. ಜನ ಅದರ ಸುತ್ತಲೂ ನೊಣದಹಾಗೆ ಮುತ್ತಿದರು. ನೊಣಗಳು ಅವರನ್ನು ಮುತ್ತಿದವು. ಆರೋ-

ಗ್ಯಾಧಿಕಾರಿಗಳ ಕಡೆಯವರು ಬಂದು ಜಾತ್ರೆಯಲ್ಲಿ ಸಾಂಕ್ರಾಮಿಕ ರೋಗ ಹರಡದಿರುವುದಕ್ಕಾಗಿ ಸೂಜಿಮದ್ದು ಚುಚ್ಚಿದ್ದೇ ಚುಚ್ಚಿದ್ದು. ಮಧ್ಯದ-ಲ್ಲೊಂದು ಕಡೆ ಯುವಕ ಪೈಲ್ವಾನರ ಕುಸ್ತಿ. ಅವರ ಸುತ್ತಲೂ ಸಾವಿರಾರು ಜನ. ಮಂಟಪದ ಗೋಡೆಯನ್ನುಪಯೋಗಿಸಿಕೊಂಡು ವಿದ್ಯಾ ಇಲಾಖೆ-ಯವರಿಂದ ಚಲನಚಿತ್ರ ಪ್ರದರ್ಶನ ಬೇರೆ. ಜನ ಅಲ್ಲಿಗೆ ಬರಲು ಗ್ರಾಮೋ-ಫೋನಿನಲ್ಲಿ ಚಿತ್ರಸಂಗೀತ. ಆ ಚಿತ್ರಪ್ರದರ್ಶನದಲ್ಲಿ ಮಲೇರಿಯಾ ರೋಗಕ್ಕೆ ಕಾರಣವಾದ ಸೊಳ್ಳೆಯನ್ನು ಮಾತ್ರ ದೊಡ್ಡದಾಗಿ ತೋರಿಸಿದಾಗ ಒಬ್ಬ ರೈತ—

"ಎಷ್ಟು ಭಾರಿ ಸೊಳ್ಳೆಯಪ್ಪ, ಇನ್ನು ರೋಗ ಬರದೆ ಏನಾಗುತ್ತೆ ಈ ದೇಶಗಳಲ್ಲಿ ? ಆದರೆ ನಮ್ಮೂರಿನ ಸೊಳ್ಳೆಗಳು ಪುಟ್ಟಪುಟ್ಟವು. ಇವು ಕಚ್ಚಿದರೆ ಏನೂ ಆಗೋಲ್ಲ" ಎಂದನಂತೆ. ಇದರ ಎದುರಿಗೆ ಒಂದು ಮೆರಿ-ಗೇ-ರೌಂಡ್........ಅದರ ಶಬ್ದವೇ ಶಬ್ದ........ಗಾಳಿಯಲ್ಲಿ ಬೆಲೂನುಗಳ ಹಾರಾಟ, ಬಡೆದಾಟ, ಮಕ್ಕಳ ಚೀರಾಟ........

ಆದರೆ ದೊಡ್ಡದೊಂದು ಗುಂಪು ಸ್ವಾಮೀಜಿಯ ಸುತ್ತಲೂ ನಿಂತು ಭಕ್ತಿಯಿಂದ ನೋಡುತ್ತಿತ್ತು. ಸ್ವಾಮೀಜಿಯ ಕಾಲಿನ ಬಳಿಯಿದ್ದ ನೀರನ್ನು ಜನ ಮುಟ್ಟಿ ಕಣ್ಣಿಗೊತ್ತಿಕೊಳ್ಳುತ್ತಿದ್ದರು. ಅವರನ್ನು ಅಲ್ಲಿಂದ ಹೊರಡಿಸಬೇಕಾ-ದರೆ ವೇಲನ್‌ನಿಗೆ ಸಾಕುಸಾಕಾಗಿತ್ತು. "ದಯಮಾಡಿ ಹೊರಡಿ ಸ್ವಾಮಿ, ಗುರುವಿನ ದರ್ಶನ ಮಾಡಾಗಿದ್ದರೆ ಹೊರಟುಬಿಡಿ, ಬಾಕಿಯವರಿಗೂ ನೋಡ-ಬೇಕೋ ಇಲ್ಲವೊ....?" ಜನ ಅಲ್ಲಿಂದ ಹೊರಟು ಜಾತ್ರೆಯ ಉತ್ಸವದಲ್ಲಿ ಲೀನವಾಗುತ್ತಿದ್ದರು.

ಸ್ವಾಮೀಜಿ ಮಂಟಪದೊಳಗೆ ಬಂದು ಮಲಗಿದಾಗ ಮತ್ತೆ ಚಾಪೆಯ ಸುತ್ತಲೂ ಗುಂಪು. ಅಲ್ಲಿಂದಲೂ ವೇಲನ್ ಅವರನ್ನು ಓಡಿಸಬೇಕಾಗು-ತ್ತಿತ್ತು. ಕೆಲವರು ಹಿರಿಯರು ಮಾತ್ರ ಸ್ವಾಮೀಜಿಯ ಚಾಪೆಯ ಮೇಲೆ ಕುಳಿತಿರುತ್ತಿದ್ದರು. ಅಂತಹವರಲ್ಲಿ ಊರಿನ ಮೇಷ್ಟ್ರರೂ ಒಬ್ಬರು. ಸ್ವಾಮೀಜಿ-ಯವರ ಉಪವಾಸ ವ್ರತವು ಸಾಂಗವಾಗಬೇಕಾಗುವ ಹಾಗೆ ಕಳುಹಿಸಿದ ನೂರಾರು ತಂತಿ-ಟಪಾಲೆಲ್ಲ ಅವರ ಬಳಿ ಶೇಖರವಾಗುತ್ತಿತ್ತು. ಸಾಮಾನ್ಯ ದಿನಗಳಲ್ಲಾದರೆ ತಂತಿ ಬರುವುದಕ್ಕೆ ಎಷ್ಟೋ ದಿನ ಬೇಕಾಗುತ್ತಿತ್ತು.

ಮಂಗಲದ ಪಕ್ಕದಲ್ಲಿದ್ದ ಸ್ವಲ್ಪ ದೊಡ್ಡ ಹಳ್ಳಿ ಅರುಣದಲ್ಲಿ ತಂತಿ ಕಚೇರಿಯು ಮಂಗಲದ ವರೆಗೂ ತಂತಿ ಸಮಾಚಾರವನ್ನು ಕಳುಹಿಸುತ್ತಿತ್ತು. ಆದರೆ ಈಗ ಆ ಕಚೇರಿಗೆ ಬಿಡುವೇ ಇಲ್ಲ. ಮಂಗಲಕ್ಕೆ ಬರುವ ತಂತಿಗಳೂ.... ಮಂಗಲದಿಂದ ಪತ್ರಿಕಾ ಪ್ರತಿನಿಧಿಗಳು ಕಳುಹಿಸುವ ತಂತಿಗಳೂ....ಲೆಕ್ಕಾಚಾರವೇ ಇಲ್ಲ. ಒಬ್ಬೊಬ್ಬ ಪ್ರತಿನಿಧಿ ಕಳುಹಿಸುವ ತಂತಿಯೂ 'ಅರ್ಜೆಂಟ್' ತಂತಿಯೇ. ಅಂಚೆಕಚೇರಿಯ ಕಿಟಕಿ-ಬಾಗಿಲುಗಳು ಎಲ್ಲಿ ಮುರಿದುಹೋಗುತ್ತವೆಯೋ ಎನ್ನುವ ಸ್ಥಿತಿ ಬಂದಿತ್ತು.

ಕಚೇರಿಯ ಮಾಸ್ಟರ ಗತಿ ಬೇಡ. "ಪ್ರೆಸ್ ಅರ್ಜೆಂಟ್....ಪ್ರೆಸ್.... ಅರ್ಜೆಂಟ್...." ಪಾಪ, ಅವನು ಮಕ್ಕಳಿಗೆ ಸ್ವಾಮೀಜಿಯವರನ್ನು ತೋರಿಸುವುದಾಗಿ ಮಾತುಕೊಟ್ಟಿದ್ದನಂತೆ. ಹಾಗೇ ಅಲ್ಲಿ ತೋರಿಸುತ್ತಾ ಅಲಿಬಾಬನ ಚಿತ್ರವನ್ನು ನೋಡಿಬರಬಹುದೆಂದುಕೊಂಡಿದ್ದ. ಮಕ್ಕಳಿಗೆ ಎಂತಹ ನಿರಾಸೆ! ಬಿಡುವಿದ್ದರೆ ತಾನೆ? ಉಸಿರಾಡಲೂ ಅವಕಾಶವಿಲ್ಲದಿರೋವಾಗ ಬಿಡುವೆಲ್ಲಿ ಬಂತು? ಆತನೂ ತನ್ನ ಅಧಿಕಾರಿಗಳಿಗೆ ತಂತಿ ಕಳುಹಿಸಿದ "ದಿನಕ್ಕೆ ಇನ್ನೂರು ತಂತಿ ಕಳುಹಿಸುತ್ತ ಇದ್ದೇನೆ, ಬಿಡುವು ಬೇಕು."

ರಸ್ತೆಗಳ ತುಂಬ ವಾಹನಗಳೇ. ಕಾರು, ಜಟಕ, ಸೈಕಲ್ಲು, ಬಸ್ಸು, ಜೀಪು, ಲಾರಿ........ನಡೆದುಬರುವವರ ಗತಿ ದೇವರೇ ಗತಿ. ಕೆಲವರು ಸ್ವಾಮೀಜಿಯವರ ಬಳಿ ಕುಳಿತು ತಾಳ-ಮೇಳದೊಡನೆ ಭಜನೆಗೆ ಬೇರೆ ಆರಂಭಿಸಿಬಿಟ್ಟಿದ್ದರು.

ಅವರಲ್ಲೆಲ್ಲ ಅತಿ ಸಂಭ್ರಮದಿಂದ ಓಡಾಡುತ್ತಿದ್ದವನು ಒಬ್ಬ ಅಮೇರಿಕದ ಮಹಾಶಯ. ಕಾರ್ಡುರಾಯ್ ಷರಾಯಿನ ಮೇಲೆ ತೆಳ್ಳನೆಯ ಬುಷ್-ಷರ್ಟು. ಜೀಪು ಅವನ ವಾಹನ. ಬರೀ ಧೂಳು ತುಂಬಿದ ಕೆದರಿದ ತಲೆಗೂದಲು. ಮಂಗಲಕ್ಕೆ ಬಂದಿಳಿದಾಗ ಸುಮಾರು ಒಂದು ಘಂಟೆ. ಅಂದು ಉಪವಾಸದ ಹತ್ತನೆಯ ದಿನ. ಮದರಾಸಿನಲ್ಲಿ ಒಬ್ಬ ದುಭಾಷಿಯನ್ನು ಕರೆದುಕೊಂಡು ಮುನ್ನೂರ ಎಪ್ಪತ್ತೈದು ಮೈಲು ಒಂದೇಸಮನೆ ಹೊರಟು ಬಂದಿದ್ದನು.

"ಇನ್ನು ಸ್ವಲ್ಪ ಹೊತ್ತು ಮಾತಾಡೋಣ. ಆಗಬಹುದು ಅಲ್ಲವೇ....? ಈಗ ನೋಡಿ ಸ್ವಾಮೀಜಿ....ಇದು ನಿಮಗೆ ಇಷ್ಟವೊ....ಈ ಉಪವಾಸ?"

" ಇಷ್ಟವೋ ಅನಿಷ್ಟವೋ ಅದೆಲ್ಲ ಮುಖ್ಯವಲ್ಲ. ಮಾಡೋದು ನನ್ನ ಕರ್ತವ್ಯ. ಮಾಡುತ್ತ ಇದೀನಿ."

" ಎಷ್ಟು ದಿನದಿಂದ ಉಪವಾಸ ?

" ಹತ್ತು ದಿನದಿಂದ."

" ನಿಶ್ಶಕ್ತಿ ಕಾಣಿಸುತ್ತದೆಯೇ ?

" ಹೌದು."

" ಯಾವಾಗ ಉಪವಾಸ ಮುಗಿಸುತ್ತೀರಿ ?"

" ಹನ್ನೆರಡನೇ ದಿನ."

" ಅಷ್ಟುಹೊತ್ತಿಗೆ ಮಳೆ ಬರುತ್ತದೆಯೇ ?"

" ಯಾಕೆ ಬರಬಾರದು ?

" ಉಪವಾಸದಿಂದ ಪ್ರಪಂಚದಲ್ಲಿ ಶಾಂತಿಸ್ಥಾಪನೆ ಸಾಧ್ಯವೇ ?"

" ಸಾಧ್ಯ."

" ಪ್ರತಿಯೊಬ್ಬರೂ ಉಪವಾಸ ಮಾಡಬೇಕೆಂದು ನಿಮ್ಮ ಅಭಿಪ್ರಾಯವೇ ?"

" ಹೌದು."

" ನಿಮ್ಮ ಹಿಂದಿನ ಜೀವನದ ವಿಚಾರ ಸ್ವಲ್ಪ ಹೇಳುತ್ತೀರಾ ?"

" ಏನು ಹೇಳಬೇಕು ?".

" ಏನು ಅಂದರೆ.......ಅಂದರೆ........ಈಗ........ನೀವು ಯಾವಾಗಲೂ 'ಯೋಗಿ'ಯ ಹಾಗೆ ಇದ್ದೀರಾ ?"

" ಹೌದು........ಹೆಚ್ಚುಕಡಿಮೆ........"

ಸ್ವಾಮೀಜಿಗೆ ಹೀಗೆ ಒಟ್ಟಿಗೆ ಮಾತಾಡುವುದು ಅಸಾಧ್ಯವಾಯಿತು. ಅಲ್ಲಿದ್ದವರಿಗೆ ಕಳವಳವಾಯಿತು. ಮೇಷ್ಟ್ರು ಇನ್ನು ಸುಮ್ಮನಿರುವುದು ಸರಿಯಲ್ಲವೆಂದುಕೊಂಡು—

" ಸ್ವಾಮೀಜಿಯವರಿಗೆ ಆಯಾಸವಾಗಿದೆ " ಎಂದರು.

ಸ್ವಾಮೀಜಿ ಕಣ್ಣುಮುಚ್ಚಿ ಮಲಗಿದರು. ಸರಕಾರದಿಂದ ನಿಯೋಜಿತರಾಗಿ ಬಂದಿದ್ದ ಒಬ್ಬಿಬ್ಬರು ವೈದ್ಯರು ಸ್ವಾಮೀಜಿಯವರ ಬಳಿ ಬಂದು ನಾಡಿ ಹಿಡಿದು ನೋಡಿದರು. ವೇಲನ್ ಎಂದಿಗಿಂತ ಜೋರಾಗಿ ಗಾಳಿ ಬೀಸಿದನು.

ಅವನ ಮುಖದ ಮೇಲೆ ಚಿಂತೆ.

ಅವನು ಬಂದಮೇಲೆ ಆ ನಾಟಕರಂಗದ ಸೂತ್ರಧಾರಿಯೇ ಅವನು. ಜೀಪಿನಿಂದ ಧುಮುಕಿದವನೇ ಒಂದೇ ನೆಗೆತಕ್ಕೆ ಮಂಟಪವನ್ನು ಹೊಕ್ಕನು. ಸ್ವಾಮೀಜಿಯ ಬಳಿಗೆ ಹೋಗಿ ಕೈಜೋಡಿಸಿ 'ನಮಸ್ತೆ' ಎಂದನು. ಭಾರತಕ್ಕೆ ಬಂದಿಳಿದ ಮೊದಲನೇ ದಿನವೇ ಕಲಿತ ಪದ ಅದು. ಆರೂವರೆ ಅಡಿ ಉದ್ದದ ಆ ಕೆಂಪನೆಯ ವ್ಯಕ್ತಿಯನ್ನು ನೋಡಿ ಶಕ್ತಿ ಉಡುಗಿದ ರಾಜುವಿನ ಕಣ್ಣು ಹೊಸದನ್ನು ಗುರುತಿಸಿತು.

ಅಮೇರಿಕದವನು ಚಾಪೆಯ ಮೇಲೆ ಕುಳಿತಿದ್ದ ಮೇಷ್ಟ್ರರ ಕಡೆ ಬಗ್ಗಿ "ನಾನು ಅವರ ಹತ್ತಿರ ಇಂಗ್ಲೀಷಿನಲ್ಲಿ ಮಾತಾಡಲೇ ?" ಎಂದನು.

"ಮಾತಾಡಿ, ಅವರಿಗೆ ಇಂಗ್ಲೀಷ್ ಬರುತ್ತೆ."

ಕಷ್ಟಪಟ್ಟು ಆ ಆರಡಿ ಮನುಷ್ಯ ಚಾಪೆಯ ಮೇಲೆ ಪದ್ಮಾಸನ ಹಾಕಿ ಕುಳಿತು ಬಗ್ಗಿ ರಾಜುವಿನ ಕಿವಿಯಲ್ಲಿ ಹೇಳಿದನು.

"ನಾನು ಜೇಮ್ಸ್ ಜೆ. ಮೆಲೋನ್. ಕ್ಯಾಲಿಫೋರ್ನಿಯಾದಿಂದ ಬಂದಿದೀನಿ. ಚಿತ್ರೋದ್ಯಮಿ. ಟಿ. ವಿ. ನಲ್ಲೂ ಇದೀನಿ. ಈ ನಿಮ್ಮ ಉಪವಾಸದ ಚಿತ್ರಗಳನ್ನು ತೆಗೆದುಕೊಂಡು ನಮ್ಮ ದೇಶಕ್ಕೆ ಹೋಗುತ್ತೇನೆ. ಇದಕ್ಕೋಸ್ಕರ ದೆಹಲಿಯಿಂದ ಅಪ್ಪಣೆ ಪಡೆದು ಬಂದಿದೀನಿ. ಚೀಟಿ ನನ್ನ ಜೇಬಿನಲ್ಲಿದೆ ಆಗಬಹುದೇ ?"

ರಾಜು ಒಂದು ನಿಮಿಷ ಯೋಚಿಸಿ ತಲೆಯಾಡಿಸಿದನು. "ಬಹಳ ಥ್ಯಾಂಕ್ಸ್. ನಿಮಗೆ ತೊಂದರೆ ಮಾಡೋಲ್ಲ. ಸ್ವಲ್ಪ ದೀಪ–ಗೀಪ ಹಾಕಬೇಕಾಗುತ್ತೆ. ತೊಂದರೆಯಾಗುತ್ತೆಯೇ ?"

"ಇಲ್ಲ, ಮಾಡಿ" ಎಂದನು ರಾಜು.

ಆಗ ನೋಡಬೇಕು ಅವನ ಸಂಭ್ರಮ........ಓಡಾಟ. ಟ್ರೈಲರನ್ನು ಹೊರಗೆಳೆದು ಜನರೇಟರನ್ನು ಹಾಕಿದನು. ಅದರ ಶಬ್ದದಿಂದ ಆ ಸ್ಥಳವೆಲ್ಲ ಮಿಡಿಯಿತು. ಅದನ್ನು ನೋಡಲು ಹೊರಗಿದ್ದ ಜನವೆಲ್ಲ ಬಂದುಬಿಟ್ಟರು. ಅವರನ್ನೆಲ್ಲ ಹೊರಗಟ್ಟಲು ಮೇಲನ್‌ನು ಪಟ್ಟ ಪಾಡು ದೇವರಿಗೇ ಪ್ರೀತಿ. ಮೇಲನ್ ಇದಾವುದನ್ನೂ ಗಮನಿಸದವನ ಹಾಗೆ ತನ್ನ ಕೆಲಸದಲ್ಲಿ ನಿರತನಾಗಿದ್ದನು. ಜನರ, ದೇವಾಲಯದ, ಸ್ವಾಮೀಜಿಯ ವಿವಿಧ ಚಿತ್ರಗಳು

ಅವನದಾದವು.

" ದೀಪ ಬಹಳ ಜಾಸ್ತಿಯಾಗಿದೆಯೇ? ಕ್ಷಮಿಸಿ.... "

ಚಿತ್ರಗಳನ್ನು ತೆಗೆದಾದ ಮೇಲೆ ಮೆಲೋನ್ ಧ್ವನಿವರ್ಧಕವೊಂದನ್ನು ತಂದು ಸ್ವಾಮೀಜಿಯವರ ಬಾಯಿಹತ್ತಿರವಿಟ್ಟನು.

ಸ್ಪಷ್ಟವಾಗಿ ಎದ್ದು ಕಾಣುತ್ತಿತ್ತು. ವೇಲನ್ ಸ್ವಾಮೀಜಿಯವರ ಜೊತೆ ತಾನೂ ಉಪವಾಸ ಮಾಡುತ್ತಿದ್ದನು. ದಿನ ಬಿಟ್ಟು ದಿನ, ಒಂದಿಷ್ಟು ಸೊಪ್ಪು-ಸದೆ.

" ಇನ್ನೂ ಒಂದು ದಿನ ಇದೆಯಲ್ಲ ಮೇಷ್ಟ್ರೇ....ಗುರು ಹೇಗೆ ತಡೆದು-ಕೊಳ್ಳುತ್ತಾರೋ ನಾನು ಕಾಣೆ........"

ಮೆಲೋನ್ ಕಾಯುತ್ತ ನಿಂತಿದ್ದರು.

" ಏನು ಡಾಕ್ಟರೇ ಹೇಗಿದಾರೆ? "

" ದೇಹಸ್ಥಿತಿ ತುಂಬಾ ಕೆಟ್ಟಿದೆ. ರಕ್ತದ ಒತ್ತಡ ತುಂಬ ಜಾಸ್ತಿ-ಯಿದೆ. ಮೂತ್ರಕೋಶ ಸರಿಯಾಗಿ ಕೆಲಸ ಮಾಡುತ್ತಿಲ್ಲ. ಸ್ವಲ್ಪ ಗ್ಲೂಕೋಸ ಸೆಲೈನು ಕೊಡೋಕೆ ಪ್ರಯತ್ನಿಸುತ್ತ ಇದೀವಿ. ಇವರು ದೇಶದ ಸಂಪತ್ತು. "

" ಅವರ ದೇಪಸ್ಥಿತಿಯ ವಿಚಾರ ಏನಾದರೂ ಹೇಳುತ್ತೀರಾ? " ಎಂದು ಮೆಲೋನ್ ತನ್ನ ಧ್ವನಿವರ್ಧಕವನ್ನು ಅವರ ಬಾಯಿಯ ಹತ್ತಿರ ಹಿಡಿದನು. ಮಂಟಪದ ಬಾಗಿಲಿನಲ್ಲಿದ್ದ ಕಲ್ಲಿನ ಆನೆಯ ತಲೆ ಅವನ ಆಸನ.

ವೈದ್ಯರು ಒಬ್ಬರ ಮುಖ ಒಬ್ಬರು ನೋಡಿಕೊಂಡರು.

" ಕ್ಷಮಿಸಿ, ನಾವು ಸರಕಾರಿ ನೌಕರರು. ಸರಕಾರದ ಒಪ್ಪಿಗೆಯಿಲ್ಲದೆ ಏನೂ ಹೇಳೋದಕ್ಕಾಗುವುದಿಲ್ಲ. ನಾವು ಏನು ಹೇಳಿದರೂ ಅದು ಸರಕಾರ-ದಿಂದ ಪ್ರಕಟವಾಗಬೇಕು. ಆದನ್ನು ನೇರವಾಗಿ ನಿಮಗೆ ಹೇಳೋದಕ್ಕಾಗೋ-ದಿಲ್ಲ........ಕ್ಷಮಿಸಿ. "

" ಆಗಲಿ ಪರವಾಗಿಲ್ಲ........ನಿಮ್ಮ ಪದ್ಧತಿಗೆ ಎದುರು ಬರೋದಿಲ್ಲ. " ಎಂದು ಮೆಲೋನ್ ಕೈಗಡಿಯಾರ ನೋಡಿಕೊಂಡನು.

" ಸರಿ, ಹಾಗಾದರೆ ಇವತ್ತಿಗೆ ಇಷ್ಟೇ ಅಂತ ಕಾಣುತ್ತೆ........"

ಮೆಲೋನ್ ಸ್ಕೂಲ್ ಮೇಷ್ಟ್ರರ ಹತ್ತಿರ ಹೋಗಿ—

" ನಾಳೆ ಸ್ವಾಮೀಜಿ ಎಷ್ಟುಹೊತ್ತಿಗೆ ನದಿಗಿಳಿಯುತ್ತಾರೆ? " ಎಂದನು.

“ ಬೆಳಿಗ್ಗೆ ಆರು ಘಂಟೆಗೆ. ”

“ ಸ್ವಲ್ಪ ಬಂದು ಯಾವ ಜಾಗದಲ್ಲಿ ಅಂತ ತೋರಿಸುತ್ತೀರಾ ? ”

ಮೇಷ್ಟ್ರು ಎದ್ದು ಅವನ ಜೊತೆಗೆ ಹೋದರು.

“ ಇರಿ, ಇರಿ ಹಾಗಲ್ಲ. ದಯವಿಟ್ಟು ಸ್ವಾಮೀಜಿ ಹೇಗೆ, ಎಲ್ಲಿಂದ ಶುರು ಮಾಡುತ್ತಾರೆ? ಹೇಗೆ ಹೋಗುತ್ತಾರೆ? ಹೇಗೆ ಕೈಮುಗಿಯುತ್ತಾರೆ ಅಂತ ಸ್ವಲ್ಪ ತೋರಿಸಿಬಿಡಿ. ”

ಸ್ವಾಮೀಜಿಯಂತೆ ತಾನು ಮಾಡಲು ಮೇಷ್ಟ್ರರು ಹಿಂದು–ಮುಂದು ನೋಡಿದರು.

“ ಬನ್ನಿ ಪರವಾಗಿಲ್ಲ. ಬನ್ನಿ ಒಂದು ನಿಮಿಷ ಅಷ್ಟೆ. ಏನಾದರೂ ತೊಂದರೆಯಾದರೆ ನಾನು ನೋಡಿಕೋತೇನಿ. ”

ಮೇಷ್ಟ್ರರು ಸ್ವಾಮೀಜಿ ಹೇಗೆ ಹೋಗುತ್ತಾರೆ, ಎಲ್ಲಿ ನಿಲ್ಲುತ್ತಾರೆ.... ಎನ್ನುವುದನ್ನು ತೋರಿಸಿದರು. ಜನ ಅವರನ್ನು ಹಿಂಬಾಲಿಸಿ—

“ ಹೋ, ಹೋ ಮೇಷ್ಟ್ರರೂ ತಪಸ್ಸು ಮಾಡುತ್ತಾರಪ್ಪಾ, ತಪಸ್ಸು ” ಎಂದು ಕೇಕೆ ಹಾಕಿ ನಕ್ಕರು.

ಅವರು ಏನು ಹೇಳಿದರೆಂದು ತಿಳಿಯದಿದ್ದರೂ ಮೆಲೋನ್ ಅವರ ಕಡೆ ನೋಡಿ ಮುಗುಳುನಕ್ಕನು. ಆ ಸ್ಥಳವನ್ನು ನೂರಾರು ಕಡೆಯಿಂದ ನೋಡಿ ಅಳತೆ ಮಾಡಿ, ಮೇಷ್ಟ್ರರ ಕೈಕುಲುಕಿ ಹೊರಟನು.

“ ನಾಳೆ ಬೆಳಿಗ್ಗೆ........ ” ಅವನ ಜೀಪು ಹಳ್ಳ–ಕೊಳ್ಳಗಳ ಮಧ್ಯೆ ನುಗ್ಗಿ ರಸ್ತೆಯನ್ನು ಸೇರಿತು.

ಹನ್ನೊಂದನೆಯ ದಿನ....ಕಡೆಯ ದಿನ....ಊರಿಗೆ ಊರೇ ಮಂಟಪ-ದಲ್ಲಿ ಸೇರಿತ್ತು. ರಾತ್ರಿಯೆಲ್ಲ ಜನ ಬಂದು ಸೇರುತ್ತಲೇ ಇದ್ದರು. ವೇಲನ್ ತನ್ನ ಜೊತೆಯವರೊಡನೆ ಸ್ವಾಮೀಜಿಯ ಹತ್ತಿರವೇ ನಿಂತು ಅಲ್ಲಿಗೆ ಯಾರೂ ಬರದಹಾಗೆ ನೋಡಿಕೊಂಡಿದ್ದನು.

“ ಗಾಳಿ ಬೇಕು ಗಾಳಿ. ಅವರಿಗೆ ಈಗ ಅದೇ ಆಹಾರ. ಅಡ್ಡವಾಗಿ ನಿಂತುಕೋಬೇಡಿ. ನಾಳೆ ಬೆಳಿಗ್ಗೆ ನದಿಯ ಹತ್ತಿರ ಅವರ ದರ್ಶನ ಪಡೆಯ-ಬಹುದು. ಇಲ್ಲಿಂದ ಹೊರಟುಹೋಗಿ....ದಯವಿಟ್ಟು ಹೊರಟುಹೋಗಿ....” ಅಲ್ಲೆಲ್ಲಾ ನೂರಾರು ರೀತಿಯ ನೆಳಲು-ಬೆಳಕುಗಳು ತಾಂಡವವಾಡತೊಡ-

ಗಿದವು.

ಮುಂಜಾನೆ ಐದೂವರೆ ಘಂಟೆಗೆ ವೈದ್ಯರು ಸ್ವಾಮೀಜಿಯನ್ನು ಪರೀಕ್ಷಿಸಿದರು....ಕೂಡಲೇ ಹೊರಟಿತು ಪ್ರಕಟನೆ.

"ಸ್ವಾಮೀಜಿಯವರ ಸ್ಥಿತಿ ಚಿಂತಾಜನಕ........ಗ್ಲೂಕೋಸ್ ನೀರೂ ಸಹ ವೈಗೆ ಹತ್ತುತ್ತಿಲ್ಲ. ಕೂಡಲೇ ಉಪವಾಸವನ್ನು ನಿಲ್ಲಿಸಬೇಕು. ಮುಂದಿನ ಯೋಜನೆ ತಿಳಿಸಿ." ತಂತಿ ನಿಮಿಷದಲ್ಲಿ ಸರಕಾರಕ್ಕೆ ತಲುಪಿತು. ಒಂದು ಘಂಟೆಯೊಳಗೆ ಉತ್ತರವೂ ಬಂದಿತು.

"ಸ್ವಾಮೀಜಿಯವರು ಉಳಿಯಲೇಬೇಕು. ಉಪವಾಸ ನಿಲ್ಲಿಸೋ ಹಾಗೆ ಒತ್ತಾಯಪಡಿಸಿ. ದೇಹಕ್ಕೆ ಅಪಾಯವಾಗಬಾರದು. ಗ್ಲೂಕೋಸ್, ಸೆಲೈನ್ ಮತ್ತೆ ಕೊಟ್ಟುನೋಡಿ. ಆಮೇಲೆ ಬೇಕಾದರೆ ಮತ್ತೆ ಉಪವಾಸ ಆರಂಭಿಸಬಹುದು."

ಸರಕಾರದ ತಂತಿ ಸಮಾಚಾರವನ್ನು ಸ್ವಾಮೀಜಿಯವರಿಗೆ ತಿಳಿಸಿದ್ದಾಯಿತು. ಅದನ್ನು ಕೇಳಿ ರಾಜು ಸುಮ್ಮನೆ ನಕ್ಕುಬಿಟ್ಟು ವೇಲನ್‌ನನ್ನು ಹತ್ತಿರ ಕರೆದನು.

ವೈದ್ಯರು ವೇಲನ್‌ನನ್ನು ಬೇಡಿದರು "ಸ್ವಾಮೀಜಿಯವರಿಗೆ ಹೇಳಿ, ದೇಹಕ್ಕೆ ತುಂಬ ಅಪಾಯ........ಈಗ ಅವರು ಏನಾದರೂ ಆಹಾರ ತಗೊಳ್ಳಲೇಬೇಕು."

ವೇಲನ್ ಸ್ವಾಮೀಜಿಯವರ ಹತ್ತಿರ ಹೋಗಿ ಕಿವಿಯಲ್ಲಿ—

"ಗುರುವೇ........ಡಾಕ್ಟರರು ಹೇಳುತ್ತಾರೆ........"

ಅವನ ಮಾತನ್ನು ಮುಂದುವರಿಸಲು ಬಿಡದೆ ರಾಜು ಅವನನ್ನು ಹತ್ತಿರ ಎಳೆದುಕೊಂಡು—

"ನನ್ನನ್ನು ಎಬ್ಬಿಸು" ಎಂದು ವೇಲನ್‌ನ ತೋಳು ಹಿಡಿದುಕೊಂಡು ತಾನೇ ಮೇಲೆದ್ದನು. ಒಂದು ಕಡೆ ವೇಲನ್, ಇನ್ನೊಂದು ಕಡೆ ಬೇರೆಯವನೊಬ್ಬ ಅವರನ್ನು ಹಿಡಿದುಕೊಂಡರು. ರುದ್ರಮೌನವಾವರಿಸಿತು. ಜನರೆಲ್ಲ ಅವರನ್ನು ಹಿಂಬಾಲಿಸಿದರು. ಪೂರ್ವದಲ್ಲಿ ಬಾನು ಕೆಂಪಾಗತೊಡಗಿತ್ತು. ಕೆಲವರು ಇನ್ನೂ ಮಲಗಿದ್ದರು. ರಾಜುವಿಗೆ ತಡೆಯಲಾಗಲಿಲ್ಲ. ಆದರೂ ಅವರಿಬ್ಬರ ತೋಳಿನಾಸರೆಯಲ್ಲಿ ಕಾಲೆಳೆದುಕೊಂಡು ಹೊರಟನು. ಮೇಲು-

ಸಿರು ಬರುತ್ತಿತ್ತು. ನದಿಯ ಮೆಟ್ಟಿಲಿಳಿದು ಹೋದರು. ಕೊನೆಯ ಮೆಟ್ಟಿಲು ಮುಗಿದು ನದಿಯ ನೀರು ಸಿಕ್ಕಿತು. ರಾಜು ಅಲ್ಲಿ ನಿಂತು ಪೂರ್ವಕ್ಕೆ ತಿರುಗಿ ಕಣ್ಣುಮುಚ್ಚಿದನು. ಪ್ರಾರ್ಥನೆ ತಾನೇ ತಾನಾಗಿ ಹೊರಬಂದಿತು. ಸೂರ್ಯ ಮೆಲ್ಲಗೆ ಮೇಲೇರುತ್ತಿದ್ದನು. ಸೂರ್ಯನ ಕಾಂತಿಯಲ್ಲಿ ನದಿಯ ತೀರ ಹೊಂಬಣ್ಣವಾಗಿತ್ತು. ಕೆಳಕ್ಕೆ ಕುಸಿಯುತ್ತಿದ್ದ ರಾಜುವನ್ನು ಹಿಡಿಯುವುದು ಸುಲಭದ ಕೆಲಸವಾಗಿರಲಿಲ್ಲ. ರಾಜು ಕಣ್ಣುತೆರೆದು ಸುತ್ತಲೂ ನೋಡಿದನು.

"ವೇಲನ್....ಅಗೋ ಅಲ್ಲಿ ಬೆಟ್ಟದ ಮೇಲೆ ಮಳೆ ಹುಯ್ಯುತಿದೆ.... ನನ್ನ ಕಾಲಿನ ಕೆಳಗೆ ಹೊಸ ನೀರು ಹರಿದುಬರುತ್ತಿದೆ....ಅಗೋ....ಅಗೋ...."

ರಾಜುವಿನ ದೇಹ ನದಿಯೊಳಗೆ ಕುಸಿದುಹೋಯಿತು.

